ಕುಸುಮ ೧.

ಪ್ರಾತಿನಿಧಿಕ ಕಥಾ ಸಂಗ್ರಹ

# 'ಹೂದೋಟ'

## (ಭಾಗ ೧)

ಟಿ. ಶ್ರೀಪತಿ
"ಕೃಷ್ಣ ವಿಹಾರ"
ಕದ್ರಿ ದೇವಸ್ಥಾನದ ರಸ್ತೆ,
ಬಿಜಯಿ, ಮಂಗಳೂರು

ಬೆಲೆ ರೂ. 3-8-0.

ಸಂಪಾದಕ ಮತ್ತು ಪ್ರಕಾಶಕ:
**ಟಿ. ಶ್ರೀಪತಿ**
"ಕೃಷ್ಣ ವಿಹಾರ"
ಕದ್ರಿ ಟೆಂಪಲ್ ರೋಡ್
ಬಿ: ಯಿ, ಮಂಗಳೂರು

## ಹೂದೋಟ ಭಾಗ ೨

ಶ್ರೀಗಳಾದ ಗೊರೂರು ರಾಮಸ್ವಾಮಿ ಅಯ್ಯಂಗಾರು, ಪ್ರಿನ್ಸಿಪಾಲ್ ಕೃಷ್ಣಕುಮಾರ್, ವರಗಿರಿಮಾರ್ತಂಡರಾವ್, ಬಿ. ಎಚ್ ಶ್ರೀಧರ, ಜಿ. ವರದರಾಜರಾವ್, ಎಸ್. ಕೆ. ಐರಣಿ, ಅರ್ಚಿಕ ವೆಂಕಟೇಶ, ಶ್ರೀಮತಿ ಸರಸ್ವತಿ ಬಾಯಿ ರಾಜವಾಡೆ, ಮೊದಲಾದವರ ಕತೆಗಳಿಂದ ಕೂಡಿದ್ದು ಸದ್ಯದಲ್ಲೇ ಪ್ರಕಟವಾಗಲಿದೆ.

ಮುದ್ರಕರು:
ಕೆನರಾ ಛಾಪಖಾನೆ, ಮಂಗಳೂರು
PIC No. 37—24—1—48—1000
for Sri T Sripathi,
T P No 558—25—9—47

# ಮುಮ್ಮಾತು

ನಮ್ಮ ಜನರ ಚಿತ್ತವಿಕಸನ ಹಾಗೂ ಸಂಸ್ಕರಣಕಾರ್ಯ ಚೆನ್ನಾಗಿ ಆಗಬೇಕಾದರೆ, ಕನ್ನಡ ಸಾಹಿತ್ಯ ಎಲ್ಲ ಕ್ಷೇತ್ರದಲ್ಲಿಯೂ ಎಲ್ಲ ಮೂಲೆಗಳಲ್ಲಿಯೂ ಬೆಳೆದುಬರಬೇಕು. ಈ ದೃಷ್ಟಿಯಿಂದ ನಾವು ಕೆಲವು ಒಳ್ಳೊಳ್ಳೆಯ ಪುಸ್ತಗಳನ್ನು ನಮ್ಮ ಜಿಲ್ಲೆಯಿಂದ ಪ್ರಕಟಿಸಿ ನಾಡಿಗೆ ನೀಡಬೇಕು ಎಂದು ಸಂಕಲ್ಪಿಸಿದೆವು. ಆದರೆ ಕಾಗದದ ತೀವ್ರವಾದ ಅಭಾವ, ಸರಕಾರದವರ ನಿಯಂತ್ರಣ ಇವುಗಳ ಗೊಂದಲದಲ್ಲಿ ನಮ್ಮ ಆಸೆಯು ಹಾದಿಯಲ್ಲಿ ಬಂಡೆಯಾಗಿ ಕುಳಿತಿರುವುದರಿಂದ, ಬಯಸಿದ ಪುಸ್ತಕಗಳನ್ನು—ಬಯಸಿದ ಕಾಲಕ್ಕೆ—ಬಯಸಿದ ರೀತಿಯಲ್ಲಿ ಪ್ರಕಟಿಸಲು ಸಾಧ್ಯವಿಲ್ಲವಾಗಿದೆ. ಹೀಗಾಗಿ, ಈ ಪುಸ್ತಕವೂ ಕೊಂಚ ವಿಲಂಬವಾಗಿಯೇ ಪ್ರಕಟಿಸಬೇಕಾಯಿತು.

೧೯೪೭ನೆಯ ಕನ್ನಡ ಕಥಾತಂತ್ರದ ಮಾನದಂಡವಾಗುವಂತೆ ಕನ್ನಡದ ಎಲ್ಲ ಕತೆಗಾರರ ಅಪ್ರಕಟಿತ ಕತೆಗಳನ್ನು ಸಂಗ್ರಹಿಸಿ ಪ್ರಕಟಿಸಬೇಕೆಂಬುದು ನಮ್ಮ ಬಯಕೆಯಾಗಿತ್ತು. ಆದರೆ ಈ ಪುಸ್ತಕವನ್ನು ಒಂದು ಮಿತಿಯ ಪುಟಗಳಲ್ಲಿ ಪ್ರಕಟಿಸಲು ಮಾತ್ರ ನಮಗೆ ಕಾಗದ ದೊರೆತುದರಿಂದ, ಕೆಲವೇ ಕತೆಗಳನ್ನು ಇಲ್ಲಿ ಶೇಖರಿಸಿ, ಒಂದನೆಯ ಭಾಗವೆಂದು ಸಂಕೇತಿಸಿ ಪ್ರಕಟವಾಗಬೇಕಾಯಿತು. ನಮ್ಮ ಉಳಿದ ಇತರ ಕತೆಗಳನ್ನು ಇದರ ದ್ವಿತೀಯ ಭಾಗವೆಂದು ಶೀಘ್ರದಲ್ಲಿಯೇ ಪ್ರಕಟಿಸಲಿದ್ದೇವೆ.

ಈ ಪುಸ್ತಕ ಪ್ರಕಟವಾಗಲು ನಮ್ಮ ಮಿತ್ರರನೇಕರು ನೆರವಾಗಿದ್ದಾರೆ. ಎಲ್ಲಕ್ಕೂ ಹೆಚ್ಚಾಗಿ, ನನ್ಮಾನ್ಯ ಲೇಖಕರು ತಮ್ಮ ಅಮೂಲ್ಯ ಕತೆಗಳನ್ನು ಇತ್ತು ಸಹಕರಿಸಿದ್ದಾರೆ. ಇವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ಕೃತಜ್ಞತೆ ಸಲ್ಲಬೇಕು.

ಕನ್ನಡಿಗರು ಈ ಪುಸ್ತಕವನ್ನು ವಿಶ್ವಾಸದಿಂದ ಬರಮಾಡಿಕೊಂಡು ನಮ್ಮ ಈ ಕಾರ್ಯದಲ್ಲಿ ನಮಗೆ ಬೇಕಾದ ಉತ್ಸಾಹವನ್ನು ಕೊಡುವರೆಂದು ನಂಬಿಕೆ.

"ಕೃಷ್ಣವಿಹಾರ"
ಮಂಗಳೂರು,
೨೫-೧-'೪೮.

**ಟಿ. ಶ್ರೀಪತಿ,**
ಸಂಪಾದಕ — ಪ್ರಕಾಶಕ.

# ಸೂಚಿ

# ಹೂದೋಟ

# ವಿಜ್ಞಾನದ ಕೂಸು

[ಶ್ರೀ। ಸದಾನಂದ ನಾಯಕ್, ಎಂ ಎ., ಬಿ ಟಿ, ಸೋಲಾಪುರ]

ನಾಡಹಬ್ಬದ ವಿವಿಧ-ಕಾರ್ಯಕ್ರಮಗಳು ಈ ಸಲ ಬಹಳೇ ಸೊಗಸಾಗಿ ಸಾಗಿದ್ದುವು. ಅದಕ್ಕೆ ಮುಖ್ಯ ಕಾರಣವೆಂದರೆ, ಮಹಿಲಾವಿಭಾಗವೊಂದು ಹೊಸದಾಗಿ ಏರ್ಪಾಡಾಗಿ, ಊರೊಳಗಿನ ಹೆಣ್ಣುಮಕ್ಕಳಿಗೆಲ್ಲ ಹೊಸ ಹುರುಪ ನ್ನುಂಟುಮಾಡಿದುದು. ಮಹಿಲಾವಿದ್ಯಾಲಯದ ಮುಖ್ಯಾಧ್ಯಾಪಿಕೆಯರಾದ ಸುಲೋಚನಾದೇವಿಯವರೇ ಅದರ ಸೂತ್ರಧಾರಕರಾಗಿದ್ದರು.

ಹೆಣ್ಣುಮಕ್ಕಳಿಗೆಲ್ಲ ಇಂದು ಒಂದು ಹಿರಿಯ ಹಬ್ಬ. ಮಹಿಲಾವಿಭಾಗದ ಪ್ರದರ್ಶನಶಾಖೆಯ ಅಂಗವಾಗಿ ಚಿಕ್ಕ ಮಕ್ಕಳ ಕೂಟವೊಂದನ್ನು ಕಾರ್ಯ ದರ್ಶಿಗಳು ರಚಿಸಿದ್ದರು ಅದನ್ನು ನೋಡಲು ಹೆಂಗಸರೂ, ಹುಡುಗಿಯರೂ ಕಿಕ್ಕಿರಿದು ನೆರೆದಿದ್ದರು. ಪ್ರದರ್ಶನದ ಪ್ರಾರಂಭೋತ್ಸವವನ್ನು ಮಾಡಲು ಸುಲೋಚನಾದೇವಿಯವರನ್ನೇ ಕೇಳಿಕೊಳ್ಳಲಾಗಿತ್ತು.

ಪ್ರದರ್ಶನದ ಪೂರ್ವರಂಗವಾಗಿ, ಬೆಂಗಳೂರಿನಿಂದ ಆಮಂತ್ರಿತರಾಗಿ ಬಂದ ಕನ್ನಡ ಪ್ರಾಧ್ಯಾಪಿಕೆಯೊಬ್ಬರು 'ಹದಿಬದೆಯ ಧರ್ಮ'ವನ್ನು ಕುರಿತು ವ್ಯಾಖ್ಯಾನವನ್ನು ಕೊಡುವವರಿದ್ದರು. ಆ ಸಭೆಗೂ ಸುಲೋಚನಾದೇವಿ ಯವರೇ ಅಧ್ಯಕ್ಷಿಣಿಯರು. ಅಂದಮೇಲೆ ಕೇಳುವುದೇನು? ಸುಲೋಚನಾ ದೇವಿಯ ಮಾತುಗಾರಿಕೆಗೆ ಮೈಸೋತ ಸ್ತ್ರೀಸಮೂಹವು ಅಂದು ಸಭಾಗೃಹ ದಲ್ಲಿ ಉಸಿರಾಡಿಸಲಿಕ್ಕೂ ಎಡೆಗೊಡದಂತೆ ತುಂಬಿಬಿಟ್ಟಿತ್ತು.

"ಸುಲೋಚನಾದೇವಿ, ಎಷ್ಟು ಜಾಣ್ಯಾಳು ಆಕಿ! ಎಷ್ಟು ಕಲತಾಳೋ . . . . ?" ಕುತೂಹಲದಿಂದ ಕೇಳಿದಳು ಒಬ್ಬಳು.

"ಯುರೋಪ—ಅಮೇರಿಕಾ ಎಲ್ಲಾನೂ ತಿರುಗಿ ಬಂದಾಳ! ತನ್ನ ವಿದ್ಯೆಯಿಂದ ಜಗತ್ತನ್ನೇ ದಂಗುಬಡಿಸ್ಯಾಳ ಆಕಿ!!" ಮಾರುತ್ತರವಿತ್ತಳು ಮತ್ತೊಬ್ಬಳು.

"ಸ್ತ್ರೀಯರ ಉನ್ನತಿಯೆಂದರೆ ಅವಳಿಗೆಷ್ಟು ಪ್ರೀತಿ! ಅವಳಿಂದಲೇ ನಮ್ಮೆಲ್ಲರ ಉದ್ಧಾರವಾಗಬೇಕು ನೋಡವ್ವಾ" ಬಳಿಯ ಪದವೀಧರಳೊಬ್ಬಳು ಆಸ್ಥೆಯಿಂದ ಉಸುರಿದಳು.

ಇಂಥ ಅನೇಕ ಹೇಳಿಕೆ-ಕೇಳಿಕೆಗಳಿಂದ ಸಭಾಗೃಹವೆಲ್ಲ ಒಂದು ಸಂತೆಯಂತಾಗಿತ್ತು. ಸುಲೋಚನಾದೇವಿಯವರು ಅಂದಿನ ವ್ಯಾಖ್ಯಾತೆಯರೊಡನೆ ಅಷ್ಟು ಹೊತ್ತಿಗೆ ಸರಿಯಾಗಿ ಬಾರದಿದ್ದರೆ, ಅಲ್ಲಿಯ ಕೋಲಾಹಲವನ್ನು ನಿಲ್ಲಿಸುವುದೇ ಕಷ್ಟವಾಗುತ್ತಿತ್ತು.

ಸುಲೋಚನಾದೇವಿ ವ್ಯಾಸಪೀಠದ ಮೇಲೆ ಕಾಲಿಟ್ಟೊಡನೆ, ಅವಳನ್ನು ನೋಡುತ್ತ, ಸಭೆಯು ಚಪ್ಪಾಳೆ ಕರತಾಡನವಮಾಡುವುದನ್ನೂ ಮರೆತುಬಿಟ್ಟಿತು. ದೇವಿಯವರು ಔಪಚಾರಿಕವಾಗಿ ಸಭೆಗೆ ವ್ಯಾಖ್ಯಾತೆಯರ ಪರಿಚಯವನ್ನು ಮಾಡಿಕೊಟ್ಟು, ಅವರಿಗೆ ತಮ್ಮ ವ್ಯಾಖ್ಯಾನವನ್ನು ಪ್ರಾರಂಭಿಸಲು ಬಿನ್ನವಿಸಿಕೊಂಡರು. ಹಾಗು ತಾವು ಅಧ್ಯಕ್ಷಸ್ಥಾನದಲ್ಲಿ ಅಲಂಕೃತರಾದರು.

x x x

ಎರಡು ತಾಸುಗಳ ವರೆಗೆ ವ್ಯಾಖ್ಯಾತೆಯರು ಸ್ತ್ರೀಯರ ಆದರ್ಶ, ಹದಿಬದೆಯ ಧರ್ಮದ ಮಹತ್ವ, ಆರ್ಯಸಂಸ್ಕೃತಿಯ ಶ್ರೇಷ್ಠತೆಗಳನ್ನು ಕುರಿತು ಸುಶ್ರಾವ್ಯವಾಗಿ ಭಾಷಣಮಾಡಿದರು. ಆದರೆ ಸಭಿಕರಿಗೆ ಅವುಗಳಿಗೆಲ್ಲ ಕಿವಿಗೊಟ್ಟು ಕೇಳಿ ತಿಳಿದುಕೊಳ್ಳುವ ತಾಳ್ಮೆಯೆಲ್ಲಿ? ಕೆಲವರು ಏಕಾಗ್ರತೆ ನಿದ್ರೆಯಲ್ಲಿ ಪರಿಣಮಿಸಿದರೆ, ಕೆಲವರಂತೂ ಮಕ್ಕಳಾಡಿಸುತ್ತಿದ್ದರು. ಮತ್ತೆ ಕೆಲವರು ಹೊತ್ತುಹೋಗದೆ, ಮನೆಮಾತುಗಳಲ್ಲಿ ಮಗ್ನರಾಗಿದ್ದರು. ಅವರಿಗೆ ಆ ಗೊಡ್ಡುಪುರಾಣ ಬೇಕಾಗಿರಲಿಲ್ಲ. ಸುಲೋಚನಾದೇವಿಯ ಅಧ್ಯಕ್ಷಭಾಷಣವನ್ನು ಆಲಿಸುವ ವೇಳೆ ಬಂದಾಗ, ನೋಡೋಣವೆಂದು ತಮ್ಮ ಆಲಾಪಗಳಲ್ಲಿಯೇ ಅವರು ಮೈಮರೆತಿದ್ದರು.

"ಸುಳ್ಳು, ಗೊಡ್ಡು, ಹದಿಬದೆಯ ಧರ್ಮವೆಂದರೆ ದಾಸ್ಯತ್ವದ ಪರಮಾವಧಿ" ಎಂದು ಅರಚಿಕೊಂಡು ಅಧ್ಯಕ್ಷಿಣಿಯು ತನ್ನ ಭಾಷಣಕ್ಕೆ ಬಾಯಿ ತೆರೆದಾಗ ಸಭಿಕರೆಲ್ಲ ಗಕ್ಕನೆ ಎಚ್ಚತ್ತು ಚೆಪ್ಪಾಗಿ ಕುಳಿತರು.

"ಗಂಡಸರೆಂದರೆ ಅಧಮರು, ಧೂರ್ತರು, ಕಾರ್ಯಸಾಧಕರು; ಧರ್ಮವೆಂಬುದೊಂದು ಮೋಸ; ಈ ಮೋಸದ ಬಲೆಯಲ್ಲಿ ಏನೂ ಅರಿಯದ ಅಬಲೆಯರನ್ನು ಸಿಲುಕಿಸಿ ಅವರನ್ನು ಕೊಲ್ಲುತ್ತಿರುವರು. ಪುರುಷರು ತಮ್ಮ

ಪ್ರಾಬಲ್ಯಕ್ಕಾಗಿ ಏರ್ಪಡಿಸಿದ ಉಪಾಯವಿದು . . . ಇಲ್ಲ, ಪಾತಿವ್ರತ್ಯವೇ
ದೊಂದು ಪಾರತಂತ್ರ್ಯ. ಆಧುನಿಕ ಸುಶಿಕ್ಷಿತೆಯರು ಅದನ್ನು ಒಪ್ಪಲಾರರ
ಪುರುಷರಿಗೆ ತಮ್ಮ ಸ್ವಾತಂತ್ರ್ಯವನ್ನು ಮಾರಿಬಿಟ್ಟು, ಅವರ ಕೈಗೊಂಬೆಗಳಾ
ಲಾರರು. ಅವರ ಗುಲಾಮರೆಂದು ಮೆರೆಯಲಾರರು. ಈ ಅಧೋಗ
ಯನ್ನು ತಪ್ಪಿಸಿ, ಅವರ ಮೋಸ, ಅಧಿಕಾರ, ಪ್ರಾಬಲ್ಯಗಳಿಂದ ಸ್ವತಂತ್ರವಾ
ಸ್ತ್ರೀಸಮಾಜವನ್ನು ಹೊಸದಾಗಿ ನಿರ್ಮಿಸಬೇಕಾಗಿದೆ. ಸ್ವಕಾರ್ಯಸಾಧ
ರಾದ ಪುರುಷವರ್ಗದ ಯಾವ ಸಂಸರ್ಗವೂ ಅದಕ್ಕೆ ಇರಕೂಡದು . . ."

"ಹಾಗಾದರೆ ಸ್ತ್ರೀಗೆ ಮಾತೆಯಾಗುವ ಅಧಿಕಾರವು ಹೇಗೆ ಪ್ರಾಪ್ತವಾ
ಬೇಕು?" ಒತ್ತರದಿಂದ ಸಾಗಿದ ಅಧ್ಯಕ್ಷಿಣಿಯ ಭಾಷಣವನ್ನು ಲೆಕ್ಕಿಸದೆ
ಸಭಾಗೃಹದ ಮಧ್ಯದೊಳಗಿಂದ ಒಬ್ಬ ಗರ್ಭಿಣಿಯು ಗರ್ಜಿಸಿದಳು.

"ಹೌದು, ಅಂಥ ಅಧಿಕಾರ ಬೇಕಾದವರು ಗುಲಾಮರಾಗಿ ಬಾಳಲಿ .
. . . ವ್ಯಭಿಚಾರಿಗಳಾಗಲಿ; ನಮಗದರ ಪರಿವೆಯಿಲ್ಲ. ಸಂಸಾರದ ಕಾರಖಾನ
ಗಳಲ್ಲಿ ಅವರೊಂದೊಂದು ಹೆರಿಗೆಯ ಯಂತ್ರಗಳಾಗಿ ಬಾಳಬಹುದು
ಮಾತೆ . . . . . ಹೌದು, ಮಾತೆಯಾಗುವುದೊಂದು ನಾಚಿಕೆಯ ಲಕ್ಷಣ
ನಾಚಿಕೆಗೇಡಿಗಳೇ ಇನ್ನುಮುಂದೆ ಮಾತೆಯರಾಗಬೇಕು . . . . "

"ಅಧ್ಯಕ್ಷಿಣಿಯರೇ, ಇದೀಗಲೇ ನೀವು ಮಕ್ಕಳಕೂಟದ ಪ್ರಾರಂಭೋ
ತ್ಸವವನ್ನು ಮಾಡಲಿರುವಿರಿ. ಉತ್ತಮ ಮಕ್ಕಳನ್ನು ಪಡೆದವರಿಗೆ ಬಹುಮಾನ
ವಾಗಿ ಸುವರ್ಣಪದಕಗಳನ್ನು ಕೊಡಲಿರುವಿರಿ. ಆ ಮಾತೆಯರೇನು ನಾಚಿಕೆ
ಗೇಡಿತನದ ಶಿಖರವೆಂದೋ, ವ್ಯಭಿಚಾರದ ಶಿಖಾಮಣಿಗಳೆಂದೋ . . . . . "
ನಡುವೇ ಒಂದು ಧ್ವನಿ ಗುಡುಗಿತು.

"ಹೆಣ್ಣಿನ ಹೃದಯ, ಮಾತೆಯ ಮಮತೆ, ಸೃಷ್ಟಿಯ ಕಾರ್ಯ . . . .
ಇವುಗಳ ಸ್ಥಾನವಾದರೂ ಯಾವುದು ಸ್ತ್ರೀಜೀವನದಲ್ಲಿ?" ಮತ್ತೊಂದು ಧ್ವನಿ
ಸಿಡಿಲಿನಂತೆ ಮಿಂಚಿತು.

ಎಲ್ಲ ಕಡೆಯಿಂದಲೂ ಪ್ರಶ್ನೆಗಳ ಸುರಿಮಳೆಯುಂಟಾಯಿತು. ಸುಲೋ
ಚನಾದೇವಿ ಏನೇನೋ ಉತ್ತರಿಸಲು ಹವಣಿಸಿದಳು. ಆದರೆ ಸಭಿಕರ
ಕೋಲಾಹಲದಿಂದ ಸಭೆಯನ್ನು ಸಾಗಿಸುವುದು ಸಾಧ್ಯವಾಗದೇ ಹೋಯಿತು.
ಅವಮಾನಿತಳಾಗಿ ನೆಟ್ಟಗೆ ಅವಳು ಅಲ್ಲಿಂದ ಹೊರಟುಹೋಗಿಬಿಟ್ಟಳು.

x x x x

"ಹೆಣ್ಣಿನ ಹೃದಯ, ಮಾತೆಯ ಮಮತೆ, ಸೃಷ್ಟಿಯ ಕಾರ್ಯ . . ."

ಸುಲೋಚನಾದೇವಿಗೆ ಅಂದು ರಾತ್ರೆ ನಿದ್ರೆಯೇ ಬರಲಿಲ್ಲ ರಾತ್ರೆಯೆಲ್ಲ ಅದೇ ವಿಚಾರ ಅವಳ ಮನಸ್ಸಿನಲ್ಲಿ; ತಾನು ಭಾಷಣದಲ್ಲಿ ಘೋಷಿಸಿದಂತೆ ಹೊಸದೊಂದು ಸ್ತ್ರೀಸಮಾಜವನ್ನು ಕಟ್ಟಬೇಕು; ಪುರುಷರ ಸಂಪರ್ಕವು ಆ ಸಮಾಜಕ್ಕೆ ಎಂದೆಂದಿಗೂ ಬರಕೂಡದು . . . . .

ಆಕೆಯ ಹೆಣ್ಣುಹೃದಯದ ಸೆಳವು ಎಂದೋ ಹರಿಗಡಿದಿತ್ತು ಅದರ ತೇವು ಯಾರ ನೀರಡಿಕೆಗೂ ನಿಲುಕದಂತಾಗಿತ್ತು ಹಾಗೆಂದರೆ ಅವಳ ಸೌಂದರ್ಯ, ಸಂಪನ್ನತೆ, ಸಂಸ್ಕೃತಿ ಇವುಗಳ ತೇಜಸ್ಸು ಯಾರ ಕಣ್ಣನ್ನೂ ಕುಕ್ಕದೆ ಬಿಡುತ್ತಿದ್ದಿಲ್ಲ ಯೌವನದ ಅರುಣೋದಯದ ಕಾಲಕ್ಕೆಂದೇ ಅವಳು ಕೊಲೇಜ ಜೀವನದಲ್ಲಿ ಅಡಿಯಿಟ್ಟಿದ್ದಳು. ವಿದ್ಯಾವಿಭೂಷಿತಳಾಗುವುದು ಅದರ ಒಂದು ಉದ್ದೇಶವಾಗಿದ್ದರೆ, ಸಂಪನ್ನನಾದ ಗಂಡನನ್ನು ದೊರಕಿಸುವುದೂ ಅದರ ಮತ್ತೊಂದು ಉದ್ದೇಶವಾಗಿದ್ದಿತು. ಅವಳ ತಂದೆ ಅದನ್ನೇ ಎಣಿಸಿದ್ದ. ಅವಳಿಗೂ ಅಲ್ಲಿಯ ಸ್ವಚ್ಛಂದ ವಾತಾವರಣ ಮೆಚ್ಚುಗೆಯಾಯಿತು. ಹಲವರು ಅವಳಿಗೆ ಮೆಚ್ಚಿದರು; ಆರಾಧಿಸಿದರು. ಅವಳೊಂದು ಆಗ ಮೂರ್ತಿಮಂತ ಪ್ರೇಮದೇವತೆಯಾದಳು ಅವಳ ಪ್ರೀತಿಯ ಬಳ್ಳಿ ಕುಡಿವರಿದು ದಿಕ್ಕು ದಿಕ್ಕಿಗೆ ಹಬ್ಬಿತು. ಆದರೆ . . . . ಸಮಾಜದ ವಿಷಮತೆ— ಜಾತಿ, ಮತ, ಹಕ್ಕು, ಅಹಂಕಾರಗಳ ದುರಭಿಮಾನ . . . ಒಂದೇ, ಎರಡೇ?— ಆ ಬಳ್ಳಿ ಎಷ್ಟು ಹಬ್ಬಿದರೂ ಅದಕ್ಕೆ ಹೂಬಿಡಲಿಲ್ಲ. ಆರಾಧಕರಾರೂ ಆಕೆಯ ಕೈಹಿಡಿಯಲಿಲ್ಲ. ಆಗ ಅವಳ ಮನಸ್ಸಿನ ಮೇಲಾದ ಆಘಾತಗಳಿಂದ ಅದೊಂದು ವೈರಾಗ್ಯದ ತವರುಮನೆಯಾಯಿತು. ಬಾಳು ಬೇಸರವಾಯಿತು. ಅವಳಿಗೀಗ ನೆರವಾಗಿ ಬಂದಿದ್ದುದು ಅರೆಮನಸ್ಸಿನಿಂದ ಸಾಗಿಸಿದ ವಿದ್ಯಾಭ್ಯಾಸವೊಂದೇ !

ತಂದೆ ಆರಿಸಿದ ಯಾವ ವರನೂ ಅವಳ ಮನಸ್ಸನ್ನು ವರಿಸಲಿಲ್ಲ. ಪ್ರೇಮವು ಅವಳ ಅಭಿಮಾನಕ್ಕೆ ಆಘಾತವನ್ನುಂಟುಮಾಡಿತ್ತು. ಅವಳ ನೊಂದ ಮನಸ್ಸು ಆ ಕೋಮಲವಾದ ಭಾವನೆಯನ್ನು ಹೃದಯದಿಂದ ಎಂದೋ ಕಿತ್ತು ಬಿಸುಡಿತು. ಆಂಗ್ಲ ಸಾಹಿತ್ಯವು ಸಮಾನ ಹಕ್ಕಿನ ಮಂತ್ರವನ್ನು ಕಿವಿಯಲ್ಲಿ ಊದಿದಾಗಂತೂ ಅವಳ ಧೈರ್ಯ ಬಲಿಯಿತು. ಎದೆಗಟ್ಟಿಯಾಯಿತು. ಹಿಂದಿನ ಪ್ರೇಮದ ಕೊರಡು ಕೊಸರಿ ಈಗ ದ್ವೇಷದ ಹೂ

ಬಿಟ್ಟಿತು. ಪುರುಷರೆಂದರೆ ಅವಳ ಮನಸ್ಸಿನಲ್ಲಿ ತಿರಸ್ಕಾರವುಂಟಾಯಿತು. ಅವರ ಕಣ್ಣೊಳಗಿನ ಕಾರುಣ್ಯಕ್ಕಿಂತ ಹುಬ್ಬಿನೊಳಗಿನ ಭೀಕರತೆಯೂ ಅವಳೆದೆಯಲ್ಲಿ ನಟ್ಟಿನಿಂತಿತು. ಅವರನ್ನು ಕಣ್ಣೆತ್ತಿ ನೋಡುವುದೂ ಕೂಡ ಅವಳಿಗೀಗ ಬೇಡವಾಯಿತು.

ತಂದೆಗೆ ಅವಳೊಬ್ಬಳೇ ಪ್ರೀತಿಯ ಮಗಳು; ಅವನ ಸಿರಿಸಂಪತ್ತಿನ ಸ್ವಾಮಿನಿ. ಅವಳೇನು ಹಟತೊಟ್ಟರೂ ಅವನೆಂದೂ ಅಡ್ಡಬರಲಿಲ್ಲ. ಮನೆಯಲ್ಲಿಯ ಸ್ವಾತಂತ್ರ್ಯವನ್ನು ಆಗಲೇ ಅವಳು ಸಂಪಾದಿಸಿದ್ದಳು.

ಪದವೀಧರಳಾದ ಮೇಲೆ ಒಂದೆರಡು ವರುಷ ಸಾಗಿದುವು. ಮನೆಯಲ್ಲಿರುವುದೆಂದರೆ ಬೇಸರ. ಯಾರ ಸೇವೆ ಮಾಡುವುದೂ ಅವಳ ಮನಸ್ಸಿಗೆ ಬರಲಿಲ್ಲ. ಇನ್ನೇನು . . . . ? ಉಚ್ಚ ಶಿಕ್ಷಣ— ಯುರೋಪಕ್ಕೆ ತೆರಳಿದಳು. ಅಲ್ಲಿಯ ಶಿಕ್ಷಣಕ್ಕಿಂತಲೂ ಸಾಮಾಜಿಕ ಶಿಕ್ಷೆ ಅವಳ ಮನಸ್ಸನ್ನು ಸೆಳೆಯಿತು. ವಿಶೇಷವಾಗಿ ಸ್ತ್ರೀ ಸ್ವಾತಂತ್ರ್ಯ ಅವಳ ಪ್ರೀತಿಯ ವಿಷಯುವಾಯಿತು. ಸ್ತ್ರೀವಾದದ (Faminism) ಆಂದೋಲನದಲ್ಲಿ ಅವಳು ಆಸ್ಥೆಯಿಂದ ಭಾಗವಹಿಸಿದಳು. ಕೊನೆಗೆ ಅದರ ಕಾರ್ಯದರ್ಶಿನಿಯಾಗಿ ಯುರೋಪು— ಅಮೇರಿಕೆಯ ದೇಶಗಳನ್ನು ಸುತ್ತಿ ಆ ವಾದದ ಸ್ಫೂರ್ತಿದಾಯಕವಾದ ಸಂದೇಶವನ್ನು ಎಲ್ಲ ಕಡೆಯಲ್ಲಿಯೂ ಬೀರಿದಳು. ಸ್ವದೇಶಕ್ಕೆ ಮರಳಿ ಈ ಆಂದೋಲನಕ್ಕಾಗಿಯೇ ತನು-ಮನಗಳನ್ನು ವ್ಯಯಿಸಬೇಕೆಂದು ನಿಶ್ಚಯಿಸಿದಳು. ಕರ್ನಾಟಕವನ್ನೇ ಕೇಂದ್ರವಾಗಿಟ್ಟುಕೊಂಡು ಭಾಷಣ-ಲೇಖನಗಳ ಮೂಲಕ ಏಶಿಯಾ ಖಂಡದಲ್ಲೆಲ್ಲಾ ಅದನ್ನು ಹಬ್ಬಿಸಬೇಕೆಂದು ಟೊಂಕಕಟ್ಟಿದಳು ಅದೊಂದೇ ಅವಳ ಹಂಬಲ, ಹಗಲಿರುಳು ದುಡಿಯುವ ಉದ್ಯೋಗ. ಹಲವಾರು ಮಹಿಳಾ ಸಂಸ್ಥೆಗಳನ್ನು ಸ್ಥಾಪಿಸಿದಳು. ಎಷ್ಟೋ ಸಂಸ್ಥೆಗಳ ಅಧ್ಯಕ್ಷಳಾದಳು. ತರುಣ ಪೀಳಿಗೆಯವರ ಮನಸ್ಸಿನ ಮೇಲೆ ತನ್ನ ತತ್ವಗಳು ಚೆನ್ನಾಗಿ ಒಡಮೂಡಿ ಹೊಸ ಬಗೆಯ ತರುಣಿಯರನ್ನು ನಿರ್ಮಿಸಲೆಂದು ಮಹಿಲಾ ವಿದ್ಯಾಲಯದ ಮುಖ್ಯಾಧ್ಯಾಪಿಕೆಯ ಪದವನ್ನೂ ಸ್ವೀಕರಿಸಿದ್ದಳು.

ಅದೊಂದು ಅವಳ ಮನಸ್ಸಿನ ತಳಮಳ; ಸ್ತ್ರೀಯರ ಸ್ವಾತಂತ್ರ್ಯ, ಅವರ ಉನ್ನತಿ; ದಾಂಪತ್ಯಜೀವನದಿಂದುಂಟಾಗುವ ಅವರ ಅಧಃಪಾತವನ್ನು ತಡೆಯುವುದು; ಶತಮಾನಗಳಿಂದ ಅವರ ಮೇಲೆ ಉಂಟಾಗುತ್ತಿದ್ದ ಅನ್ಯಾಯಕೆ ಪ್ರತೀಕಾರಮಾಡುವುದು. ಅಂತು, ನವಯುಗದ ನವೀನ ವಿಚಾರಗಳ

ಎಡೆಕೊಟ್ಟ ಸುಧಾರಕ ಸ್ತ್ರೀ ಸಮಾಜವನ್ನು ನಿರ್ಮಿಸುವುದೇ ಅವಳ ಧ್ಯೇಯ ವಾಗಿತ್ತು. ಅದಕ್ಕೆ ಅವಳ ನಿರರ್ಗಳವಾದ ಮಾತುಗಾರಿಕೆಯೂ, ದೇಶ ದೇಶಾಂತರಗಳನ್ನು ಬಳಸಿಬಂದ ಅನುಭವವೂ, ಅವುಗಳ ಪ್ರತಿಫಲವಾಗಿ ಅವಳು ನಿರಂತರ ನಡಿಸಿದ ಪ್ರಚಾರವೂ ಒಳ್ಳೆಯ ಸಹಾಯಕವಾಗಿದ್ದುವು. ಅವಳ ಒಂದೊಂದು ವಾಕ್ಯವೂ ಸ್ತ್ರೀವರ್ಗದಲ್ಲಿ ಅಪ್ರತಿಮವಾದ ಚೈತನ್ಯ ವನ್ನುಂಟುಮಾಡುತ್ತಿದ್ದುವು.

ಅವಳ ಈ ಸಮಾಜ ಸೇವೆಯ, ಧ್ಯೇಯದ ಹಿಂದೆ ಪುರುಷ ವರ್ಗದ ವಿಷಯವಾಗಿ ಅಪಾರವಾದ ದ್ವೇಷವು ಅವಳ ನರನಾಡಿಗಳಲ್ಲಿ ತುಂಬಿ ತುಳುಕು ತ್ತಿತ್ತು. ಹರೆಯದ ದಿನಗಳಲ್ಲಿ ಅವಳ ಮನಸ್ಸಿನ ಮೇಲಾದ ಪರಿಣಾಮ ಗಳಂತೂ ಸರಿಯೇ. ಯುರೋಪ ಅಮೇರಿಕೆಗಳಲ್ಲಿಯ ಅವಳ ಜೀವನವು ಮನುಷ್ಯ ಸ್ವಭಾವದ ಪರೀಕ್ಷಣದ ಒಳ್ಳೆಯ ಪ್ರಯೋಗದಂತೆ ಪರಿಣಮಿಸಿತ್ತು. ಈಗಲಾದರೂ ವಯಸ್ಸು ನಾಲ್ವತ್ತಕ್ಕೆ ಮೀರಿದರೂ ಅವಳನ್ನು ಕಾಮಿಸಿ ಪ್ರೇಮಭಿಕ್ಷೆಯನ್ನು ಬೇಡಲು ಬರುವ ಕಾದಲರೇನೂ ಇರಲಿಲ್ಲವೆಂತಲ್ಲ. ಊರೊಳಗಿನ ಕ್ಲಬ್ಬುಗಳೆಷ್ಟೋ ಅವಳನ್ನು ಸುಸ್ವಾಗತಿಸಲು ಸಿದ್ಧವಾಗಿದ್ದುವು. ಆದರೆ ಪುರುಷರ ಯಾವ ಬಗೆಯ ಸಹವಾಸವೂ ಅವಳಿಗೀಗ ಬೇಕೆನಿಸುತ್ತಿದ್ದಿಲ್ಲ. ಮಹಿಲಾ ಸಮಾಜಗಳ ಕಾರ್ಯಕಲಾಪಗಳ ಮುಂದೆ ಬೇರೆ ಯಾವ ಕೆಲಸಕ್ಕೂ ಅವಳಿಗೆ ವೇಳೆಯೂ ಉಳಿಯುತ್ತಿದ್ದಿಲ್ಲ

ಆದರೆ ಅವಳ ಹೆಣ್ಣು ಹೃದಯ ತೀರ ಬತ್ತಿ ಹೋಗಿದ್ದಿತು ಎನ್ನುವಂತೆ ಇರಲಿಲ್ಲ. ಜಗತ್ತಿನ ಸುಖದುಃಖಗಳಿಗೆ ಸಹಾನುಭೂತಿಯಿಂದ ನೋಡುವಷ್ಟು ಮಾರ್ದವವು ಅದರಲ್ಲಿತ್ತು. ಮೇಲಾಗಿ ತನ್ನ ವಿದ್ಯಾಲಯದೊಳಗಿನ ವಿದ್ಯಾ ರ್ಥಿನಿಯರನ್ನೆಲ್ಲ ಅವಳು ತನ್ನ ಹೊಟ್ಟೆಯ ಮಕ್ಕಳಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಅಂದ ಮೇಲೆ ಮಾತೆಯ ಮಮತೆ ಅವಳಲ್ಲಿ ಇದ್ದಿಲ್ಲ ವೆಂದು ಹೇಗೆ ಅನ್ನಬೇಕು ?

ಅವಳಿಗೂ ಇಂದು ಅದೇ ವಿಚಾರ: ಇಂದಿನ ಸಭೆಯಲ್ಲಿ ಮಹಿಳೆಯ ರಿಗೆ ಸಮಾಧಾನಪಡಿಸುವುದಾಗದೆ ಅಪಮಾನಿತನಾದೆನಲ್ಲಾ! ಅವರ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರಗಳನ್ನು ಕೊಡುವುದು ಆಗದೇ ಹೋದರೆ, ಸ್ತ್ರೀ ವರ್ಗದ ಮುಂದಾಳು ಎಂದು ಅವರೆಲ್ಲಿ ತನ್ನನ್ನು ಅನುಸರಿಸಬೇಕು? ಹಾಗು ಸ್ತ್ರೀಯರ ಬೆಂಬಲವೇ ದೊರಕದೇ ಹೋದರೆ, ಸ್ವತಂತ್ರ ಸ್ತ್ರೀವರ್ಗವನ್ನು ಸ್ಥಾಪಿಸಬೇಕೆಂಬ ತನ್ನ ಧ್ಯೇಯ ನೆರವೇರುವುದೆಂತಃ?

ಮತ್ತು ಅವರ ಪ್ರಶ್ನೆ: ಮಾತೆಯಾಗುವ ಅಧಿಕಾರ . . . . ಮಾತೆಯ ಮಮತೆ . . . . ! ಸೃಷ್ಟಿಯ ಕಾರ್ಯವು ಪ್ರಕೃತಿ ಪುರುಷರ ಸಹಕಾರದಿಂದಲೇ ಸಾಗುವುದೇನೋ ನಿಜ. ಆದರೆ . . . . ಸ್ವತಂತ್ರ ಸಮಾಜದ ಸದಸ್ಯರು ಮಗುವಿನ ಭಿಕ್ಷೆಗಾಗಿ ಗಂಡಸರ ಮೋರೆಯ ಕಡೆಗೆ ನೋಡುವುದು ಉಚಿತವಾದೀತೆ? ಹಾಗಾದರೆ, ಅದಕ್ಕೆ ಸ್ವಾತಂತ್ರ್ಯವೆನ್ನುವುದಾದರೂ ಹೇಗೆ?

ವಿಚಾರದ ತೊಳಲಾಟದಲ್ಲಿ ಇಡಿಯ ರಾತ್ರಿ ಅವಳ ನಿದ್ದೆ ಎಲ್ಲಿಯೋ ತೇಲಿ ಹೋಗಿತ್ತು. ಅತ್ತಿತ್ತ ಹೊರಳಾಡುವುದಷ್ಟೇ ಒಂದೇ ಸವನೆ ಸಾಗಿತ್ತು. ಹೆಣ್ಣಿನ ಭಾವ, ಮಕ್ಕಳ ಮಮತೆ, ಸೃಷ್ಟಿಯ ಮೋಹ, ಇವುಗಳ ವಿಷಯವಾಗಿ ವಿಚಾರಮಾಡುತ್ತ ಹೋದಂತೆ, ಭಾವನೆಯ ಉತ್ಕಟತೆಯು ಪ್ರಬಲವಾಗಿ ತಾನೇ ಮಾತೆಯಾಗಬೇಕು ಎಂಬ ಪ್ರವೃತ್ತಿಯು ಮನಸ್ಸಿನ ಯಾವುದೋ ಒಂದು ಮೂಲೆಯಿಂದ ಮೇಲಕ್ಕೆದ್ದು ಬಿಟ್ಟಿತ್ತು. ಅದನ್ನು ತಡೆಗಟ್ಟುವುದು ಅವಳಿಗೇ ಸಾಧ್ಯವಾಗಲಿಲ್ಲ.

ಮತ್ತು ಸ್ವತಂತ್ರ ಸ್ತ್ರೀಯು ಪುರುಷ ಸಹಾಯವಿಲ್ಲದೆ ಮಾತೃಪದವನ್ನು ಸಂಪಾದಿಸಬಹುದಾದರಂತೂ ಅವಳ ಧ್ಯೇಯ ಸಾಧನೆಯು ಸುಲಭ ಸಾಧ್ಯವಾದಂತಾಗಲಿಕ್ಕಿಲ್ಲವೇ ?

x x x x

ಬೆಳಿಗ್ಗೆ ಏಳುವಾಗ ಅವಳ ಮನಸ್ಸು ಒಂದು ನಿರ್ಧಾರಕ್ಕೆ ಬಂದಿತ್ತು. ಅದನ್ನು ಬದಲಿಸುವುದು ಈಗ ಸಾಧ್ಯವಿರಲಿಲ್ಲ. ತಾನು ತಾಯಿಯಾಗಬೇಕೆಂಬ ಭಾವವು ಅವಳ ಹೃದಯವನ್ನು ಭೇದಿಸಿ ನರನರಗಳನ್ನೆಲ್ಲ ವ್ಯಾಪಿಸಿಬಿಟ್ಟಿತ್ತು. ಅಮೇರಿಕೆಗೆ ಹೋದಾಗ ಅಲ್ಲಿ ಹೊಸ ಪ್ರಯೋಗಗಳಿಂದ ನಿರ್ಮಿಸಿದ ನಳಿಗೆಯ ಪಿಳ್ಳೆಗಳನ್ನು (tube babies) ಅವಳು ನೋಡಿದ್ದಳು. ಈ ವಿಜ್ಞಾನದ ಯುಗದಲ್ಲಿ ಅಸಾಧ್ಯವೆಂಬುದು ಯಾವುದು? ಒಂದು ಪ್ರಕಾರದ ಹೊಸ ಮದ್ದಿನ ಚುಚ್ಚುವ ಪ್ರಯೋಗದಿಂದಲೂ ಅದು ಕೈಗೂಡುವುದೆಂದು ಅವಳು ಎಲ್ಲಿಯೋ ಓದಿದ್ದಳು. ತಮ್ಮೂರಿನ ಮೆಡಿಕಲ್ ಕೊಲೇಜಿನ ಪ್ರಯೋಗಶಾಲೆಯಲ್ಲಿಯೂ ಇಂಥ ಹೊಸ ಪ್ರಯೋಗಗಳನ್ನು ಕೈಕೊಂಡಿರುವುದು ಅವಳ ನೆನಪಿಗೆ ಬಂದಿತ್ತು. ಆದುದರಿಂದ ಹಾಸಿಗೆಯಿಂದ ಎದ್ದವಳೇ ಕಾರನ್ನು ತೆಗೆದುಕೊಂಡು ಆ ಕೊಲೇಜಿನ ಪ್ರಿನ್ಸಿಪಾಲರಿದ್ದಲ್ಲಿಗೆ ತೆರಳಿದಳು.

ಪ್ರಿನ್ಸಿಪಾಲರು ಹೊರಗೆ ಇರಲಿಲ್ಲ. ನೇರವಾಗಿ ಅವಳು ಅವರ ಹೆಂಡತಿಯ ಕಿರುಮನೆಗೇ ಹೋದಳು. ಅಲ್ಲಿ ನೋಡಿದರೆ ಪ್ರಿನ್ಸಿಪಾಲರೂ ಅವರ

ಹೆಂಡತಿಯೂ ತಮ್ಮ ಚಿಕ್ಕ ಮಗುವಿನ ಆರೈಕೆಯಲ್ಲಿ ತೊಡಗಿದ್ದಾರೆ. ಮಗು ವಿಗೆ ನೆಗಡಿ, ಜ್ವರ, ಮೈಮೇಲಿನ ಎಚ್ಚರವಿಲ್ಲ; ಸ್ವಸ್ಥವಾಗಿ ಕಣ್ಣುಮುಚ್ಚಿ ಕೊಂಡು ಬಿದ್ದುಕೊಂಡಿದೆ. ಮುದ್ದು ಮೂಗ, ಮೋಹಕವಾದ ಅವಯವಗಳು; ನೋಡಿದೊಡನೆಯೇ ಮುದ್ದಿಡಬೇಕೆಂದೆನಿಸಿತು ಅವಳಿಗೆ. ಅವಳ ಜಾಗೃತವಾದ ಮಾತೃಭಾವನೆ ಮತ್ತಿಷ್ಟು ಪ್ರಬಲವಾಯಿತು.

ಮಗುವಿಗೆ ತುಸು ವಾಸಿಯಾದೊಡನೆ ಪ್ರಿನ್ಸಿಪಾಲರು ಹೊರಗೆ ಬಂದು ಅವಳು ಬಂದ ಕಾರಣವನ್ನು ಕೇಳಿದರು. ಅವಳು ತನ್ನ ಮನೋಗತವನ್ನು ತಿಳಿಸಿ, ಈ ಕಾರ್ಯದಲ್ಲಿ ಪ್ರವೀಣಳಾದ ಸ್ತ್ರೀ ವೈದ್ಯಳ ಹೆಸರನ್ನು ತಿಳಿಸ ಬೇಕೆಂದೂ ಅವಳಿಗೆ ಎಲ್ಲ ಉಪಪತ್ತಿಯನ್ನು ಅವರೇ ಒದಗಿಸಿಕೊಡಬೇಕೆಂದೂ ಬಿನ್ನವಿಸಿಕೊಂಡಳು.

ಪ್ರಿನ್ಸಿಪಾಲ ಗುಂಡಾಚಾರ್ಯರಿಗೆ ತುಂಬ ಸಂತೋಷ. ತಮ್ಮ ಪ್ರಯೋಗ ಶಾಲೆಯಲ್ಲಿಯ ಪ್ರಯೋಗಗಳಿಗೆ ಅವಳ ಪ್ರೋತ್ಸಾಹವು ಸ್ಫೂರ್ತಿ ದಾಯಕವಾಗುವುದೆಂದು ಹಿಗ್ಗಿ ಅವಳನ್ನು ಪುನಃ ಅಭಿನಂದಿಸಿದರು. ಅವರ ವಿದ್ಯಾಲಯದಲ್ಲಿ ಪ್ರಾಧ್ಯಾಪಕ ಉಮಾಕಾಂತರು ಅಂಥ ಸಂಶೋಧನಗಳಲ್ಲಿ ತೊಡಗಿದ್ದರು. ಅವರ ಹೆಂಡತಿ ಶಶಿಮೋಹಿನಿಯು ಡಾಕ್ಟರಳೇ ಇದ್ದುದರಿಂದ ಅವರನ್ನೇ ಕಾಣಲು ಪ್ರಿ. ಗುಂಡಾಚಾರ್ಯರು ಸುಲೋಚನಾದೇವಿಗೆ ಸಲಹೆಯನ್ನಿತ್ತರು.

ಸುಲೋಚನಾದೇವಿಯು ಡಾ. ಶಶಿಮೋಹಿನಿಯ ಮನೆಗೆ ಬಂದು ಅವಳಿಗೆ ಎಲ್ಲವನ್ನೂ ವಿವರಿಸಿದಳು. ಶಶಿಮೋಹಿನಿ ತುಂಬ ಬಸುರಿ, ಆದರೂ ಬೇನೆ ಬಿದ್ದವರ ಆರೈಕೆಯ ವಿಷಯವಾಗಿ ತತ್ಪರಳಾಗಿದ್ದಳು. ಬಳಿಗೆ ಗಂಡನ ಬೆಂಬಲವೂ ಇದ್ದಿತು. ಗಂಡ-ಹೆಂಡಿರಿಬ್ಬರೂ ಹೊಸ ಹೊಸ ಔಷಧಗಳ ಶೋಧದಲ್ಲಿಯೂ, ಹೊಸ ಸಂಶೋಧನೆಗಳ ಕಲ್ಪನಾ ವಿಲಾಸದಲ್ಲಿಯೂ ಕೂಡಿಯೇ ವಿಚಾರವಿನಿಮಯದಲ್ಲಿ ಮಗ್ನರಾಗುತ್ತಿದ್ದರು. ಸುಲೋಚನಾ ದೇವಿಗೆ ಅದೊಂದು ಬಗೆಯ ವಿಶ್ವಾಸವನ್ನುಂಟುಮಾಡಿತು. ಶಶಿಮೋಹಿನಿಗೂ ಸ್ತ್ರೀಸಮಾಜದ ಮುಂದಾಳುವಾದ ಸುಲೋಚನಾದೇವಿಯಲ್ಲಿ ತುಂಬ ಆದರ, ಗೌರವವಿದ್ದಿತು. ಇಂಥ ಕಾರ್ಯಕ್ಕೆ ಮುಂದಾಗುವುದಂತು ಅವಳ ಮುಂದಾಳುತನಕ್ಕೆ ಮುಡಿಗಟ್ಟಿದಂತೆಯೇ. ಅವಳ ದೇಹ ಪರೀಕ್ಷೆ ಮಾಡಿ ಇನ್ನೆರಡು ವಾರಗಳ ಮೇಲೆ ಸರಿಯಾಗಿ ಬರುವಂತೆ ಶಶಿಮೋಹಿನಿಯು ಅವಳಿಗೆ

ಉಸುರಿದಳು. ಗರ್ಭವತಿಯಾದ ಶಶಿಮೋಹಿನಿಯು ತನ್ನ ದೇಹವನ್ನು ಮುಟ್ಟಿ ಪರೀಕ್ಷೆಮಾಡುತ್ತಿರುವಾಗಲೂ, ಅವಳ ಮಂದವೂ ಮಧುರವೂ ಆದ ನಡೆ-ನುಡಿಗಳನ್ನು ನಿರೀಕ್ಷಿಸುತ್ತಿರುವಾಗಲೂ ಯಾವುದೋ ಒಂದು ಹೊಸ ಸಂವೇದನೆಯಿಂದ ಸುಲೋಚನಾದೇವಿಯ ಹೃದಯವು ತುಂಬಿ ಬಂದಿದ್ದು ಅವಳು ಭಾವಪರವಶಳಾಗಿದ್ದಳು. ಶಶಿಮೋಹಿನಿಯ ಮಾತುಗಳನ್ನು ಅದೇ ಪರವಶತಯಿಂದ ಅಮೃತಮಯವೆನ್ನುವಂತೆ ಆಲಿಸಿ ಅಲ್ಲಿಂದ ಹೊರಟು ಬಂದಳು.

ಪ್ರೊ. ಉಮಾಕಾಂತರೊಬ್ಬ ಬುದ್ಧಿಜೀವಿ. ವೈಜ್ಞಾನಿಕ ಸಂಶೋಧನೆ ಯಲ್ಲಿ ಅವರಿಗೆ ತುಂಬ ಆಸಕ್ತಿ. ಅನೇಕ ವರುಷಗಳಿಂದ ಈ ಹೊಸ ಸಂಶೋಧನೆಯಲ್ಲಿ ಅವರು ತೊಡಗಿದ್ದರು. ಪ್ರಯೋಗ ಶಾಲೆಯಲ್ಲಿ ಇಲಿ, ಮೊಲ, ಮಂಗಗಳನ್ನು ಸಾಕಿ ತಮ್ಮ ಸಂಶೋಧನೆಗಳ ಯಶಸ್ವಿತೆಯನ್ನು ಸಿದ್ಧಪಡಿಸಿದ್ದರು. ಮನುಷ್ಯರ ವಿಷಯವಾಗಿಯೂ ಅವರ ಹೊಸ ಶೋಧ ಸಿದ್ಧವಾಗಿತ್ತು. ಅದರ ಪ್ರಯೋಗದ ಪ್ರಥಮ ವಸ್ತುವಾಗಿ ಸುಲೋಚನಾ ದೇವಿಯಂಥ ವಿದುಷಿಯು ತಾನಾಗಿಯೇ ಮುಂದೆ ಬಂದುದರಿಂದ ಅವರ ಉತ್ಸಾಹಕ್ಕೆ ಎಣೆಯಿರಲಿಲ್ಲ. ಶಶಿಮೋಹಿನಿಯಿಂದಲೇ ಈ ಪ್ರಯೋಗವಾಗ ಬೇಕಾದುದರಿಂದ, ಸುಲೋಚನಾದೇವಿ ಬರಲಿರುವ ಮುನ್ನಾದಿನ ತಾವೇ ತಮ್ಮ ಹೆಂಡತಿಯ ದವಾಖಾನೆಗೆ ಬಂದು ಎಲ್ಲವನ್ನೂ ವಿವರಿಸಿದರು. ಅದ ಕ್ಕಾಗಿ ಒಂದು ಪ್ರತ್ಯೇಕವಾದ ಕೋಣೆಯನ್ನೇ ಏರ್ಪಡಿಸಿ ಎಲ್ಲ ಉಪಕರಣ ಗಳನ್ನು, ಔಷಧಗಳನ್ನು ವ್ಯವಸ್ಥಿತವಾಗಿ ಇಡಿಸಿದರು. ಪರಿಚಾರಿಕೆಯರಿಗೂ ಏನೇನು ಮಾಡಬೇಕೆಂಬುದನ್ನು ತಿಳಿಹೇಳಿದರು. ಶಶಿಮೋಹಿನಿಗೂ ಅಂದು ಉತ್ಸಾಹ. ತಮ್ಮ ಭಾವೀ ಪ್ರಯೋಗದ ವಿಷಯವಾಗಿ ಮಾತನಾಡುತ್ತಲೇ ಆ ಕೋಣೆಯಲ್ಲಿ ಗಂಡ ಹೆಂಡಿರಿಬ್ಬರೂ ಬಹಳ ಹೊತ್ತಿನ ವರೆಗೆ ಕುಳಿತಿದ್ದರು.

ಮರುದಿನ ವೇಳೆಗೆ ಸರಿಯಾಗಿ ಸುಲೋಚನಾದೇವಿಯು ಆ ಔಷಧಾಲ ಯಕ್ಕೆ ಬಂದಳು. ಪರಿಚಾರಿಕೆಯರು ಒಳ್ಳೆಯ ಆದರದಿಂದ ಅವಳನ್ನು ಸ್ವಾಗತಿಸಿದರು. ಅವಳಿಗಾಗಿ ಸಜ್ಜುಗೊಳಿಸಿದ ಕೋಣೆಯನ್ನು ತೋರಿಸಿದರು. ಆದರೆ ಡಾ. ಶಶಿಮೋಹಿನಿಯು ಇನ್ನೂ ಯಾಕೆ ಬಂದಿರಲಿಲ್ಲವೆಂಬುದು ಅವರಿಗೆ ಗೊತ್ತಿರಲಿಲ್ಲ. ಕೂಡಲೇ ಸುಲೋಚನಾದೇವಿ ಕಿವಿತಂತಿ (telephone) ಯಿಂದ ಶಶಿಮೋಹಿನಿಗೆ ತಾನು ಬಂದುದನ್ನು ತಿಳಿಸಿದಳು. ಶಶಿಮೋಹಿನಿ

ಅಂದು ರಾತ್ರಿಯಿಂದ ಅಕಸ್ಮಾತ್ತಾಗಿ ಪ್ರಸವ ವೇದನೆಯುಲ್ಲಿದ್ದಳು. ತಾವು ಮುನ್ನಾದಿನ ಸಜ್ಜುಗೊಳಿಸಿದ ಸಲಕರಣೆಗಳು ಪ್ರಯೋಗವಾಗದೆ ಕೆಟ್ಟುಹೋಗ ಬಾರದೆಂದು ತನ್ನ ಪತಿಯನ್ನೇ ಅಲ್ಲಿಗೆ ಕಳಿಸುವುದು ಅನಿವಾರ್ಯವಾಗಿರುವು ದೆಂದೂ, ಅದಕ್ಕಾಗಿ ಕ್ಷಮಿಸಬೇಕೆಂದೂ ಅವಳು ಸುಲೋಚನಾದೇವಿಯ ಕಿವಿಯಲ್ಲಿ ಬಿನ್ನವಿಸಿದಳು. ಸುಲೋಚನಾದೇವಿಯು ಇನ್ನೇನು ಮಾಡುವುದು ಎಂದು ಆಲೋಚಿಸುತ್ತಿರುವಷ್ಟರಲ್ಲಿ ಪ್ರಾ. ಉಮಾಕಾಂತರು ಬಂದೇ ಬಿಟ್ಟರು. ಈಗ ಬೇಡವೆಂದು ಅವಳ ಮನಸ್ಸಿನಲ್ಲಿ ಬಂದಿದ್ದರೂ, ಅವರ ಗಂಭೀರವಾದ ಮುಖಮುದ್ರೆಯನ್ನು ನೋಡಿ ಅವಳ ಬಾಯಿಂದ ಮಾತೇ ಹೊರಡಲಿಲ್ಲ. ತಾನು ಯಂತ್ರದಂತೆ ಅವರನ್ನು ಹಿಂಬಾಲಿಸಿ ಆ ಕೋಣೆಯೊಳಗಿನ ಮಂಚದ ಮೇಲೆ ಮಲಗಿದ್ದುದು ಅವಳ ಜ್ಞಾಪಕದಲ್ಲಿತ್ತು. ಸುತ್ತಲೂ ಪರಿಚಾರಿಕೆ ಯರು ಆ ಪ್ರಾಧ್ಯಾಪಕರಿಗೆ ನೆರವಾಗಿ ನಿಂತಿದ್ದರು. ಒಂದರೆ ತಾಸಿನಲ್ಲಿ ತನಗೆ ತಿಳಿಯದೆಯೆ ಎಲ್ಲವೂ ಮುಗಿದು ಹೋಗಿತ್ತು. ಈಗ ತಾವು ತೆರಳಬಹುದು ಎಂದು ಪ್ರಾಧ್ಯಾಪಕರು ಕೈಕುಲುಕುವಾಗಲೇ ಅವಳಿಗೆ ಪೂರ್ಣ ಪ್ರಜ್ಞೆಯುಂಟಾದುದು.

x x x x

ಸುಲೋಚನಾದೇವಿಯ ಸ್ವಭಾವದಲ್ಲಿ ಈಗೊಂದು ಪ್ರಕಾರದ ವಿಶೇಷ ಬದಲಾವಣೆಯಾಗಿದ್ದುದು ಎಲ್ಲರಿಗೂ ಕಂಡುಬರುವಂತಿದ್ದಿತು. ಹೊಟ್ಟೆ ಯೊಳಗಿನ ಮಗುವು ಬೆಳೆಯುತ್ತಿದ್ದಂತೆ ಆಕೆಯ ಹೃದಯದಲ್ಲಿ ಮೃದುತ್ವವೂ ಪ್ರೀತಿಯೂ ಹೆಚ್ಚಾಗಿ ಒಲಿಯಹತ್ತಿದುವು. ತನ್ನ ಮಗುವಿನ ವಿಷಯವಾಗಿ ಯಂತೂ ಅದು ಹುಟ್ಟುವುದಕ್ಕಿಂತ ಮುಂಚಿತವಾಗಿಯೇ ಅಪಾರವಾದ ಮಮತೆಯು ಅವಳಲ್ಲಿ ನೆಲೆಗೊಂಡಿತು. ತಾನು ನಿರ್ಮಿಸಲಿರುವ ಸ್ತ್ರೀ ಸಮಾಜದಲ್ಲಿ ತಾಯಿಯ ಸ್ಥಾನಮಾನದ ವಿಚಾರಗಳೇ ಆಕೆಯ ತಲೆಯಲ್ಲಿ ಈಗ ಆಗಿಂದಾಗ್ಗೆ ಸುಳಿಯುತ್ತಿದ್ದುವು.

ಮೇಲಾಗಿ ಮತ್ತೊಂದು ಮಹತ್ವದ ಕಾರ್ಯವನ್ನು ಅವಳು ಮರೆತಿರ ಲಿಲ್ಲ. ವಿಜ್ಞಾನದ ಕೌತುಕಗಳು ಓದುಬರಹ ಬಲ್ಲವರಿಗೆ ತಿಳಿದಿರಬಹುದು. ಆದರೆ ನಮ್ಮ ಸಮಾಜದಲ್ಲಿ ಇಂಥ ಜನ ಎಷ್ಟು? ಆದುದರಿಂದ ಹೊಸ ಹೊಸ ವೈಜ್ಞಾನಿಕ ಶೋಧಗಳ ವಿಷಯವಾಗಿ ಜನರಲ್ಲಿ ತಿಳುವಳಿಕೆಯುಂಟಾಗುವಂತೆ ಮೊದಲು ಮಾಡಬೇಕಲ್ಲವೇ? ಆದುದರಿಂದ ಪತ್ರಿಕೆಗಳ ಮೂಲಕವಾಗಿಯೂ

ಭಾಷಣಗಳ ಮೂಲಕವಾಗಿಯೂ ಅವಳು ಅದನ್ನೇ ಬೋಧಿಸಹತ್ತಿದಳು. ವಿಜ್ಞಾನದ ನೆರವಿನಿಂದಲೇ ತಮ್ಮ ಹೊಸ ಸಮಾಜವು ಪೋಷಿತವಾಗಬೇಕೆಂದೂ, ಮಕ್ಕಳಾಗುವಂಥ ಮಹತ್ವದ ಕಾರ್ಯವೂ ವಿಜ್ಞಾನದಿಂದಲೇ ಸಾಧ್ಯವಾಗುವುದೆಂದೂ ಪ್ರತಿಪಾದಿಸುತ್ತಿದ್ದಳು. ಮತ್ತು ಅಂಥ ಒಂದು ಪ್ರಯೋಗಕ್ಕೆ ತಾನೇ ಮುಂದಡಿಯಿಟ್ಟಿರುವೆನೆಂದೂ ಸಾರುತ್ತಿದ್ದಳು.

ಅವಳ ವಿದ್ಯಾಲಯದಲ್ಲಿಯ ಒಂದು ಪ್ರಸಂಗ: ವಿದ್ಯಾರ್ಥಿನಿಯರು, "ಸುಶಿಕ್ಷಿತೆಯರ ಕಾರ್ಯಕ್ಷೇತ್ರವು ಅಡುಗೆಯ ಮನೆಯೋ ಆಫೀಸೋ?" ಎಂಬ ವಿಷಯವನ್ನು ಚರ್ಚೆಗಾಗಿ ಇಟ್ಟುಕೊಂಡಿದ್ದರು. ಆ ಸಭೆಗೆ ಸುಲೋಚನಾದೇವಿಯನ್ನೇ ಅಧ್ಯಕ್ಷಳಾಗಲು ಬಿನ್ನವಿಸಿಕೊಂಡಿದ್ದರು. ಚರ್ಚೆ ಮುಗಿದ ನಂತರ ಸುಲೋಚನಾದೇವಿಯು ತನ್ನ ವಿಚಾರಗಳನ್ನು ಸ್ಪಷ್ಟವಾಗಿ ವಿವರಿಸುತ್ತ: ". . . ಆಧುನಿಕ ಸುಶಿಕ್ಷಿತೆಯರು ಆಫೀಸನ್ನು ಸೇರಬೇಕು, ಆಫೀಸರರೂ ಆಗಬೇಕು; ಅದೇಕೆ ರಾಜಕಾರಣದಲ್ಲಿಯೂ ಮುಂದಡಿಯಿಡಬೇಕು. ಅದಕ್ಕಾಗಿ ಪುರಷರ ಆಧೀನರಾಗುವ ಎಲ್ಲ ಬಗೆಯ ರೀತಿಗಳನ್ನೂ ತಡೆಯಬೇಕು. ಅಂಥದೊಂದು ಹೊಸ ಸ್ತ್ರೀ ಸಮಾಜವನ್ನು ಕಟ್ಟುವುದೇ ನನ್ನ ಗುರಿ. ಸ್ತ್ರೀಯರಿಗೆ ಸಹಜವಾದ ಮಾತೃಪದದ ರಕ್ಷಣೆಗಾಗಿ ಇಂದಿನ ವಿಜ್ಞಾನದ ಹೊಸ ಶೋಧಗಳನ್ನು ಬಳಸಿಕೊಳ್ಳಬೇಕು. ಅಂಥ ಒಂದು ಶೋಧವನ್ನು ನಾನೇ ಪ್ರಯೋಗಿಸಿಕೊಂಡಿದ್ದೇನೆ. ಬಹುಶಃ ಕೆಲದಿನಗಳಲ್ಲಿಯೇ ನಾನೇ ಅಂಥ ಒಬ್ಬ ಮೊದಲನೆಯ ಮಾತೆಯಾಗಬಹುದು . . . ." ಎಂದು ಮುಂತಾಗಿ ಮುಗಿಸಿದಳು.

ಇಷ್ಟು ದಿನಗಳ ವರೆಗೆ ತನ್ನ ಸಂಶಯವನ್ನು ಹೊಟ್ಟೆಯಲ್ಲಿಯೇ ಅಡಗಿಸಿಕೊಂಡಿದ್ದ ವಿದ್ಯಾಲಯದ ಸೇವಿಕೆಯೊಬ್ಬಳು ಅದನ್ನು ಕೇಳಿ ತನ್ನೊಳಗೇ ನಿಟ್ಟುಸಿರಿಟ್ಟಳು. ವಿದ್ಯಾಲಯದಿಂದ ಹೊರಡುವಾಗ ಕೈಕಿಂಕಿಣಿಯಿಂದ ಸುಲೋಚನಾದೇವಿಯು ಸೇವಿಕೆಯನ್ನು ಕರೆದಾಗ ದಿನದಂತೆ ಅವಳು ಅಲ್ಲಿಯ ಸಾಮಾನುಗಳನ್ನು ತಟ್ಟನೆ ತೆಗೆದುಕೊಳ್ಳದೆ ಏನನ್ನೋ ಕೇಳುವುದರಲ್ಲಿದ್ದಳು. ಸುಲೋಚನಾದೇವಿ, "ಏನು?" ಎಂದು ಹುಬ್ಬು ಮೇಲೇರಿಸಿದಾಗ ಅವಳು ಮೆಲ್ಲನೆ ಕೇಳಿದಳು: "ತಾಯಿ, ನಿಮ್ಮ ವಿಜ್ಞಾನಗಿಜ್ಞಾನ ನಮಗೆ ತಿಳಿಯದು; ಆದರೆ ನಿಮಗೆ ಮಗು ಹುಟ್ಟಿದರೆ, ಆ ಮಗುವಿನ ತಂದೆ ಯಾರೆಂಬುದನ್ನು ನಾಳೆ ನಿಮಗೆ ಹೇಳಬೇಕಾಗಿ ಬರಲಿಕ್ಕಿಲ್ಲವೇ? . . . "

ಆಕೆ ಇನ್ನೇನೋ ಕೇಳುವುದರಲ್ಲಿದ್ದಳು. ಅಷ್ಟರಲ್ಲಿ ಸುಲೋಚನಾದೇವಿ “ಉಃ” ಎಂದು ತಿರಸ್ಕಾರದ ನಗೆ ನಕ್ಕು ಅಲ್ಲಿಂದ ಹೊರಟು ಬಂದು ಕಾರಿನಲ್ಲಿ ಕುಳಿತುಬಿಟ್ಟಳು.

ಮನೆಯ ಹಾದಿಯ ಮೇಲಿದ್ದಾಗ ಹಲವು ವಿಚಾರಗಳು ಅವಳ ಮನಸ್ಸಿನಲ್ಲಿ ಎಡತಾಕಿದುವು. ಆ ಸೇವಿಕೆಯ ಪ್ರಶ್ನೆ . . . . ಆಃ, ಅವಳೊಬ್ಬ ಹುಚ್ಚಿ! ಆದರೆ . . . . ಅವಳ ಪ್ರಶ್ನೆಯಲ್ಲಿ ಅರ್ಥವಿಲ್ಲವೇ? . . . . . ವಿಚಾರ ಮಾಡಿದಂತೆಲ್ಲ ಆ ಪ್ರಶ್ನೆ ಕೂರಲಗಿನಂತೆ ಅವಳ ಮನಸ್ಸನ್ನು ಚುಚ್ಚತೊಡಗಿತು. ತಂದೆ ಯಾರು? ಎಂಬ ಮಾತಿನ ಹಿಂದೆ ಗಂಡಸಿನ ಆಧಾರವಿಲ್ಲದೆ ಹೆಂಗಸು ಬಾಳಲಾರಳು, ಎಂಬ ಅವಳ ಅಬಲತೆಯ ಚಿತ್ರವಿಲ್ಲವೇ?

ಹೌದು, ಅಬಲತಯ ದ್ಯೋತಕವೇ ಅದು! ಆ ಸೇವಿಕೆಯ ಪ್ರಶ್ನೆಯ ಸಂಬಂಧವಾಗಿ ಅವಳ ಮನಸ್ಸಿನಲ್ಲಿ ಈಗ ಸಂತಾಪವುಂಟಾಯಿತು. ಆದರೆ ಪಾಪ, ಅವಳದೇನು ತಪ್ಪು? ಅದು ಅವಳೊಬ್ಬಳ ಪ್ರಶ್ನೆಯೇ ಅಲ್ಲ; ಅವಳು ಬೆಳೆದು ಬಂದಿದ್ದ ಸಮಾಜದ ಮನೋವೃತ್ತಿಯ ಫಲ ಗಂಡಸಿನ ಅಧಿಕಾರಕ್ಕೆ ಹಂಗಸು ತನ್ನ ಅಸ್ತಿತ್ವವನ್ನು ಎಂದೋ ಮಾರಿಬಿಟ್ಟಿದ್ದಾಳೆ. ಪರಂಪರಾಗತವಾಗಿ ಅವನ ಗುಲಾಮಳಾಗಿ ಬಾಳುತ್ತಿದ್ದಾಳೆ ತನ್ನ ಶಕ್ತಿ ಸರ್ವಸ್ವವನ್ನೆಲ್ಲಾ ಕಳೆದುಕೊಂಡು ಅವನ ಸಹಾಯವಿಲ್ಲದ ಯಾವ ಕೆಲಸವೂ ಆಗಲಾರದು ಎನ್ನುವಷ್ಟು ನಿಸ್ಸಹಾಯಕಳಾಗಿದ್ದಾಳೆ. . . . . ಇನ್ನೂ ಎಷ್ಟೋ ವಿಚಾರಗಳು ಅವಳ ತಲೆಯಲ್ಲಿ ಬಂದುವು. ಅವಳ ಸುಪ್ತ ಮನಸ್ಸಿನಲ್ಲಿದ್ದ ಪುರುಷ ದ್ವೇಷವು ಮತ್ತಷ್ಟು ಪ್ರಜ್ವಲವಾಯಿತು.

ನಡುವೇ ಅವಳಿಗೆ ಥನ್ನೆನಿಸಿತು. ತನಗೆ ಔಷಧ ಪ್ರಯೋಗ ಮಾಡಿದ ದಿನದ ನೆನಪು ಅಂದು ತಟ್ಟನೆ ಅವಳ ಕಣ್ಮುಂದೆ ಹೊಳೆಯಿತು. ತನ್ನ ಮನಸ್ಸಿನಲ್ಲಿ ಬೇಡೆನಿಸುತ್ತಿದ್ದರೂ ಪ್ರಾ ಉಮಾಕಾಂತರಿಗೆ ಆ ಪ್ರಯೋಗ ಮಾಡಲು ಬಿಟ್ಟುದೇಕೆ? ಶಶಿಮೋಹಿನಿಯು ಶಕ್ತಿಗೊಂಡು ತಾನಾಗಿಯೇ ಆ ಪ್ರಯೋಗ ಮಾಡುವಷ್ಟು ದಿನ ತಡೆಯ ಬಾರದಾಗಿತ್ತೇ? ಅಂತು ತಾನೂ ಅಬಲೆಯಂತೆ ಪುರುಷರ ಸಹಾಯಕ್ಕೆ ಬಲಿಬಿದ್ದೆನಲ್ಲ . . . !

ಮತ್ತು ಅವರು ಉಪಯೋಗಿಸಿದ ಔಷಧ—? ಅದು ಯಾವ ಪಾಪಿಷ್ಠನ ವೀರ್ಯದಿಂದ ತಯಾರಿಸಿದುದೋ—ಎಂಥ ರೋಗಿಯೋ, ಹೊಲೆಯನೋ, ನೀಚನೋ! ಆ ಮಂಗನಮೂತಿಯವನು ಬಳಿಯಿಂದ ಹಾದು ಹೋದರೆ

ಅವನ ನೆರಳನ್ನೂ ತಾನು ಮುಟ್ಟುತ್ತಿರಲಿಲ್ಲ. ಆದರೆ ಏನಿದು ದುರ್ಭಾಗ್ಯ—ಅವನ ವೀರ್ಯವನ್ನು ತನಗೆ ಯಾವುದೂ ಅರಿವಿಲ್ಲದೆ ತನ್ನ ಒಡಲಿನಲ್ಲಿಯೇ ಇಟ್ಟುಕೊಂಡು ಒಂಬತ್ತು ತಿಂಗಳು ಪೋಷಿಸಬೇಕಾಯಿತಲ್ಲ! ಇದು ಎಂತಹ ದುರ್ದೈವವೆನ್ನಬೇಕು?

ಈ ವಿಚಾರದ ಆಘಾತದಿಂದ ಅವಳ ತಲೆಯು ಎರಡು ಹೋಳಾಗುವಂತಾಗಿತ್ತು. ಎಲ್ಲಿಯಾದರೂ ಗೋಡೆಗೆ ಹಾಯ್ದು ತಲೆಯನ್ನು ಒಡೆದುಕೊಳ್ಳಲೋ ಎಂದೆನಿಸಿತು ಅವಳಿಗೆ. ತನ್ನ ಬಾಳಿನ ಹೇಸಿಕೆಯುಂಟಾಯಿತು. ಆತ್ಮಹತ್ಯವನ್ನು ಮಾಡಿಕೊಳ್ಳುವುದೇ ಸರಿ ಎಂದು ಅನಿಸಿತು ಒಮ್ಮೆ. ಆದರೆ... ಭ್ರೂಣಹತ್ಯವು ಮಹಾಪಾತಕವಲ್ಲವೇ? ತನ್ನ ಆತ್ಮ ಹೋದರೂ ಸರಿಯೇ; ಆದರೆ, ತನ್ನೊಡಲಿನಲ್ಲಿ ಬೆಳೆಯುತ್ತಿದ್ದ ಆ ಪುಟ್ಟ ಜೀವ? ಅದನ್ನೂ ಕೊಲೆಗೀಡುಮಾಡುವುದು ಹೇಗೆ? ಅದನ್ನು ಸ್ವಾಗತಿಸಿದವಳು ತಾನೇ ಅಲ್ಲವೇ. . . . ?

ಅಂತು, ಈ ವಿರುದ್ಧ ವಿಚಾರಗಳ ತಾಕಲಾಟದಿಂದ ಅವಳಂದು ಬದುಕಿದಳು. ಒಂದು ಕಡೆಗೆ ಆತ್ಮಹತ್ಯೆಯ ದುಡುಕು, ಇನ್ನೊಂದು ಕಡೆಗೆ ಹೊಟ್ಟೆಯಲ್ಲಿಯ ಮಗುವಿನ ವಿಷಯವಾಗಿ ಆಸ್ಥೆ . . . ಯಾರು ಯಾರೋ ಬೀದಿಯಲ್ಲಿ ಎಸೆದ ಅನಾಥ ಮಗುವನ್ನು ನಾವು ಪ್ರೀತಿಯಿಂದ ಸಾಕಿ ಸಲಹುವೆವು. ಅಂದ ಮೇಲೆ, ನಮ್ಮ ಹೊಟ್ಟೆಯಲ್ಲಿಯೇ ಹುಟ್ಟುವ ಮಕ್ಕಳ ವಿಷಯವಾಗಿ ಅನಾಸ್ಥೆ ತಾಳುವುದೆಂತು? ಅಂತು ಸಾವಿನ ದುಡುಕು ಹಾಗು ಮಗುವಿನ ಮಮತೆ ಇವುಗಳ ಹೋರಾಟದಲ್ಲಿ ಮಗುವಿನ ಮಮತೆಯೇ ಗೆದ್ದಿತು. ಆದಾಗ್ಯೂ ಆ ಹೋರಾಟದಿಂದಾದ ಮನಃಕ್ಷೋಭೆಯು ಇಡಿಯ ರಾತ್ರೆ ಅವಳಿಗೆ ಕಣ್ಣಿಗೆ ಕಣ್ಣು ಹತ್ತಗೊಡಲಿಲ್ಲ. ಕೊನೆಯ ವರೆಗೆ ತನ್ನ ಸಮಸ್ಯೆಗೆ ಸಮಾಧಾನಕರವಾದ ಉತ್ತರವೂ ದೊರಕಲಿಲ್ಲ

ಬೆಳಗಾದೊಡನೆ ಶಶಿಮೋಹಿನಿಯ ಮನೆಗೆ ಮಿಂಚಿನ ವೇಗದಿಂದ ಧಾವಿಸಿದಳು. ತನ್ನ ವಿಚಾರದ ತೊಡಕುಗಳನ್ನೆಲ್ಲ ಅವಳಿಗೆ ಒಂದೊಂದಾಗಿ ವಿವರಿಸಿದಳು. ಅಂದು ಪ್ರಸವವೇದನೆಯಿಂದ ಅವಳು ಬಳಲುತ್ತಿದ್ದ ದಿನ ಅವಳ ಗಂಡನನ್ನು ಕಳಿಸಿದುದಕ್ಕಾಗಿ ಅವಳಿಗೆ ದೂಷಿಸಿದಳು. ತಾನೇಕೆ ಒಪ್ಪಿದೆನೋ ಎಂದು ತನ್ನನ್ನು ತಾನೇ ಹಳಿದುಕೊಂಡಳು. ಈ ಸಂಕಟದಿಂದ ತಾನು ಬದುಕುವುದು ಹೇಗೆಂದು ಮೊರೆಯಿಟ್ಟಳು.

ಶಶಿಮೋಹಿನಿಗೆ ಸುಲೋಚನಾದೇವಿಯ ಸಂಕಟದ ಅರ್ಥವಾಯಿತು. ಅವಳಿಗೆ ಮಾನಸೋಪಚಾರವು ಆವಶ್ಯಕವಾಗಿರುವುದೆಂದು ಅವಳು ಮನ ಗಂಡಳು. ಅವಳ ಬಳಿಗೆ ಹೋಗಿ ಗದ್ದವನ್ನು ಹಿಡಿದು ಅವಳನ್ನು ಮಗುವಿ ಗಿಂತಲೂ ಕೋಮಲವಾಗಿ ನಡಿಸಿಕೊಂಡಳು. ಅವಳ ಉದ್ವೇಗವು ಕಡಿಮೆ ಯಾಗುವಂತೆ ಸಮಾಧಾನದಿಂದ ಅವಳನ್ನು ಸಂತೈಸಿದಳು.

ಮತ್ತು ಅವಳ "ತಂದೆಯ ಸಮಸ್ಯೆ...?" ಸ್ತ್ರೀವಾದದ ಆಂದೋಲನವು ಪ್ರಬಲವಾಗಿ ಹರಡುತ್ತಿದ್ದುದರಿಂದ ಅವಳ ಗಂಡನಿಗೆ ಅದು ಎಂದೋ ಹೊಳೆ ದಿತ್ತು. ಪುರುಷ ವೀರ್ಯವನ್ನು ಪ್ರಯೋಗಿಸದೆ ಕೇವಲ ರಾಸಾಯನಿಕ ಕ್ರಿಯೆ ಗಳಿಂದಲೇ ಜೀವಾಣು (Chromosomes)ಗಳಿಂದ ಕೂಡಿದ ದ್ರವವನ್ನು ಸಿದ್ಧಮಾಡಿ, ಅದರಿಂದಲೇ ಬೇರೆ ಬೇರೆ ಪ್ರಾಣಿಗಳು ಹುಟ್ಟುವ ಔಷಧವನ್ನು ಅವರು ಹುಡುಕಿ ತೆಗೆದಿದ್ದರು. ಇಲಿ, ಮಂಗಗಳ ಮೇಲೆ ಆ ಪ್ರಯೋಗ ತುಂಬ ಯಶಸ್ವಿಯಾಗಿತ್ತು. ಮನುಷ್ಯರ ಸಲುವಾಗಿಯೂ ಅಂಥ ಔಷಧವನ್ನು ಅವರು ತಯಾರಿಸಿದ್ದರು. ಈಗಾಗಲೇ ಈ ಹೊಸ ಸಂಶೋಧನೆಯನ್ನು ನೋಬಲ ಪ್ರಾಯಿಜ್ಜಗಾಗಿ ಸ್ವೀಡನ್ನಿಗೂ ಕಳಿಸಿದ್ದರು.

"ತಂಗೀ, ಸುಲೋಚನಾದೇವಿ, ನನ್ನಿಂದಾದ ಒಂದು ತಪ್ಪು ಇದೆ. ನಿನ್ನೊಡನೆ ಈಗ ಕ್ಷಮೆ ಯಾಚನೆ ಮಾಡುವ ಕಾರಣವೇನೂ ಉಳಿದಿಲ್ಲ. ಅದು ನಿನ್ನ ಒಳಿತಿಗಾಗಿಯೇ ಆಗಿರಬೇಕು ನಿನ್ನ ಮೇಲೆ ಪ್ರಯೋಗಿಸು ವುದಕ್ಕಾಗಿ ಪತಿಯು, ವೀರ್ಯದಿಂದ ತಯಾರಿಸಿದ ಔಷಧವನ್ನೇ ನನ್ನ ಕೈಯಲ್ಲಿ ಕೊಟ್ಟಿದ್ದರು. ಅದನ್ನು ಯಾರಿಗೂ ಸಿಗದಂತೆ ಭದ್ರವಾಗಿ ನಾನು ಬೇರೊಂದೆಡೆಗೆ ಇಟ್ಟಿದ್ದೆ. ಆದರೆ ನನ್ನ ಪ್ರಸವವೇದನೆಯ ಗೊಂದಲದಲ್ಲಿ ನಾನದನ್ನು ಮರೆತು ಬಿಟ್ಟೆ. ಪತಿಯು ದವಾಖಾನೆಗೆ ಹೋದಾಗ ಅವರಿಗೆ ಅದು ಸಿಗಲಿಲ್ಲ. ಆದುದ ರಿಂದ ತಮ್ಮ ನೂತನ ಸಂಶೋಧನೆಯ ಪ್ರಯೋಗವನ್ನೇ ನಿನ್ನ ಮೇಲೆ ಮಾಡ ಬೇಕಾಯಿತಂತೆ. ನೀನೀಗ ಅಸಮಾಧಾನ ಪಡುವ ಕಾರಣವಿಲ್ಲವಷ್ಟೇ?" ಶಶಿಮೋಹಿನಿಯು ಅವಳ ಗದ್ದವನ್ನಲುಗಿಸುತ್ತ ತುಂಬ ಪ್ರೀತಿಯಿಂದ ಉಸುರಿದಳು.

ಸುಲೋಚನಾದೇವಿಗಾದ ಸಂತೋಷಕ್ಕೆ ಅಂತಪಾರವೇ ಇರಲಿಲ್ಲ. ಆನಂದ ಪರವಶಳಾಗಿ ಶಶಿಮೋಹಿನಿಯನ್ನು ಅಪ್ಪಿಕೊಂಡು ಅವಳ ಎದೆಯ ಮೇಲೆ ಆನಂದಾಶ್ರುಗಳ ಪ್ರವಾಹವನ್ನೇ ಹರಿಯಿಸಿದಳು.

ಅವಳ ತಲೆಯ ಮೇಲೆ ಕೈಯಾಡಿಸುತ್ತ ಶಶಿಮೋಹಿನಿಯು ಮೆಲ್ಲಗೆ ಉಸುರಿದಳು: "ನಿನ್ನ ಮಗುವಿನ ತಂದೆ ಯಾವ ಪ್ರಾಣಿಯೂ ಅಲ್ಲ, ಅದೊಂದು ಹೊಸಯುಗದ ಜೀವ—ವಿಜ್ಞಾನ!"

ಸುಲೋಚನಾದೇವಿಯ ಮನಸ್ಸು ಈಗ ಸಂಪೂರ್ಣವಾಗಿ ತಿಳಿಯಾಗಿತ್ತು. ಹೊಟ್ಟೆಯಲ್ಲಿರುವ ಮಗುವಿನ ಪ್ರೇಮಕ್ಕಿಂತ ಅಲ್ಲಿ ಬೇರೆ ಯಾವ ಭಾವನೆಗಳಿಗೂ ಎಡೆಯಿರಲಿಲ್ಲ!

x x x x

ಪ್ರಸೂತಿ ಗೃಹವು ಮಹಿಲಾ ಸಮಾಜದ ಸದಸ್ಯರಿಂದ ತುಂಬಿಹೋಗಿತ್ತು. ಬಂದವರಿಗೆಲ್ಲ ಒಳಗೆ ಬಿಡುವುದು ಅಲ್ಲಿಯ ವ್ಯವಸ್ಥಾಪಕರಿಗೆ ಸಾಧ್ಯವೂ ಇರಲಿಲ್ಲ, ಇಷ್ಟವೂ ಇರಲಿಲ್ಲ.

ಸುಲೋಚನಾದೇವಿ ನಾಲ್ಕೈದು ದಿನಗಳಿಂದ ಪ್ರಸವವೇದನೆಯಿಂದ ಪೀಡಿತಳಾಗಿದ್ದಳು. ಅವಳ ಶರೀರಕ್ಕೆ ಬಹಳೇ ಆಯಾಸವಾಗಿತ್ತು. ಕೊನೆಗೆ ಪ್ರಸೂತಿಗೃಹದಲ್ಲಿ ಒವರೇಶನದ ಮೂಲಕ ಮಗುವನ್ನು ಹೊರಗೆ ತೆಗೆಯ್ಬೇಕಾಯಿತು. ಪರಿಚಾರಿಕೆಯರು ಕೂಡಲೇ ಆ ಮಗುವನ್ನು ಬೇರೊಂದು ಕೋಣೆಯಲ್ಲಿ ಸಾಗಿಸಿ ಅಲ್ಲಿ ಅದರ ಆರೈಕೆಯನ್ನು ನಡೆಯಿಸಿದ್ದರು.

ಕೆಲಹೊತ್ತಿನ ಮೇಲೆ ಸುಲೋಚನಾದೇವಿಗೆ ತಿಳಿವು ಉಂಟಾಗಿ ಎಚ್ಚತ್ತಾಗ "ನನ್ನ ಮಗು . . . . . ಎಲ್ಲಿದೆ?" ಎಂದು ಅವಳು ಹಂಬಲಿಸಿದಳು. ಲೇಡೀ ಡಾಕ್ಟರರು "ಅದು ಬೇರೆ ಕೋಣೆಯಲ್ಲಿ ಸುರಕ್ಷಿತವಾಗಿದೆ" ಎಂದು ಅವಳ ಆತುರತೆಯ ವೇಗವನ್ನು ಕಡಿಮೆಮಾಡಿದರು. ಇಷ್ಟೇ ಅಲ್ಲ, ಅಲ್ಲಿಯ ಪರಿಚಾರಿಕೆಯರಿಗೆ ಅವಳಿಗೆ ಪೂರ್ಣ ವಾಸಿಯಾಗುವ ವರೆಗೆ ಮಗುವನ್ನು ತೋರಿಸಬಾರದೆಂದು ಅಪ್ಪಣೆ ಮಾಡಿದರು. ಸುಲೋಚನಾದೇವಿಯನ್ನು ನೋಡಲು ಬಂದವರೂ ಪಿಟ್ಟೆಂದು ಮಾತಾಡಬಾರದೆಂದು ಕಟ್ಟಪ್ಪಣೆ ವಿಧಿಸಿದರು.

ಪ್ರಸೂತಿಗೃಹವು ಈಗೊಂದು ಪ್ರದರ್ಶನ ಶಾಲೆಯಾಗಿತ್ತು. ಆ ಅದ್ವಿತೀಯ ಮಗು—ಔಷದಪ್ರಯೋಗದಿಂದ ಹುಟ್ಟಿದ ವಿಜ್ಞಾನದ ಕೂಸು—ಅದರ ಆ ರೂಪು—ಅಮಾನುಷವೋ, ಅತಿಮಾನುಷವೋ ಯಾರಿಗೂ ತಿಳಿಯದಂತಾಗಿತ್ತು. ಜನಸಾಮಾನ್ಯರ ಕುತೂಹಲವನ್ನು ಅದು ಚೆನ್ನಾಗಿ ಕೆರಳಿಸಿತು. ಅದು ಹುಟ್ಟಿದ ಒಂದೆರಡು ವಾರಗಳಲ್ಲಿ ಸಾವಿರಾರು ಜನ ಸ್ತ್ರೀಪುರುಷರು ಬಂದು ಅದನ್ನು ನೋಡಿಕೊಂಡು ಹೋಗಿರಬೇಕು. ಸುಲೋಚನಾದೇವಿಯ

ಗೆಳತಿಯರು ವ್ಯವಸ್ಥಾಪಕರ ಸ್ಪೇಶಲ್ ಅಪ್ಪಣೆ ಪಡೆದುಕೊಂಡು, ದೂರದಿಂದಲೇ ಒಂದೆರಡು ನಿಮಿಷ ಅವಳನ್ನು ನೋಡಿಕೊಂಡು, ಮುಗುಳುನಗೆಯಿಂದ ತಮ್ಮ ಅಭಿನಂದನೆಗಳನ್ನು ಸೂಚಿಸುತ್ತಾ ಹಾಗೆಯೇ ತಿರುಗಿ ಹೋಗಿಬಿಡುತ್ತಿದ್ದರು.

ಇಷ್ಟು ಜನ ಬಂದು ತನ್ನ ಮಗುವನ್ನು ನೋಡಿಕೊಂಡು ಹೋಗುವರಲ್ಲಾ? ತಾನು ಮಾತ್ರ ಇನ್ನೂ ನೋಡಬಾರದೇ? ಸುಲೋಚನಾದೇವಿಯಲ್ಲಿ ಕುತೂಹಲವು ಒಂದೇ ಸವನೆ ಬೆಳೆಯುತ್ತಿತ್ತು. ದಿನಾಲೂ ತನ್ನ ಮಗುವನ್ನು ತೋರಿಸಿರೆಂದು ಪರಿಚಾರಿಕೆಯರಿಗೆ ಅವಳು ಕಾಡುತ್ತಿದ್ದಳು. ಆದರೆ ಲೇಡೀ ಡಾಕ್ಟರರ ಅಪ್ಪಣೆಯನ್ನು ಯಾರೂ ಮೀರುವಂತೆ ತೋರಲಿಲ್ಲ. ಲೇಡೀ ಡಾಕ್ಟರರು ಖಂಡಿತವಾಗಿ ಅವಳಿಗೆ ತಿಳಿಸಿದ್ದರು: ನೀವು ಇಲ್ಲಿಂದ ಹೊರಡುವ ದಿನ ನಿಮ್ಮ ಮಗು ನಿಮ್ಮ ವಶದಲ್ಲಿ ಕೊಡಲಾಗುವುದು, ಎಂದು.

ಆಕೆ ಒಂದೇ ಸವನೆ ದಿನಗಳನ್ನು ಎಣಿಸುತ್ತಿದ್ದಳು. ಒಂದೊಂದು ದಿನವೆಂಬುದು ಒಂದು ವರ್ಷದಂತೆ ಅನಿಸಹತ್ತಿತು ಆಕೆಗೆ. ಒಪರೇಶನದ ಗಾಯಗಳು ಕ್ರಮೇಣ ಗುಣವಾಗುತ್ತಾ ಬಂದವು. ಕೊನೆಗೆ ಆ ದಿನವೂ ಬಂದಿತು—

ಸುಲೋಚನಾದೇವಿಯು ಮಾತೆಗೊಪ್ಪುವ ಸೌಮ್ಯ ಅರಿವೆಗಳನ್ನು ಪರಿಧಾನಮಾಡಿ ಪ್ರಸೂತಿಗೃಹದ ಹೊರಗೆ ಬಂದು ನಿಂತುಕೊಂಡಳು. ಲೇಡೀ ಡಾಕ್ಟರರು ಅವಳಿಗೆ ಬೀಳ್ಕೊಳ್ಳಲು ಹೊರಬಾಗಿಲ ವರೆಗೆ ಬಂದಿದ್ದರು. ಇನ್ನೊಂದು ಕಡೆಯಿಂದ ಪರಿಚಾರಿಕೆಯರು ಒಂದು ಬಂಗಾರದ ತಳಿಗೆಯಲ್ಲಿ ರೇಶಿಮೆಯ ಅರಿವೆಗಳಿಂದ ಹೊದೆದು ಶಿಶುವನ್ನು ತರುತ್ತಿದ್ದರು. ಈ ಮೋಹಕವಾದ ದೃಶ್ಯವು, ಪೂರ್ವದಿಗಂಗನೆಯರು ಬಾಲಚಂದ್ರನನ್ನು ಎತ್ತಿಕೊಂಡು ತರುತ್ತಿರುವರೋ ಎನ್ನುವಂತೆ ಶೋಭಿಸುತ್ತಿತ್ತು. ಆ ಬಂಗಾರದ ತಳಿಗೆಯು, ಅವಳು ಮಾತೃಪದವನ್ನಲಂಕರಿಸಿದ ಶುಭ ಪ್ರಸಂಗದ ಸ್ಮರಣೆಗಾಗಿ ಮಹಿಳಾ ಸಮಾಜದಿಂದ ಕಾಣಿಕೆಯಾಗಿ ಬಂದಿತ್ತು.

ಪರಿಚಾರಿಕೆಯರು ಬಂದು ಆ ತಳಿಗೆಯನ್ನು ಸುಲೋಚನಾದೇವಿಯ ಕೈಯಲ್ಲಿತ್ತರು. ಅವಳ ಉತ್ಸುಕತೆಗೆ ಮೇರೆಯೇ ಇರಲಿಲ್ಲ. ಕೂಡಲೇ ಅವಳು ಒಬ್ಬ ಪರಿಚಾರಿಕೆಗೆ ಅದನ್ನು ಹಿಡಿಯಲಿಕ್ಕೆ ಹೇಳಿ, ತನ್ನುದರದ ಮಾಣಿಕವಾದ ಆ ಮಗುವಿಗೆ ಮುದ್ದಿಡಬೇಕೆಂದು ಬಾಗಿ, ಅದರ ಮೇಲಿನ ಸೆರಗನ್ನು ಬದಿಗೆ ಸರಿಸಿದಳು. ಆದರೆ.......

. . . . ಮುದ್ದಿಡಲು ಮುಂದಕ್ಕೆ ಬಾಗಿದ ಅವಳ ಮೋರೆ ಯಾವುದೋ ಒಂದು ಆಘಾತದಿಂದ ಹಿಂದಕ್ಕಟ್ಟಿದಂತಾಗಿ ಒಮ್ಮೆಲೆ ಅವಳು ಹಿಂದಕ್ಕೆ ಸರಿದಳು. "ಇದು ನನ್ನ ಮಗುವೇ? . . . . ಚೇಷ್ಟೆ . . . ನನ್ನ ಮಗುವಲ್ಲ ಇದು. . . . . " ಅವಳು ಹುಚ್ಚಿಯಂತೆ ಒದರಿದಳು!

ಯಾರಿಗೂ ಮಾತನಾಡುವ ಧೈರ್ಯವಿರಲಿಲ್ಲ. ಲೇಡೀ ಡಾಕ್ಟರರು ತಾವೇ ಮೆಲ್ಲನೆ ಹೇಳಿದರು "ಇದರ ದೇಹವೆಲ್ಲ ಮನುಷ್ಯನದೇ; ತಲೆ ಮಾತ್ರ ಮಂಗನದು . . . . . ತಾವು ಅದರ ತಾಯಿ . "

ಸುಲೋಚನಾದೇವಿಗೆ ಅದನ್ನು ಕೇಳುವುದಾಗಲಿಲ್ಲ ತನ್ನ ಹಣೆಯನ್ನು ಮುಚ್ಚಿಕೊಳ್ಳುತ್ತ ಮೂರ್ಛೆ ಬಂದಂತಾಗಿ ಅವಳು ನೆಲದ ಮೇಲೆ ಬಿದ್ದು ಬಿಟ್ಟಳು.

ಲೇಡೀ ಡಾಕ್ಟರರು ಅವಳ ಗಲ್ಲದ ಮೇಲೆ ಕೈಯಿಟ್ಟು ಮೆಲ್ಲನೆ ಸಂತೈಸುತ್ತಿದ್ದರು: "ವಿಜ್ಞಾನದ ಆಧುನಿಕ ಯುಗವಿದು . . . . . ಇದು ವಿಜ್ಞಾನದ ಕೂಸು . . . . . !"



# ಸುನೀತಿ

(ಶ್ರೀ ಲೋಕೇಶ ಮದಭಾವಿ, ಕರ್ನಾಟಕ ಕಾಲೇಜ್, ಧಾರವಾಡ)

## (೧)

ರೂಪ, ವಿದ್ಯೆ, ಸಿರಿವಂತಿಕೆಯುಳ್ಳ ಸೊಸೆ ಬಂದಾಗ್ಗೆ ವಿನಯನ ತಂದೆ ತಾನು ಅದ್ಭುತಕಾರ್ಯ ಮಾಡಿರುವೆನೆಂದು ತಿಳಿದುಕೊಂಡಿದ್ದ. ಅಂಥ ಹುಡಿಗೆಯನ್ನಾರಿಸಿದ್ದಕ್ಕೆ ತಂದೆ ಮುದುಕನಾದರೂ ಅನುರೂಪಳಾದವಳನ್ನೇ ಆರಿಸುವ ಕೌಶಲ್ಯವಿದೆಯೆಂದು ವಿನಯ ಈಡುಮಾಡಿ ಹೊಗಳಿದ್ದ. ಆದರೆ ಪಾಪ, ಆ ಮುದುಕನಿಗೆ ತನ್ನ ಕೌಶಲ್ಯ ತನಗೇ ಮುಳುವಾಯಿತೇನೋ, ಸೊಸೆಯು ಬಂದ ಮೂರು ನಾಲ್ಕು ತಿಂಗಳಲ್ಲಿಯೇ ಧಾರವಾಡವನ್ನು ಬಿಟ್ಟು ತಮ್ಮ ಊರನ್ನೇ ಸೇರುವ ಪ್ರಸಂಗ ಬಂದಿತು. ಲಕ್ಷ್ಮಿಯಂತೆ ಮನೆಗೆ ಸೊಸೆಯು ಬಂದಿದ್ದಾಳೆ ಎಂದು ವಿನಯನ ತಾಯಿತಂದೆಗಳು ಎಷ್ಟು ಸಲುಗೆಯಿಂದ, ಪ್ರೀತಿಯಿಂದ ನಡೆದುಕೊಂಡರೂ ತಾನು ಹೆಚ್ಚಿನವಳೇ ಎಂದು ತೋರಿಸುವ ಸುನೀತಿಯ ನಡತೆ ಅವರನ್ನು ದುಃಖಕ್ಕೀಡುಮಾಡಿತು. ಅದನ್ನೆಲ್ಲ ಸೂಕ್ಷ್ಮವಾಗಿ ಅರಿತ ವಿನಯ ಸುನೀತಿಯನ್ನು ದಾರಿಗೆ ತರಬೇಕೆಂದು ಎಷ್ಟೋ ಧೈರ್ಯ ಮಾಡಿದರೂ, ಮನೆಗೆ ಬಂದ ಕೂಡಲೇ ಏನಾದರೂ, ಒಂದು 'ಫಿರ್ಯಾದೆ' ಯನ್ನು ಗರ್ಜಿಸುವ ಧ್ವನಿಯಲ್ಲಿ ಉಸುರುವ ಹೆಂಡತಿಯ ಕೆಂಗಣ್ಣಿನ ನೋಟದಲ್ಲಿಯೇ ನಡುಗಿಬಿಡುತ್ತಿದ್ದ. ಧೈರ್ಯವುಳ್ಳ ಕಠೋರ ಮನುಷ್ಯ ಶಾಂತತೆಯನ್ನು ತಂದುಕೊಂಡು ವರ್ತಿಸಬಹುದು. ಆದರೆ ಶಾಂತಮನುಷ್ಯ ಧೈರ್ಯ ತಂದುಕೊಂಡು ಕಠೋರವುಳ್ಳವನಾಗಬೇಕಾದರೆ ತಿಂಗಳು, ವರ್ಷಗಳು ಕಳೆಯುವವೇನೋ? ಪ್ರತಿಯೊಂದು ಕಾರ್ಯದಲ್ಲಿ ತನ್ನ ರೂಪದ ಸಿರಿವಂತಿಕೆಯ ಹಿರಿಮೆಯನ್ನು ತೋರಿಸುವ ಹೆಂಡತಿಯನ್ನು ನೋಡಿದಾಗ್ಗೆ, ಅಸಹನೆ ಮೀರುತ್ತಿತ್ತೇನೋ ಸಹಜ; ಆದರೆ ಆಕೆಯನ್ನು ಗದರಿಸಿ ಬುದ್ಧಿಹೇಳುವ ಧೈರ್ಯ ಅವನಲ್ಲಿ ಬರುವ ಲಕ್ಷಣಗಳೇ ಕಾಣಲಿಲ್ಲ. ಮನೆಯಲ್ಲಿ ನಡೆಯುವ ಈ 'ಪೀಕಲಾಟ' ವನ್ನು ಹೇಗೆ ತೊಲಗಿಸಬೇಕೆಂಬುದೇ ಅವನ ವಿಚಾರ. ಹೆಂಡತಿಗೆ ಬುದ್ಧಿ ಹೇಳಬೇಕೆಂದರೆ ಒಮ್ಮೆಲೆ ಆಗುವ ಪರಿಣಾಮಗಳು ಒಳಿತೊ, ಕೆಡುಕೋ ಎಂಬುದಕ್ಕೆ ಹೆದರಿದ್ದ. ಬಡತನ ನೋಸಿ, ಮಗನಿಗೆ ಕಲಿಸಿ ಅವನಿಗೆ ನವಕರಿ ಹತ್ತಿದಾಗ್ಗೆ,

ಆನಂದ ಜೀವನದಲ್ಲಿರಬೇಕೆನ್ನುವ ತಂದೆತಾಯಿಗಳನ್ನು ಊರಿಗೆ ಕಳು ಹಿಸಬೇಕೆಂದರೆ ಮನವು ಎಳ್ಳಷ್ಟೂ ಒಪ್ಪದು. ಒಂದು ದಿವಸ ಹೆಂಡತಿಗೆ ಹೇಳಬೇಕೆಂಬ ವಿಚಾರ. ಮತ್ತೊಂದು ದಿನ ತಂದೆತಾಯಿಗಳನ್ನು ಊರಿಗೆ ಕಳುಹಿಸಬೇಕೆನ್ನುವ ವಿಚಾರ. ಹೀಗೆ ಮಾಡುತ್ತ ಸುಳ್ಳೇ ದಿನಗಳೆದು ಕಡೆಗೊಮ್ಮೆ ಅವನ ತಂದೆಗೆ ಹೇಳಿಬಿಟ್ಟ. "ಅಪ್ಪಾ, ನಾನು ಹೇಳುವದನ್ನು ಎಂದಿಗೂ ತಪ್ಪು ತಿಳಿಯಬೇಡ. ಆಕೆಗೂ ನಿಮಗೂ ಬಗೆ ಹರಿಯದ ವಾತಾ ವರಣದಲ್ಲಿ ಕೂಡಿರುವದರಿಂದ ಎಳ್ಳಷ್ಟೂ ಸುಖವಾಗಲಾರದು. ತಿಂಗಳಿಗೆ ಬರುವ ಪಗಾರದಲ್ಲಿ ನಿಮಗೆ ಐವತ್ತು ರೂಪಾಯಿಗಳನ್ನು ಕಳುಹುತ್ತೇನೆ. ಊರಿಗೆ ಹೋಗಿಬಿಡಿರಿ" ಎಂದು ಮುಖ ಸಣ್ಣಮಾಡಿದ

ಮುದುಕ ಸುಮ್ಮನೆ ಕೇಳಿ ಸಮ್ಮತಿಸಿದ.

ಮರುದಿನ ಊರಿಗೆ ಹೋಗುವ ತಂದೆತಾಯಿಗಳನ್ನು ಟಾಂಗೆಯಲ್ಲಿ ಕುಳ್ಳಿರಿಸಿದಾಗ, ಅವನ ತಂದೆ ಹೇಳಿದ "ತಮ್ಮಾ ದೇವರು ನಿನ್ನ ಜೀವನವನ್ನು ಸುಖಮಯ ಮಾಡಲಿ. ನೀನು ಸುಖದಿಂದ ಇರುವದನ್ನು ನಮ್ಮ ಕಣ್ಣುಗಳು ನೋಡಿದರೆ ಸಾಕು. ಸಿರಿವಂತರ ಹುಡುಗೆ. ಇನ್ನೂ ಚಿಕ್ಕವಳು ಬುದ್ಧಿಬಂದಿಲ್ಲ. ಹೊಸದಾಗಿ ಬಂದವರಿಗೆ ಹೀಗಾಗುವುದು ಸಹಜವೇ. ಮಗೂ ಸುನೀತಿಯನ್ನು ಯೋಗ್ಯ ಹೆಂಡತಿಯನ್ನಾಗಿರಿಸಿಕೊಳ್ಳುವದು ನಿನ್ನ ಕರ್ತವ್ಯ".

ಕಣ್ಣೀರನ್ನೊರಸಿಕೊಂಡು ವಿನಯ ತಂದೆತಾಯಿಗಳನ್ನು ಬೀಳ್ಕೊಟ್ಟ. ಆಫೀಸಿಗೆ ಹೊತ್ತಾಗುವದೆಂದು ಮನೆಯ ಒಳಗೆ ಬಂದಾಗ ಸುನೀತಿ ಸೆರಗಿನಿಂದ ಮುಖಮುಚ್ಚಿಕೊಂಡು ಅಳುತ್ತಿರುವುದನ್ನು ನೋಡಿದಾಗ ಅತಿ ಆಶ್ಚರ್ಯ ವಾದರೂ ಏಕೆ ಎಂದೂ ಕೇಳಲಿಲ್ಲ. ಹಾಗೆಯೇ ನಾಯ್ಕಲ್ಲನ್ನು ತೆಗೆದುಕೊಂಡು ಹೊರಟುಬಿಟ್ಟ.

## (೨)

ವಿನಯನಿಗೆ ತಿಂಗಳೊಂದಕ್ಕೆ ನೂರೈವತ್ತು ರೂಪಾಯಿ ಸಂಬಳ ಬರು ತ್ತಿರುವದನ್ನು ನೋಡಿದರೆ ಅವನೇನೂ ಬಡವನಲ್ಲ ಎಂದೆನಿಸುವದು ಆದರೆ ಅವನ ವಿದ್ಯಾರ್ಥಿ ಜೀವನ ತೀರ ಬಡತನದಲ್ಲಿಯೇ ಕಳೆದದ್ದರಿಂದ ಅಷ್ಟು ಆಡಂಬರದಿಂದ ಖರ್ಚುಮಾಡುವುದನ್ನು ನೌಕರಿ ಹತ್ತಿ ಒಂದು ವರ್ಷ ವಾಗುತ್ತಾ ಬಂದರೂ ಕಲಿತಿರಲಿಲ್ಲ. ನಿಜವಾಗಿಯೂ ಅವನದು ಸುಸಂಸ್ಕೃತ ಮನಸ್ಸು; ಯಾವುದಕ್ಕೂ ಗೊಂದಲ ಮಾಡುತ್ತಿರಲಿಲ್ಲ. ಏನಾದರನ್ನು

ಮಾಡುತ್ತಿದ್ದಾಗೆ ಶಾಂತರೀತಿಯಿಂದ ನಡೆಯಿಸುತ್ತಿದ್ದ. ಜನರಿಗೆ ಹಾನಿಮಾಡಬೇಕೆ ನ್ನುವ ಉದ್ದೇಶದವನೂ ಅಲ್ಲ. ತನ್ನ ಹಿತವನ್ನೇ ನೋಡಬೇಕೆನ್ನುವವನೂ ಅಲ್ಲ. ಜಗತ್ತಿನಲ್ಲಿ ಮಹತ್ಕೀರ್ತಿಯನ್ನು ಪಡೆಯಬೇಕೆನ್ನುವವನಂತೂ ಅಲ್ಲವೇ ಅಲ್ಲ. ಹುಟ್ಟಿಬಂದದ್ದಕ್ಕೆ ಸುಸೂತ್ರವಾಗಿ ನೆರೆಹೊರೆಯವರಿಗೆ ಬೇಕಾಗಿಕೊಂಡು ಜೀವನ ನೂಕಿರಬೇಕೆನ್ನುವ ತೀರ ಸಾದಾಮನುಷ್ಯ. ಇಂಥ ಮನುಷ್ಯನಿಗೇನೂ ದೇವರು ಕಡಿಮೆಮಾಡಿರಲಿಲ್ಲ. ಅವನು ನಿರೀಕ್ಷಿಸಿದುದಕ್ಕಿಂತ ಹೆಚ್ಚಿನ ಮಡದಿಯೇ ದೊರಕಿದ್ದಳು, ಎಲ್ಲ ರೀತಿಯಲ್ಲಿ. ಆದರೆ ಸಿರಿವಂತಿಕೆ, ರೂಪದ ಗರ್ವ ಮಾತ್ರ ಅವನನ್ನು ಹಿಂಡಿಬಿಟ್ಟಿದ್ದಿತು.

ತಂದೆ ತಾಯಿಗಳನ್ನು ಊರಿಗೆ ಕಳುಹಿ ಹತ್ತು ಹದಿನೈದು ದಿವಸಗಳಾ ಗಿದ್ದರೂ, ಸುನೀತಿಯು ಕೂಡ ಗಂಡ ಹೆಂಡಿರ ಅದೆಷ್ಟೋ ಪ್ರೀತಿ ಸಲುಗೆಯಿಂದ ಒಂದೂ ದಿವಸ ಮಾತಾಡಿರಲಿಲ್ಲ. ಮಾವ ಅತ್ತೆಯವರನ್ನು ಊರಿಗೆ ಕಳು ಹಿದ್ದಕ್ಕಾಗಿ ವಿನಯ ಮನಸ್ಸಿಗೆ ಹಚ್ಚಿಕೊಂಡಿರಬೇಕೆಂದು ಆಕೆ ತಿಳಿದಳು. ಆದರೆ ಏನನ್ನಾದರೂ ಮಾತನಾಡಬಾರದೇತಕ್ಕೆ? ತನ್ನ ಮೇಲೆ ತೀರ ಇಷ್ಟು ಕೋಪವೇ ಎಂದೂ ಅಂದುಕೊಳ್ಳುವಳು. ಯಾವಾಗಾದರೊಮ್ಮೆ ಪ್ರೀತಿ ಯಿಂದ ವಿನಯ ಮಾತನಾಡುವುದನ್ನು ನೋಡಿದರೆ ಹಾಗೇನೂ ಇರಲಿಕ್ಕಿಲ್ಲ ವೆಂದೂ ಅಂದುಕೊಳ್ಳುವಳು.

ಸಂಜೆಯ ಆರು ಗಂಟೆಯ ಸುಮಾರು ವಿನಯನಿನ್ನೂ ಆಫೀಸಿನಿಂದ ಏಕೆ ಬರಲಿಲ್ಲವೆಂದು ಸುನೀತಿ ಮುಂದಿನ ಬಾಗಿಲ ತೆರೆಯುವದಕ್ಕೂ ವಿನಯ ಕಂಪೌಡಿನ ಬಾಗಿಲಿಗೆ ಸಾಯ್ಕಲ ಇಳಿಯುವುದಕ್ಕೂ ಸರಿಹೋಯಿತು. ವಿನಯನೊಮ್ಮೆ ಆಕೆಯನ್ನು ನೋಡಿದ. ದಿನಕ್ಕಿಂತ ಹೆಚ್ಚು ಸಿಂಗಾರ ಮಾಡಿಕೊಂಡಿದ್ದಳು. ಆಕಾಶನೀಲ ಬಣ್ಣದ ರೇಶಿಮೆಯ ಸೀರೆಯನ್ನುಟ್ಟು ಅಚ್ಚ ಬಿಳಿಯ ಕುಪ್ಪಸ ತೊಟ್ಟಿದ್ದಳು. ಅಂದವಾಗಿ ಹಿಕ್ಕಿಕೊಂಡು ಬಿಡಿ ಮುಡಿಯನ್ನು ಕಟ್ಟಿ ಮಲ್ಲಿಗೆಯರಳ ಮಾಲೆಯನ್ನು ಮುಡಿದಿದ್ದಳು. ವಿನಯ ಆಕೆಯನ್ನು ನೋಡಿದವನೇ ಮುಗುಳು ನಗೆ ನಕ್ಕ. ಸುನೀತಿ ನಸುನಾಚಿ ಒಳ ಓಡಿದಳು.

ವಿನಯ ಮನೆಯಲ್ಲಿಯ ಬದಲಾವಣೆಗಳನ್ನು ನೋಡಿದಾಗಲಂತೂ ಅತಿ ವಿಸ್ಮಿತನಾದ. ಮೇಜು ಕುರ್ಚಿಗಳನ್ನೊಡಗೊಂಡು ಎಲ್ಲ ಸಾಮಾನು ಗಳನ್ನು ಓರಣದಿಂದ ಹೊಂದಿಸಿದ ಕೌಶಲ್ಯವನ್ನು ನೋಡಿ ಸುನೀತಿಯ ವಿದ್ಯೆಯ

ಪ್ರಭಾವದ ಸಂಸ್ಕೃತಿಯನ್ನು ಮನದಲ್ಲಿಯೇ ಹೊಗಳಿದ. ಸುನೀತಿ ಚಹಕ್ಕೆಂದು ಒಲೆಗೆ 'ಎಸರಿ'ಟ್ಟಿದ್ದಳು. ವಿನಯ ಮಾತ್ರ ಬಂದವನೇ ಅಟ್ಟದ ಮೇಲಿನ ಮಲಗುವ ಕೋಣೆಗೆ ಹೋದ. ಅಲ್ಲಿಯೂ ಕೂಡ ಬದಲಾವಣೆ. ಶೆಲ್ಪಿನಲ್ಲಿ ಸಾಲಾಗಿಟ್ಟ ಪುಸ್ತಕಗಳು, ಟೇಬಲ ಮೇಲಿನ ವಸ್ತುಗಳು, ಗೋಡೆಯ ಮೇಲಿರುವ ಫೋಟೊಗಳು ಕೂಡ ಅಚ್ಚುಕಟ್ಟು ತನವನ್ನು ಪಡೆದಿದ್ದವು. ಒಳಗೆ ಬಂದವನೇ ಕೋಟನ್ನು ಕಳೆದಿಟ್ಟು ಬಾಗಿಲಿಗೆದುರಾದ ಕನ್ನಡಿಯಲ್ಲಿ ಮುಖನೋಡಿಕೊಂಡು ಮೇಲಕ್ಕೆತ್ತುವಷ್ಟರಲ್ಲಿ ಅವನಿಗೆ ತನ್ನ ಲಗ್ನದಲ್ಲಿ ತೆಗೆಯಿಸಿದ ಫೋಟೋ ಇದ್ದಿತು. ಇಬ್ಬರೂ ಎದ್ದು ನಿಂತು ತೆಗೆಯಿಸಿದ ಫೋಟೋವದು. ತಾನೇನೋ ಕುರ್ಚಿಯ ಮೇಲೆ ಕುಳಿತಿದ್ದ. ಸುನೀತಿಯು ಅವನ ಹಿಂದೆ, ಜರದ ಪೀತಾಂಬರವನ್ನುಟ್ಟು ನಿಂತಿದ್ದಳು. ಮುಗುಳು ನಗೆಯಿಂದ ಮಿನುಗುವ ನಸುನಾಚಿದ ಆ ಮುಗ್ಧ ಮುಖವನ್ನೊಮ್ಮೆ ನೋಡಿದಾಗ ಆ ಅರ್ಥಪೂರಿತ ನೋಟದಿಂದ ತನ್ನ ಹೃದಯವನ್ನು ಸೂರೆಗೊಳ್ಳುವಳೇನೋ ಅನ್ನುವ ಹಾಗೆ ತೋರಿದಳು. ಅದನ್ನು ನೋಡಿದ ಹಾಗೆಲ್ಲ ಇನ್ನೂ ನೋಡಬೇಕೆನ್ನಿಸಿತು. ಯಾವ ದೃಷ್ಟಿಯಿಂದ ನೋಡಿದರೂ ಸರಿಜೋಡಿ. ಆದರೆ ಆಕೆಯ ಗುಣಗಳಲ್ಲಿ ಸ್ವಲ್ಪ ಮಾರ್ಪಾಟಾಗಿದ್ದರೆ ಆದರ್ಶ ಸತಿಯೇ ಸರಿ ಎಂದುಕೊಳ್ಳುತ್ತಿರುವಷ್ಟರಲ್ಲಿ ಸುನೀತಿ ಚಹ ತೆಗೆದುಕೊಂಡು ಬಾಗಿಲಿಗೆ ಬಂದಳು. ವಿನಯ ಫೋಟೋ ನೋಡುತ್ತ ನಿಂತದ್ದನ್ನು ನೋಡಿ ಸ್ವಲ್ಪ ನಾಚಿದಳು. ಆಕೆ ಬಂದದ್ದನ್ನು ಅವ ಕನ್ನಡಿಯಲ್ಲಿ ಕಂಡ. ಆಕೆಯ ಮುಖ ಕನ್ನಡಿಯಲ್ಲಿ ನೋಡಿದಾಗಲೂ ಅನಿಸಿತವನಿಗೆ "ಈಗೇನಾಗಿದೆ ಆದರ್ಶ ಪತ್ನಿಯೇ ಇದ್ದಾಳಲ್ಲ" ಎಂದು ತಿರುಗಿ ನೋಡಿದ.

'ಚಹ ತೆಗೆದುಕೊಳ್ಳಿರಿ' ಆಕೆ ಕೇಳಿದಳು.

'ಏಕೆ? ನೀನು ಕುಡಿಯದಿರುವಾಗ ನನಗೊಬ್ಬನಿಗೆ ಚಹ ಮಾಡುವ ತೊಂದರೆಯನ್ನೇಕೆ ತೆಗೆದುಕೊಂಡೆ. ನಾನೇನೋ ಅಲ್ಲಿ ಇಲ್ಲಿ ಕುಡಿದು ಬಂದಿರುತ್ತೇನೆ.'

'ಚಹ ಎಷ್ಟು ಸಾರಿಯಾದರೂ ನಡೆಯುತ್ತದೆಯೆಂದು ನೀವೇ ಹೇಳುತ್ತಿರಲಿಲ್ಲವೇ? ಒಂದು ಕಪ್ಪು ಕುಡಿಯುವದೇನೂ ದೊಡ್ಡ ಮಾತಲ್ಲ'.

'ಇಂದಿನಿಂದ ನೀನೂ ದಿನಾಲು ಕುಡಿಯ ಹತ್ತಬೇಕು.'

'ನನಗೆ ಮನಸ್ಸಿಲ್ಲದಿದ್ದರೂ'

'ನೀನೂ ಕುಡಿಯುಲೇಬೇಕು.'

'ಮನಸ್ಸಿಲ್ಲವೆಂದರೂ ಹೀಗೆ ಹೇಳುವದೇನು ನನಗೆ ಸರಿಯೆನಿಸುವದಿಲ್ಲ.'

'ಹಾಗಾಗದು ಯಾರಾದರೂ ಜೋಡಿ ಇಲ್ಲದಿದ್ದರೆ ನನಗೆ ಕುಡಿಯುವ ಹಾಗಾಗುವುದಿಲ್ಲ. ಇನ್ನು ನೀನು ಸುರುಮಾಡು ನನ್ನ ಕೂಡ ಕುಡಿಯಲಿಕ್ಕೆ.'

'ಹಾಗಾದರೆ ಇಬ್ಬರೂ ಕೂಡಿಯೇ ಬಿಡೋಣ ಅಂದರೆ ಜೋಡಿಯಾಗು ವದು' ಎಂದು ಸುನೀತೆ ನಕ್ಕಳು.

'ಇಲ್ಲ, ನೀನು ಕುಡಿಯು ಹತ್ತುವದಕ್ಕಿಂತ ನಾನು ಬಿಡುವುದು ಬಹಳ ಕಠಿಣ. ಸ್ವಲ್ಪ ಚಹಕ್ಕೇನೂ ಆಗಲಾರದು' ಎಂದು ಆಕೆಯ ಕೈ ಹಿಡಿದು ತನ್ನ ಕಡೆಗೆ ಜಗ್ಗಿಕೊಂಡ. 'ಏಕೆ ಕುಡಿಯುವದಿಲ್ಲವೇ '

'ಹುಂ' ಎಂದಳು.

ಅವನಿಗೆ ತೀರಾ ವಿಸ್ಮಯವಾಯಿತು. ದಿನಾಲು ತನ್ನಂತೆಯೇ ನ್ಯಾಯ ವಾಗಬೇಕೆನ್ನುವ ಹೆಂಡತಿ ಇಂದು ತನ್ನ ಮಾತಿಗೆ ಕೂಡಲೇ ಹು ಎಂದ ದ್ದಕ್ಕೆ. ಅದಕ್ಕ ಆದ ಆನಂದಕ್ಕೆ ಪಾರವೇ ಇಲ್ಲ. ಆಕೆಯನ್ನು ಪಲ್ಲಂಗದ ಮೇಲೆ ಹತ್ತಿರ ಕೂಡಿಸಿಕೊಂಡ. ಆಕ ತಲೆಗೆ ಹಚ್ಚಿದ ಎಣ್ಣೆಯ ವಾಸನೆಯೂ ಮುಡಿದ ಮಲ್ಲಿಗೆಯರಳ ಮಾಲೆಯ ವಾಸನೆಯೂ ಅವನಿಗೆ ತೀರ ಮೋಹಕ ವೆನಿಸಿದವು. ಆಕೆಯ ಮೊಗವನ್ನೊಮ್ಮೆ ತನ್ನ ಕಡೆಗೆ ತಿರುಗಿಸಿ ಗದ್ದವನ್ನು ಹಿಡಿದು ಎತ್ತಿದ ಆಕೆಯ ನೋಟದಲ್ಲಿ ಪತಿಭಕ್ತಿಯ, ಆತುರತೆಯ ಭಾವ ವಿದ್ದಿತು. ವಿನಯನೊಮ್ಮೆ ಆಕೆಯನ್ನು ಭರನೆಳೆದು ಅಪ್ಪಿಕೊಂಡ. ಸುನೀ ತಿಯ ಕೆನ್ನೆ ಮೂಗು ತುಟಿಗಳ ಮೇಲೆ ಮುದ್ದಿನ ಮಳೆಗರೆದ. ಆತನ ತೋಳ ತೆಕ್ಕೆಯಕ್ಕಿಂತ ಹೆಚ್ಚಿನ ಆಸರವಿಲ್ಲವೆನಿಸಿತವಳಿಗೆ.

'ಸುನು, ಲಗ್ನವಾದಂದಿನಿಂದ ನನ್ನ ಕೂಡ ಅಷ್ಟು ಮಾತನಾಡುವದೇ ಇಲ್ಲವಲ್ಲ. ಏನಾದರೂ ಅಸಮಾಧಾನವಾಗಿದೆಯೇ.'

'ಇಲ್ಲ.'

'ಮತ್ತೆ ದಿನಾಲು ಹೀಗೇಕೆ ಮಾಡುತ್ತಿದ್ದಿಯೇ.'

'ನೀವೇ ಮಾತನಾಡುತ್ತಿರಲಿಲ್ಲವಲ್ಲ.'

'ಹಾಗೇನೂ ಇಲ್ಲ. ನಾನೇನಾದರೂ ಹೇಳಿದರೆ ವಿಪರೀತ ತಿಳಿದು ಕೊಂಡೀಯೆಂದು ಸುಮ್ಮನಿರುತ್ತಿದ್ದೆ. ಅಂದ ಮೇಲೆ ಸಿಟ್ಟು ನಿನ್ನ ಮೂಗಿನ

ಮೇಲೆಯೇ ಕುಣಿಯುತ್ತಿದ್ದಿರ ಬಹುದಲ್ಲವೇ' ಎಂದು ನಕ್ಕ. ಸುನೀತಿ ಅಷ್ಟು ಸಿಟ್ಟಿಗೇಳಲಿಲ್ಲ.

'ನಾವಿಬ್ಬರೂ ಇಂದು ಅಡ್ಡಾಡಲು ಹೋಗಬೇಕೆಂದು ಮಾಡಿದೆ.'

'ಒಹೋ ಅದಕ್ಕೆ ಏನು ಇಷ್ಟು ಸಿಂಗಾರ.'

'ಏಕೆ, ನಿಮಗದು ನೇರುವದಿಲ್ಲವೇ.'

'ನನಗೆ ಅಂಥ ತೋರಿಕೆಯೇ ನೇರುವದಿಲ್ಲ'

ಬೆಳಗಾಂವಿಯಲ್ಲಿ ದಿನಾಲು ಸಂಜೆಯು ಮುಂದೆ ಅಡ್ಡಾಡಿ ರೂಢವಿದ್ದ ಹುಡಿಗೆ ಎಷ್ಟೋ ಕನಸ್ಸು ಕಂಡಿದ್ದಳಾಕೆ. ಲಗ್ನವಾದ ಮೇಲೆ ತನ್ನಿಸಿಯುನ ಜೊತೆಗೆ ಸಾಯಂಕಾಲ ಅಡ್ಡಾಡಬೇಕೆಂದು. ಅಂಥವಳಿಗೆ ಸ್ವಲ್ಪ ನಿರಾಸೆಯೇ ಆಯಿತು. ಸ್ವಲ್ಪ ಸಿಟ್ಟಿನಲ್ಲಿಯೇ ನುಡಿದಳು.

'ನಾವೇನೂ ಬಜಾರದಲ್ಲಿ ಹೋಗಿ ನಿಲ್ಲುವದಿಲ್ಲ.'

'ಎಷ್ಟು ಲಗು ಸಿಟ್ಟಿಗೇಳುತ್ತಿಯೇ ನಿನ್ನ ಮನಸ್ಸಿನಂತೆಯೇ ಆಗಲಿ. ಸಿಟ್ಟು ಒಳ್ಳೇ ಉಪಾಯವಾಗಿದೆಯೇ ನಿನಗೆ ಅಲ್ಲವೇ' ಎಂದು ಮತ್ತೆ ಆಲಂಗಿಸಿದ. ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನಿದ್ದರು.

ಸುನೀತಿಯೇ ಸುರುಮಾಡಿದಳು "ಇದೊಂದು ಉಲನ ಕೋಟು ಆಗಿದೆ. ಈ ತಿಂಗಳಲ್ಲೆ ಇನ್ನೊಂದು ಹೊಲಿಸಿರಿ."

'ಅಂದರೆ.'

'ಅಂದರೇನು, ಇನ್ನೊಂದು ಹೊಲಿಸಿದರೆ ಉತ್ತಮವಲ್ಲವೇ,'

'ನಿನಗೇನೋ ಬೇಕಾಗಿದೆಯಂತ ಕಾಣಿಸುತ್ತದೆ. ಸೀರೆ ತೆಗೆದುಕೊಳ್ಳು ವಾಶೆ ಇದ್ದಿಯೇನು.'

'ನನಗೇನೂ ಬೇಡ. ನಮ್ಮಪ್ಪನೇನೂ ಕಡಿಮೆ ಕೊಡಲಿಲ್ಲ.'

'ನಿಮ್ಮಪ್ಪ ಎಷ್ಟು ದಿವಸ ನಿನಗೆ' ಎನ್ನಬೇಕೆಂದು ಮಾಡಿದ್ದ. ಆದರೆ ಈ ಸುಖ ತಪ್ಪೀತೆಂಬ ಭಾವನೆ ಅವನಿಗೆ 'ಈ ತಿಂಗಳು ಬೇಡ. ಮುಂದೆ ನೋಡಿದರಾಯಿತು. ರೂಪಾಯಿಗಳು ಉಳಿಯುವದೇ ಇಲ್ಲ ತಂದೆಯವರಿಗೆ ಕಳುಹಿಸಬೇಕು.'

'ಮುಂದಿನ ತಿಂಗಳು ಕಳುಹಿಸಿದರಾಯಿತು.'

'ನಿನಗೇನಾದರೂ ಬೇಕಾಗಿರಲು ಸಾಕು, ಹೇಳಿಬಿಡು.'

'ಏನೂ ಇಲ್ಲ ನಿಜ. ಮುಂದಿನ ತಿಂಗಳು ಬೇಕಾದರೆ ನೋಡಿದ ರಾಯಿತು' ಎಂದು ನಕ್ಕಳು.

'ಹಾಂ ಚಹಾ ತಣ್ಣಗಾಗಿ ಹೋಗಿದೆ.'

'ಎಲ್ಲಿ, ನೋಡೋಣ ಬೆಚ್ಚಗಿದೆ '

'ಛೆ. ನಾನೊಲ್ಲೆ ಚಲ್ಲಿಬಿಡು '

'ಅಂತೂ ನೀವೇ ಚಹಾಬಿಟ್ಟು ನನ್ನ ಜೋಡಿಯಾಗಬೇಕೆಂದು. ಆದಂತಾಯಿತು.'

'ಅದೇನೂ ಇಲ್ಲ. ಚಾ ಚಲ್ಲುವಷ್ಟು ತಣ್ಣಗಾಗಿರಲಿಕ್ಕಿಲ್ಲ. ಕುಡಿಯು ಬೇಕು ನೀನೂ' ಎಂದು ತಾನರ್ಧ ಆಕೆಯರ್ಧ ಕುಡಿದು ಮುಗಿಸಿದರು. ಅಪ್ಪುಡಲಿಕ್ಕೇನೂ ಹೋಗದೆ ನೈಸರ್ಗಿಕವಾದ ಪ್ರೇಮದ ಮಾತುಗಳಲ್ಲಿಯೇ ಆ ಸಂಜೆ ಕಳೆಯಿತು.

(೩)

ಯಾವ ಮನುಷ್ಯನಾದರೂ ತನ್ನ ವಿರುದ್ಧವಾಗಿ ಎರಡನೆಯವರು ನಡೆದರೆ ತನ್ನ ಬದಿಯನ್ನೇ ಸಮರ್ಥಿಸಲಿಚ್ಛಿಸುತ್ತಾನೆ. ಅಂಥವನನ್ನು ದಾರಿಗೆ ತರುವವರು ಹುಷಾರಾಗಿಯೇ ಇರಬೇಕು. ಒಮ್ಮೆಲೆ ಅವರೆದುರು ನಿಜವಾದ ದ್ದನ್ನೇ ಒಳ್ಳೆಯದನ್ನೇ ನುಡಿಯ ಹತ್ತಿದರೆ ಅವರೆಂದೂ ತಮ್ಮ ಬದಿಯನ್ನು ಬಿಡುವದಿಲ್ಲ. ಅಂದ ಮೇಲೆ ರೂಪ, ಸಿರಿವಂತಿಕೆ, ವಿದ್ಯೆಯುಳ್ಳ ಸುನೀತೆ ಸ್ವಲ್ಪ ಗರ್ವವಿದ್ದವಳೆಂದ ಬಳಿಕ ಆಕೆಯದೂ ಅಪವಾದವಾಗಿರಲಿಲ್ಲ. ಸುನೀತಿಯು ಒಂದು ತರದ ಆರಾಮೀ ಜೀವನವನ್ನೇನೊ ಕಳೆದಿದ್ದಳು. ಸಿಟ್ಟು ಸಿಡುಕು, ಸ್ವಲ್ಪ ಗರ್ವ ಆಕೆಯ ಜೀವನದಲ್ಲಿ ಮಾರ್ವಟ್ಟ ಗುಣಗಳೇ. ಆದರೂ ಸುನೀತಿಯನ್ನು ದಾರಿಗೆ ತರುವುದು ದುಸ್ತರವಾದ ಮಾತೇನೂ ಆಗಿರಲಿಲ್ಲ. ಆದರೆ ಅದಕ್ಕೆ ತಕ್ಕ ಹಂಚಿಕೆಯೇ ಬೇಕಾಗಿತ್ತು.

ವಿನಯನಿಗೆ ದೊಡ್ಡ ಸಮಸ್ಯೆ. ನಾಲ್ಕು ಐದು ತಿಂಗಳು ಕಳೆದರೂ ತಂದೆಗೆ ರೂಪಾಯಿಗಳನ್ನು ಕಳುಹಿಸಲು ಆಸ್ಪದವನ್ನೇ ಕೊಟ್ಟಿರಲಿಲ್ಲ. ಕಲಿಯದ ಅತ್ತೆ ಮಾವಂದಿರಕ್ಕಿಂತ ಕಲಿತ ತಾನೇ ಬುದ್ಧಿವಂತಳೆಂಬ ತಿಳುವಳಿ ಕೆಯೇ ಇನ್ನೂ. ನವಕರಿ ಹಿಡಿದು ಬಹಳ ದಿವಸಗಳಾಗದ ದೊಡ್ಡ ಪಗಾರದ

ತರುಣನ ಹೆಂಡತಿ. ಪ್ರಪಂಚದ ಜ್ಞಾನವೇ ಬಂದಿರಲಿಲ್ಲ ತನ್ನವರು ಯಾರು, ಹೆರವರ ಕೂಡ ಹೇಗೆ ನಡೆಯಬೇಕು ಎಂಬುದು ಆಕೆ ಇನ್ನೂ ಕಲಿಯಬೇಕಾದ ವಿಷಯವೇನೋ ಸರಿ. ಆದರೆ ಎಲ್ಲವೂ ಗೊತ್ತಿದೆಯೆಂದು ತಿಳಿದುಕೊಂಡದ್ದೇ ಸುನೀತಿಗೆ ತಿಳಿದುಕೊಳ್ಳಬೇಕೆಂಬದಕ್ಕೆ ಆತಂಕ. ತಿಳಿಹೇಳಬೇಕೆನ್ನುವ ವಿನಯನಿಗೂ ದೊಡ್ಡ ಅಡ್ಡಿ. ಅಂತೆಲೆ ಹಾಗೆ ದಿವಸಕಳೆದಿದ್ದವು. ಸುನೀತಿ ತಿಂಗಳ ಪಗಾರವಾದೊಡನೆ ಅದನ್ನು ಕೊಳ್ಳಬೇಕು, ಇದನ್ನು ಕೊಳ್ಳಲೇ ಇಲ್ಲ ಎನ್ನುತ್ತಲೇ ನಾಲ್ಕಾರು ತಿಂಗಳು ಕಳೆದಿದ್ದುವು. ವಿನಯನಿಗೆ ಅನ್ನಿಸಿತು. ತಾನು ಎಂಥ ಕ್ರೂರ, ತಂದೆಯವರಿಗೆ ಇನ್ನೂ ರೂಪಾಯಿ ಕಳಿಸಲಿಲ್ಲವಲ್ಲವೆಂದು. ಆದರೆ ಆ ಕಳವಳದ ಶಕ್ತಿಯೇನೂ ಹೆಚ್ಚಾಗಿರಲಿಲ್ಲ. ಆಕೆಯ ಮುಖ ನೋಡಿದಾಗಲೇ ಓಡಿಹೋಗುತ್ತಿದ್ದಿತು. ಒಮ್ಮೊಮ್ಮೆ ಬಂದ ಸಿಟ್ಟಿನ ಭರದಲ್ಲಿ ಆಕೆಯನ್ನು ಥಳಿಸಿ ಬಿಡಲೇ ಎಂಬ ರಭಸ ಮಾಡುತ್ತಿದ್ದ. ಆದರೆ ದಾರಿಗೆ ಹತ್ತುತ್ತಿರುವಾಕೆಯನ್ನು ಮತ್ತೆ ಮಾತಿನಿಂದ ಹಿಂದೋಡಿಸುವದಂತೂ ಅವನ ಮನಸ್ಸಿಗೆ ಬಂದಿರಲಿಲ್ಲ. ತಾನೆಂಥ ಕಟುಕ, ಮರುಳ ಎಂದುಕೊಳ್ಳುತ್ತಿದ್ದ ಬರೀ.

ಅಂದು ಆಫೀಸ ಬಿಟ್ಟ ಮೇಲೆ ಪೇಟೆಯಲ್ಲಿ ಒಂದು ಧೋತರ ಜೋಡನ್ನು ಕೊಂಡು ಮನೆಗೆ ಹಿಂತಿರುಗುತ್ತಿದ್ದ. ದಾರಿಯಲ್ಲಿ ಕೂಡಿದ ಗೆಳೆಯರೆಲ್ಲರೂ ಆ ನಾಜೂಕಿನ ಸುಂದರ ದಡಿಯುಳ್ಳ (ಅಂಚು) ಧೋತರ ನೋಡಿ ಅತಿಶಯ ಹೊಗಳಿದ್ದರು. ಒಬ್ಬನಂದಿದ್ದ, ಎಲ್ಲಿ ಸಿಕ್ಕವು ನಿಮಗೆ ಈ ಜೊಡಿ ಚಲೋ ಹೊಡೆದಿರ್ರೆಪಾ. ಥಡಿನೋಡಿದರೆ ನಿಮ್ಮ Sense of Beauty and fashions appreciate ಮಾಡು ಹಾಂಗಿ ಆಗ್ತದ ಮುಂತಾಗಿ. ಆಗ ಅವನಿಗೆ ಹಿಂದಿನ ಕಾಲೇಜದ ದಿವಸಗಳು ನೆನಪಾದವು. ತನ್ನ ಅತಿ ಪ್ರಿಯ ಸ್ನೇಹಿತ ಶಂಕರ ತಾನೊಮ್ಮೆ ಅಂಥ ಧೋತರ ಜೋಡನ್ನು ಕೊಂಡಾಗ ನುಡಿದಿದ್ದ. "ಧೋತರ ಜೋಡಿಗಳೇನೋ ಅತ್ಯುತ್ತಮವಾಗಿವ. ಆದರೆ ನೀನು ಇಷ್ಟ ಖರ್ಚು ಮಾಡಬಾರದಾಗಿದ್ದಿತು."

ಮನೆಯಲ್ಲಿ ತಂದೆಯವರಂತೂ 'ಲೆಕ್ಚರ' ಹೊಡೆದಿದ್ದರು. "ತಮ್ಮಾ ನೀವೇನೋ ಕಾಲೇಜದ ಶ್ರೀಮಂತ ಹುಡುಗರನ್ನು ನೋಡುತ್ತೀರಿ. ಅವರಂತೆಯೇ ಮಾಡಬೇಕೆನ್ನುತ್ತೀರಿ. ಆದರೆ ಇಷ್ಟು ರೂಪಾಯಿ ಕೊಟ್ಟು ಬರಿ ದೋತರ ತಗದುಕೊಂಡರೆ ಹೇಗೆ? ನಾವು ಹೇಗಿದ್ದೇವೆಯೆಂಬುದು ಗೊತ್ತಿಲ್ಲವೇ. ಹರೆಯದ ವಯಸ್ಸಿನಲ್ಲಿ ಐಷರಾಮು ಮಾಡಬೇಕೆನ್ನಿಸುವದು ನಾವೇನೂ

ಬೇಡವೆನ್ನುವದಿಲ್ಲ. ನೀನು ದುಡಿಯುವಾಗ ಬೇಕಾದದ್ದನ್ನು ಮಾಡಬಹುದು" ಮುಂತಾಗಿ. ಅಷ್ಟು ಬಡತನದಲ್ಲಿ ಕಲಿಸಿದ ತಂದೆತಾಯಿಗಳಿಗೆ ಇನ್ನೂ ರೂಪಾಯಿಗಳನ್ನೇ ಕಳುಹಿಸಿರಲಿಲ್ಲ. ಅದನ್ನೆಲ್ಲ ನೆನಸಿ ಕೊಂಡಾಗ ಮೈ ಜುಮ್ಮೆಂದಿತು. ಅಷ್ಟರಲ್ಲಿ ಶಂಕರನು ಬೆಟ್ಟಿಯಾದ ಉಪಚಾರದ ಮಾತುಗಳ ನ್ನಾಡಿ ಮನೆಗೆ ನಡೆದುಬಿಟ್ಟ. ಆ ಸುಂದರ, ಶಾಂತ ಬೆಳದಿಂಗಳಿನ ಸಂಜೆಯನ್ನು ಅವನು ಅನುಭವಿಸದೇ ಹೋದ. ವಿನಯ ರಾತ್ರಿಯೂಟ ಮುಗಿಸಿಕೊಂಡು ತನ್ನ ಮಲಗುವ ಕೊರಡಿಯಲ್ಲಿ ಪಲ್ಲಂಗದ ಮೇಲೆ ಅಡ್ಡಾಗಿದ್ದ. ಊರಿನ ಕಡ್ಡಿಯ ವಾಸನೆಯೆಲ್ಲ ಕೋಣೆಯನ್ನು ತುಂಬಿದ್ದಿತು. ತೆರದ ಕಿಟಕಿಯಿಂದ ತಂಗಾಳಿ ಸುಳಿಯುತ್ತಿತ್ತು. ವಿದ್ಯುದ್ದೀಪದ ಪ್ರಕಾಶವೆಲ್ಲ ಹರಡಿದ್ದರೂ, ಬೆಳದಿಂಗಳಿನ ಸವಿಯ ಅನುಭವವನ್ನು ಪಡೆಯಬಹುದಾಗಿದ್ದಿತು. ಊಟ ತೀರಿಸಿಕೊಂಡು ಸುನೀತಿಯೂ ಬಂದಳು.

'ಎಷ್ಟು ಸುವಾಸಿಕ ಇವೆ ಈ ಕಡ್ಡಿಗಳು. ಇಂದು ತಂದೀರೇನು' ವಿನಯ ಸುಮ್ಮನೇ ಬಿದ್ದುಕೊಂಡಿದ್ದ. ಸುನೀತಿ ಮೇಜಿನ ಮೇಲಿನ ಕಟ್ಟನ್ನು ಬಿಚ್ಚಿ ಕೇಳಿದಳು. 'ಧೋತರ ಜೊತೆಯನ್ನು ತಂದಿದ್ದೀರಾ. ಏನು ಕೊಟ್ಟಿರಿ. ಆದರೂ ಸುಮ್ಮನೇ ಇದ್ದ. ಮೊಟ್ಟ ಮೊದಲು ಬಂದ ಸುನೀತಿಯಾಗಿದ್ದರೆ ಏನೇನು ರಂಬಾಟದ ಮಾತುಗಳನ್ನಾಡುತ್ತಿದ್ದಳೋ ಏನೋ. ಅವನ ಹತ್ತಿರ ಬಂದು ಸಾವಧಾನವಾಗಿಯೇ ಕೇಳಿದಳು.

'ಏಕೆ ಮಾತನಾಡುವದಿಲ್ಲ. ಆಯಾಸ ಬಹಳವಾಗಿದೆಯೇ' ಮತ್ತೆ ಅವನ ಹತ್ತಿರ ಕೂತು ಅವನ ಮುಂದಲೆಯನ್ನು ನೇವರಿಸಿದಳು.

'ಅದೇನೂ ಇಲ್ಲ'

'ಹಾಗಾದರೆ ಮಾತನಾಡುವದೇ ಇಲ್ಲವಲ್ಲ'

'ಏನು ಮಾತನಾಡಲಿ'

'ಹಾ ದಿನಾಲು ಕಾಳಿದಾಸ ಶೆಕ್ಸಪಿಯರನ ಕಾವ್ಯ ಹೀಗೆ, ಶಾನಮಾತಿನ ಚಾಕಚಕ್ಯ ಹೀಗೆ ಎಂದು ತಾಸು ತಾಸು ಮಾತನಾಡುವವರು ಇಂದು ಸುಮ್ಮನೇ ಇದ್ದೀರಿ'.

'ದಿನಾಲು ಕಾಳಿದಾಸ ಶಾರವಿಚಾರವಾದರೆ ನಮ್ಮ ಬಾಳಿನ ವಿಚಾರ ಬೇಡವೇ'

'ನಿನ್ನನ್ನು ಅಷ್ಟು ಚಿಂತೆಗೀಡುಮಾಡಿದ ನಮ್ಮ ಬಾಳಿನ ವಿಚಾರ ಯಾವದು'

'ಏನೂ ಇಲ್ಲ ಸುಮ್ಮನೇ'

'ನನ್ನ ಮುಂದೆ ಹೇಳದಷ್ಟು ಗೂಢವೇ ಹಾಗಾದರೆ'

'ನಿನ್ನ ಮುಂದೆ ಹೇಳದ ಸಂಗತಿಯೇ ಇಲ್ಲವಲ್ಲ'

'ಹಾಗಾದರೆ ಅಂಥದೇನದು'. ಎಂದು ತಟ್ಟನೆ ಕೇಳಿ ಸುಮ್ಮನಾದಳು. ಆಕೆಗೆ ಮರುಕ್ಷಣ ವಿಚಾರವೇ ಬೇರೆ. 'ಹಾಗಾದರೆ ನನಗೆ ಗೊತ್ತಿಲ್ಲದ ಸಂಗತಿ ಒಂದೂ ಇಲ್ಲವೇ. ನನ್ನೆದುರು ಎಲ್ಲವನ್ನೂ ಹೇಳುತ್ತ ಬಂದಿದ್ದಾರೆಯೇ ಎಂದು ಕೊಂಡು ಹಿಂದಿನ ಎಲ್ಲ ಆದಹೋದ ಸಂಗತಿಗಳನ್ನೆಲ್ಲ ನೆನೆದುಕೊಳ್ಳುವದರಲ್ಲಿ ತೊಡಗಿದಳಾಕೆ. ಕೊನೆಗೊಮ್ಮೆ ಕೇಳಿದಳು.

'ನನ್ನಲ್ಲಿ ಅಷ್ಟು ನಂಬಿಕೆ, ವಿಶ್ವಾಸಗಳೇ' ಎಂದು ಕಿರುನಗೆಯ ಮೊಗದ ಓರೆಗಣ್ಣಿನಿಂದ ನೋಡಿದಳು.

ವಿನಯ ಎದ್ದು ದಿಂಬಿಗಾತ ಕೂತ. ಸುನೀತಿ ಅವನ ಎಡದೊಡೆಯ ಮೇಲೆ ತಲೆಯನ್ನಿಟ್ಟು ಅಡ್ಡಾದಳು.

'ಸುನೂ, ನೀನು ನನ್ನನ್ನು ಸಂಪೂರ್ಣ ಅರಿತೇ ಇಲ್ಲ. ನಿನ್ನಷ್ಟು ತೀರ ಸಮೀಪವದವರು ಯಾರು ನನಗೆ. ಮನೆಯ ಪ್ರತಿಯೊಂದು ಕಾರ್ಯದ ಹಿನ್ನೆಲೆಯಲ್ಲಿ ಎದ್ದು ಕಾಣುವವಳು ನೀನೇ ಅಲ್ಲವೇ. ಅಂಥವಳಲ್ಲಿ ನಂಬಿಗೆ ವಿಶ್ವಾಸದ ಕೊರತೆ ತೋರಿಸಲೇ' ಎಂದು ದೈನ್ಯತೆಯ ಧ್ವನಿಯಲ್ಲಿ ಮೆಲ್ಲನೇ ನುಡಿದ. ಸುನೀತಿಗೆ ಹೃದಯವೇ ಉಕ್ಕಿ ಬಂದಿತು. ತನ್ನ ಪತಿ ಎಷ್ಟು ವಿಶಾಲ ಹೃದಯಿ. ಆಗ ಅನ್ನಿಸಹತ್ತಿತವಳಿಗೆ ತನ್ನ ನಿಜವಾದ ಸ್ಥಾನಮಾನಗಳ ವಿಷಯಕ್ಕೆ. ಅಷ್ಟ ಇಷ್ಟು ಮಾತಿಗೆ ಸಿಟ್ಟಿಗೇಳುತ್ತಿದ್ದುದನ್ನು ನೆನೆಸಿಕೊಂಡಾಗ್ಗೆ ತನ್ನನ್ನೇ ಹಳಿದುಕೊಳ್ಳಲಾರಂಭಿಸಿದಳು.

ಗಂಭೀರ ಭಾವವನ್ನೇ ತಳೆದಿದ್ದ ವಿನಯನ ಮುಖದಲ್ಲಿ ಕಣ್ಣುಗಳೆರಡು ವಿದ್ಯುದ್ದೀಪದ ಪ್ರಕಾಶದಲ್ಲಿ ಹೊಳೆಯುತ್ತಿದ್ದವು. ಸುನೀತಿ ಏನನ್ನೊ ವಿಚಾರ ಮಾಡಿಯೇ ಮಾಡುತ್ತಿದ್ದಳು. ವಿನಯನೊಮ್ಮೆ ಆಕೆಯನ್ನು ತನ್ನ ತೆಕ್ಕೆಯಲ್ಲಿ ತೆಗೆದುಕೊಂಡು, ಆಕೆಯ ಮೊಗವನ್ನೊಮ್ಮೆ ತನ್ನ ಕಡೆಗೆ ತಿರುಗಿಸಿ ಆರಂಭಿಸಿದ 'ನನ್ನ ತಂದೆ ಮೊದಲು ನಿನ್ನನ್ನು ನೋಡಿ ಬಂದಾಗ್ಗೆ ನಾನು

ಕೇಳಿದುದು ಹುಡಿಗೆ ಕಲಿತವಳಿದ್ದಾಳೆಯೋ ಎಂದು. ಸಿರಿವಂತ ನೋಡಲಿಕ್ಕೆ ಒಳ್ಳೇ ಸುರೂಪಿಯೋ ಎಂದು ಅಲ್ಲ ಕಲಿತವಳಿದ್ದರೆ ಬಾಳು ಚೆನ್ನಾಗಿ ಸಾಗುವ ದೆಂಬ ಕಲ್ಪನೆ ನನಗೆ. ಅಷ್ಟು ಸುಸೂತ್ರವಾದ ಮನಸ್ಸಿನವಳೇ ದೊರೆಯಲಿಲ್ಲ. ನೀನು ಕಲಿತವಳೆಂದು ಭರವಸೆ ಇಟ್ಟಿದ್ದೆ. ನೀನು ನನ್ನ ನಿರೀಕ್ಷಣೆಯನ್ನು ಸ್ವಲ್ಪ ಮಟ್ಟಿಗೆ ನಿರಾಶೆ ಮಾಡಿಬಿಟ್ಟೆ. ಸುನೀತೆ ಗೊಂಬೆಯಂತೆ ಕೇಳುತ್ತಿದ್ದಳು ಮಾತ್ರ. ಅಂತಃಕರಣ ಭಾವದವನಾಗಿ ವಿನಯನೇ ಕೇಳಿದ. "ಸುನೂ, ನಿನಗೆ ಸಿಟ್ಟು ಬಂದಿತೇ" ವಿನಯನ ಮುಖವನ್ನೇ ದಿಟ್ಟಿಸಿ ನೋಡುತ್ತಿದ್ದ ಅವಳು ಏನನ್ನೂ ಉತ್ತರ ಕೊಡಲಿಲ್ಲ. ಅವನ ವಿಶಾಲ ನೇತ್ರಗಳ ಸ್ಥಿರದೃಷ್ಟಿಯಲ್ಲಿ ಪ್ರೇಮಸಾಮ್ರಾಜ್ಯದ ವಿಸ್ತಾರವನ್ನು ನೋಡುತ್ತಿದ್ದಳೇನೋ.

ಹಾಗೆಯೇ ಅವನೆದೆಯ ಮೇಲೆ ತಲೆಯನಿಟ್ಟು ಕಿಡಕಿಯ ಕಡೆಗೆ ನೋಡಿದಳು. ಪ್ರಶಾಂತವಾದ ಬೆಳದಿಂಗಳಲ್ಲಿ ಹೊಳೆಯುವ ಅರಳೀಗಿಡದ ಎಲೆಗಳು ಪಳಪಳನೇ ಸಪ್ಪಳ ಮಾಡುತ್ತಿದ್ದವು. ಆಕೆಗೆ ಅನಿಸಿತು ಆ ಎಲೆಗಳು ಕಿಲಕಿಲನೇ ನಪ್ಪಳ ಮಾಡುವವೇನೋ, ಆನಂದದಿಂದ ಆಟವಾಡುವವೇನೋ ನಿಜ. ಆದರೆ ಅವಕ್ಕಿರುವ ಗಿಡವು ಆಸರವಲ್ಲವೇ. ಅದಿಲ್ಲದಿದ್ದರೆ? ಆ ಗಿಡವು ಕೂಡ ಬೇರಿನಿಂದ ಭೂಮಿಯ ಆಸರ ಹಿಡಿದಿಲ್ಲವೇ. ಈ ಭೂಮಿಯೂ ಶೇಷನ ಹೆಡೆಯ ಆಸರ ಪಡೆದಿದೆಯಂತ. ಅದಕ್ಕ ಆನರವಿಲ್ಲದಿದ್ದರೆ? ಒಗೆದ ಒಂದು ಚೆಂಡಿನಂತೆ ಅಲ್ಲಿ ಇಲ್ಲಿ ಪುಟಿಯುತ್ತ ಎಲ್ಲಿಗೆ ಗತಿಗಾಣುತ್ತಿತ್ತೊ? ಹೀಗೆಲ್ಲ ಆಕೆ ವಿಚಾರಮಾಡುತ್ತಿರುವಾಗ್ಗೆ ಸೃಷ್ಟಿಯಲ್ಲಿಯ ವಸ್ತುಗಳಲ್ಲೆಲ್ಲ ಒಂದು ತರದ ಆಸರ ಪಡೆದ, ಪಡೆಯುವ ಒಲವೇ ಕಂಡುಬರುವಂತಿದೆಯೆಂದು ಕೊಂಡಳು. ವಿನಯನ ವಿಶಾಲ ಎದೆಯ ಮೇಲೆ ತಾನು ತನ್ನ ತಲೆಯನ್ನಿಟ್ಟಿ ದ್ದನ್ನು ಬದಿಗೆ ಮಾಡಿಕೊಂಡಳು. ನಿಜವಾಗಿಯೂ ಅವನ ಆಸರವಲ್ಲವೇ ಆಕೆಗೆ ಎಷ್ಟು ಹಿತಕರ, ಸುಖಕರ ಎಲ್ಲಕ್ಕೂ ಹೆಚ್ಚಿನದಲ್ಲವೇ. ಕಡೆಗೊಮ್ಮೆ ಆಕಯ ಕಣ್ಣಲ್ಲಿ ನೀರೂರಿದ್ದನ್ನು ವಿನಯ ನೋಡಿದ.

'ನಾನೇನಾದರೂ ತಪ್ಪು ಮಾಡಿದ್ದಲ್ಲಿ ನೀವು ತಿಳಿಹೇಳಬಾರದಾಗಿತ್ತೆ' ಎಂದು ಅವಳು ಅವನೆದೆಯ ಮೇಲೆ ಮತ್ತೆ ತಲೆಯನ್ನಿಟ್ಟು ಅಳಹತ್ತಿದಳು.

ಎಷ್ಟೋ ಹೊತ್ತು ಗಳೆಯಿತು.

ವಿನಯನೇ ಆರಂಭಿಸಿದ. 'ಐದಾರು ತಿಂಗಳಾಯಿತು ತಂದೆಯವರಿಗೆ ರೂಪಾಯಿ ಕೂಡ ಕಳುಹಿಸಿಲ್ಲ. ಒಂದು ಸಲವಾದರೂ ಸಿಟ್ಟಿಗೆದ್ದು ಅವರು

ಪತ್ರ ಬರೆದಿದ್ದಾರೆಯೇ. ಮಗನ ಕರ್ತವ್ಯ ನಾನು ಮರೆಯಬೇಕೇ ಇಂಥ ಸಂಗತಿಗಳು ನಿನಗೆ ತಿಳಿಯುವದಿಲ್ಲವೇ. ನೋಡು ಈಗ ಐವತ್ತು ರೂಪಾಯಿಗಳು ಖರ್ಚಾಗಿ ಹೋಗಿವೆ. ಸುಳ್ಳೆ ಅದಕ್ಕೆ. ಇದಕ್ಕೆ. ಕಳುಹಬೇಕೆಂದರೆ ನಮ್ಮ ಖರ್ಚಿಗೆ ಕಡಿಮೆ ಬೀಳುತ್ತವೆ.'

'ಇನ್ನೂ ಎಷ್ಟು ಬೇಕು.'

'ಕನಿಷ್ಟ ೫೦—೬೦ ರೂಪಾಯಿಗಳಾದರೂ ಬೇಕು. ಮುಂದಿನ ತಿಂಗಳು ಕಳುಹಿದರಾಯಿತು.'

'ನಾಳೆಯೇ ಕಳುಹಿಸಿ ನನ್ನ ಹತ್ತಿರ ನೂರಾರು ರೂಪಾಯಿಗಳಿವೆ.'

'ಈಗೇನು ಅಷ್ಟು ಬಿಡು. ಇನ್ನು ೧೫ ದಿವಸಗಳಲ್ಲಿ ಪಗಾರವಾದೊಡನೆ ಕಳಿಸಿದರಾಯಿತು.'

'ಏಕೆ ನಾನು ಕೊಟ್ಟರೇನಾಗುತ್ತದೆ. ಅವೂ ನಿಮ್ಮವಲ್ಲವೇ.'

ವಿನಾಯಕನಿಗೆ ಆನಂದ ಆಶ್ಚರ್ಯಗಳೆರಡೂ ಆಕೆಯ ಮುಖಸ್ತೈರ್ಯ ನಗುತ್ತ ಹೇಳಿದ 'ತಿರುಗಿ ಕೊಡದಿದ್ದಲ್ಲಿ ರಂಬಾಟ ಮಾಡಿದರೆ ಮತ್ತೆ' ಸಿಟ್ಟಾಗಬಹುದಾದ ಮಾತನ್ನು ನಕ್ಕು ಕೇಳಿದಾಗ ಆಕೆಗೂ ನಗು ಬಂದಿತು.—ಕಣ್ಣುಗಳಲ್ಲಿ ನೀರಿದ್ದರೂ ಕೂಡ.

'ತವರ್ಮನೆಗೆ ಕಳುಹಿಸಿ ಹಾಗಾದರೆ'

'ಇಲ್ಲಿಯಕ್ಕಿಂತ ಸುಖವಾಗಿರಲಿಕ್ಕೆ ಅಲ್ಲವೇ.'

'ಅಲ್ಲಿ ನಾನು ಸುಖಿಯಾಗಿರ ಬಲ್ಲೆನೆಂದು ನಿಮಗನಿಸುವದೇ'

'ಅದರಲ್ಲೇನು. ಇಲ್ಲಿಯ ಈ ಕಾಟ ತಪ್ಪಿದರೆ . . . ಇರಬಹುದು.'

'ಶಕ್ಯವೇ ಇಲ್ಲ' ಎಂದು ಗೋಣು ಹಾಕಿದಳು. ಆ ರಂಬಾಟದಲ್ಲಿರುವಷ್ಟು ಮಾಧುರ್ಯ ತವರ್ಮನೆಯ ಹಾಯಾದ ಜೀವನದಲ್ಲಿ ಸಿಗಲಿಕ್ಕಿಲ್ಲವೆಂದು ಆಕೆ ತಿಳಿದಿರಬೇಕು

'ಒಬ್ಬಳೇ ಮಗಳಿದ್ದಿಯೇ.'

'ಆದರೇನಾಯಿತು. ನೀವಿರುವದಿಲ್ಲವಲ್ಲ. ಒಂದು ಕ್ಷಣ ಕೂಡ ಕಳೆಯಲಾರೆ ನಿಮ್ಮನ್ನಗಲಿ.'

'ಎಷ್ಟು ಒಳ್ಳೆಯವಳೇ ನೀನು. ಸುನು' ಎಂದು ಆಕೆಯನ್ನು ಭರದಿಂದ ಅಪ್ಪಿಕೊಂಡ.

## (೪)

ಬಹಳ ದಿವಸಕ್ಕೊಂದು ತನ್ನ ಊರಿಗೆ ಹೋದ ಸುನೀತಿ ಮೂರು ನಾಲ್ಕು ದಿನಗಳಲ್ಲಿಯೇ ತಿರುಗಿ ಹೊರಡಲಿಕ್ಕೆ ತೋರಿಸಿದ ಆತುರತೆಯನ್ನು ನೋಡಿ ಅವಳ ತಾಯಿಯವರು ನಕ್ಕುನುಡಿದರು. ಎಷ್ಟೆ ಅವ್ವಾ ನಿನ್ನದು. ನಿನ್ನ ವಿನಯನೇನು ಹೋಗಿಬಿಡುವನೇ ಎಲ್ಲಿಯಾದರೂ. ಎಷ್ಟು ಲಗು ಮರೆತುಬಿಟ್ಟೆ ನಮ್ಮನ್ನು ಸುನೀತೆ ನಸುನಾಚಿ ಮುಗುಳುನಗೆ ನಕ್ಕಳು.

'ಭಾಗ್ಯಶಾಲಿ ಬಿಡಮ್ಮಾ, ಒಳ್ಳೆ ಗಂಡನನ್ನು ದೊರಕಿಸಿದಿ. ಸೌಖ್ಯ ವಂತಳಾಗು ತಾಯಿ' ಎಂದು ಅವಳ ತಾಯಿ ಹರಸುವ ಮುಂಚಿತವೇ ಆಕೆ 'ಅಮ್ಮಾ ಅವರು ನನ್ನಲ್ಲಿಟ್ಟಿರುವ ಪ್ರೀತಿವಿಶ್ವಾಸಗಳನ್ನು ನೋಡಿದರೆ ಅವರು ಎಷ್ಟು ದೊಡ್ಡ ಮನುಷ್ಯರೆಂಬದು ತಿಳಿದೀತು. ಅವರ ಪ್ರೇಮಗೌರವ ಕಾಯು ವದು ನನ್ನದಲ್ಲವೇ ಮತ್ತೆ' ಎಂದು ಲಗುಬಗೆಯಿಂದ ಸಾಮಾನು ಕಟ್ಟಿದಳು.

ಬೆಳಗಾಂವಿಯಿಂದ ಲೋಕಲ್ ಟ್ರೇನ್ ಸಂಜೆಯ ಆರೂವರೆಗೆ ಧಾರ ವಾಡವನ್ನು ತಲ ಪಿತು ಸುನೀತಿ ಸಾಮಾನುಗಳನ್ನು ಕೆಳಗಿರಿಸಿ ತನ್ನ ವಿನಯನ ನಿರೀಕ್ಷಣಮಾಡುವದೊರಳಗಾಗಿ ಶಂಕರ ಬಂದು ಕೇಳಿದ. 'ಈಗ ಬಂದಿರೇನು' 'ಹೌದು ಅವರು ಸ್ಟೇಶನಕ್ಕೆ ಬಂದಿಲ್ಲವೇ?'

'ಬಂದಹಾಗಿಲ್ಲ. ನಾನೂ ಅವಸರಮಾಡಿ ಆಫೀಸಿನಿಂದ ಬಂದೆ, ನಮ್ಮ ತಾಯಿಯವರು ಬರುವವರಿದ್ದರು. ಅವರೂ ಬರಲಿಲ್ಲ'.

ಸುನೀತಿ ಸ್ವಲ್ಪ ಹೊತ್ತು ನಿಂತಳು. ಶಂಕರನೇ 'ಕೂಲಿಯವನನ್ನು ಕರೆಯುತ್ತೇನೆ ತಡೆಯಿರಿ' ಎಂದು ಕೂಲಿ ಗೊತ್ತುಮಾಡಿ ಸಾಮಾನ ತೆಗೆದು ಕೊಂಡು, ಏನೋ ಮಾತಿನ ಸಂದರ್ಭಕ್ಕೆ ನಗುತ್ತ ಬರುವದಕ್ಕೂ (ಸ್ಟೇಶನ ಹೊರಗೆ) ವಿನಯ ಸಾಯ್ಕಲ್ಲಿನಿಂದ ಇಳಿದ. ಸುನೀತಿಯ ಕೂಡ ಶಂಕರನನ್ನು ನೋಡಿದಾಗ ಅವನ ಹೃದಯದಲ್ಲಿ, ಮುಂಗಾರ ಮಿಂಚೊಂದು ಹೊಡೆದು ಹೋಗಿರಬೇಕು. ಆದರೂ ಅದನ್ನು ತೋರಗೊಡದೆಯೇ ಶಂಕರನನ್ನು ಕೇಳಿದ. 'ನಿನ್ನ ತಾಯಿಯವರು ಬರಲಿಲ್ಲವೇನೋ'.

'ಬರಲಿಲ್ಲ ಬಹಳಮಾಡಿ ನಾಳೆ ಬೆಳಿಗ್ಗೆ ಬರಬಹುದು'

ವಿನಯ ಬರದಿದ್ದರೆ ಟಾಂಗೆಮಾಡಿ ಮನೆಗೆ ಕಳುಹಬೇಕೆಂದಿದ್ದ ಶಂಕರ ಅನ ಬಂದ ಬಳಿಕ ಅವರ ಕೂಡ ವಿನಯನ ಮನೆಗೇ ನಡೆದ. ಅಲ್ಲಿ ಸುನೀತಿ ಅವನಿಗೆ ಫಲಹಾರಮಾಡಿ ಹೋಗಿರೆಂದು ಒತ್ತಾಯಮಾಡಿದರೂ ಕೇಳದ

ಶಂಕರನಿಗೆ ವಿನಯು ಬಿಗುವಿನ ಧ್ವನಿಯಲ್ಲಿ ಕೇಳಿದ. 'ಏನೋ, ಮನೆಯಲ್ಲಿ ಏನಿಟ್ಟಿರಿ'?

'ಇಲ್ಲೊ ಅವ್ವ ಇಲ್ಲ ಆಕೆಯೂ ಒಬ್ಬಳೇ ಇದ್ದಾಳೆ'.

ವಿನಯು ಏನು ವಿಚಾರಮಾಡುತ್ತಿದ್ದನೇನೋ. ಶಂಕರ ಫಲಹಾರ ತೀರಿಸಿ ಹೋದಮೇಲೆ ಸುನೀತಿ 'ನೀವೇಕೆ ಕೂಡಲೇ ಸ್ಟೇಶನ್ನಕ್ಕೆ ಬರಲಿಲ್ಲ? ಅವರೇ ಕೂಲಿಗೆ ರೊಕ್ಕ ಕೊಟ್ಟರು ನಾನು ಬೇಡವೆಂದರೂ. ಅವರನ್ನು ಹಿಂದಿನಿಂದ ನೋಡಿದಾಗ್ಗೆ ನೀವೆ ಎಂದು ಭಾವಿಸಿದ್ದೆ'! ಎಂದು ಆಡಿದರೂ ಅವನಿಗೆ ಕೇಳಿಸಿರಲಿಕ್ಕಿಲ್ಲ; ಚಹವನ್ನಷ್ಟು ಮುಗಿಯಿಸಿ ಎದ್ದುಬಿಟ್ಟ.

ಶಂಕರನಂಥ ವಿನಯುನ ಗೆಳೆಯನ ಕೂಡ ಸುನೀತಿ ಸಲುಗೆಯಿಂದ ಮಾತನಾಡುತ್ತಿದ್ದಳೇನೋ ಸಹಜ. ಆದರೂ ವಿನಯು ತಪ್ಪು ತಿಳಿಯುತ್ತಿರಲಿಲ್ಲ. ಶಂಕರನ ತಾಯಿ ಮುಂದೆ ಏನೋ ಕಾರಣದಿಂದ ೮-೧೦ ದಿವಸಗಳಾದರೂ ಬಂದಿರಲಿಲ್ಲ ಅದಕ್ಕಾಗಿ ವಿನಯುನ ಸಂಶಯು ಬಲವಾಯಿತು. ಶಂಕರನ ಕೂಡ ವಿನಯುನ ಸಲುಗೆ ಕಡಿಮೆಯಾದರೂ ಸುನೀತಿಯು ಹರಟೆ ಕಡಿಮೆಯಾಗಿರಲಿಲ್ಲ. ಇದುಮಾತ್ರ ವಿನಯುನ ತಲೆಯನ್ನೇ ತಿರುಗಿಸಿಬಿಟ್ಟಿತ್ತು. ಶಂಕರನ ಕೂಡ ತಾನು ಹೀಗಿದ್ದರೆ ತನ್ನ ಗಂಡ ತಪ್ಪು ತಿಳಿಯುಬಹುದೇ ಎಂಬ ವಿಚಾರ ಸುನೀತಿ ಮಾಡಿರದಿದ್ದರೂ ಅದೇನೂ ಆಕೆಯು ತಪ್ಪಲ್ಲ ಪತಿಯು ಮೇಲೆ ಅಪಾರ ಪ್ರೇಮವಿರುವಾಗ ಆಕೆ ಅಂಥ ವಿಚಾರವನ್ನೇ ತರಲಾರಳು ಆದರೆ ಪ್ರಸಂಗಗಳು ಮಾತ್ರ ಹಾಗೆ ಕೂಡಿ ನಿಶ್ಚಿತವಾಗಿ ಗೊಂದಲಹಾಕಿಬಿಡುತ್ತವೆ. ವಿನಯು ಎಷ್ಟೋ ಶಾಂತಮನುಷ್ಯನಿದ್ದರೂ ಈ ವಿಷಯುದಲ್ಲಿ ತಾಳ್ಮೆ ಎಳ್ಳಷ್ಟೂ ಬರಲಿಲ್ಲ. ಏನಾದರೊಂದು ವಿಚಾರಮಾಡಿ, ಏನಾದರೊಂದು ನಿರ್ಧಾರಕ್ಕೆ ಬರುತ್ತಿದ್ದ. ದಿನ ಕಳೆದಹಾಗೆ ಅವನ ಸಂಶಯು ನಿವಾರಣೆಯಾಗಲಿಲ್ಲ.

ಹನ್ನೊಂದು ಗಂಟೆಗೆ ತನ್ನ ಆಫೀಸಿಗೆ ಹೋಗುವ ಮುನ್ನ ವಿನಯು ಹೇಳಿದ, 'ನೋಡು ಇಂದು ಸಾಹೇಬನ ಕೂಡ ಹಳ್ಳಿಯ ಮೇಲೆ ಹೋಗಿಬರುವ ಸಂಭವವಿದೆ. ನಾನು ಬರಲು ರಾತ್ರಿ ೯-೧೦ ಆಗಬಹುದು. ನೀನು ನನ್ನ ಸಲುವಾಗಿ ಹಾದಿನೋಡುವ ಕಾರಣವಿಲ್ಲ. ನೀನು ಊಟಮಾಡಿಬಿಡು. ನಾನೇನಾದರೂ ಹೊಡೆದೇ ಇರುತ್ತೇನೆ' ಎಂದು ಉಲ್ಲಸಿತ ವೃತ್ತಿಯಲ್ಲಿ ಸುನೀತಿಗೆ ಹೇಳಿ ತನ್ನ ಸಣ್ಣ ಬ್ಯಾಗ್ ತೆಗೆದುಕೊಂಡು ಹೊರಟ. ಹಿಂದಿನ ರಾತ್ರಿ ವಿನಯುನ ಕೆಂಗಣ್ಣುಗಳನ್ನೇ ನೋಡಿ ಹೃದಯು ನಡುಗಿದ ಸುನೀತಿ ಇಂದು

ವಿನಯನ ಮುಗುಳುನಗೆಯ ಮೊಗವನ್ನು ನೋಡಿದಾಗ ಆನಂದ ಉಕ್ಕಿ ಬಂದಿತೇನೋ. 'ತಡೆಯಿರಿ ಸ್ವಲ್ಪ' ಎಂದು ಎದ್ದು ಬಂದು ಹೇಳಿದಳು. 'ಆದಷ್ಟು ಕೂಡಲೇ ಬನ್ನಿರಿ. ನಾನೊಬ್ಬಳೇ ಮನೆಯಲ್ಲಿ. ಹೆದರಿಕೆಯಾಗುತ್ತದೆ.'

'ಹುಂ, ನೋಡುತ್ತೇನೆ' ಎಂದು ಹೊರಟೇಬಿಟ್ಟ. ದಾರಿಯಲ್ಲಿ ಏನೇನೋ ವಿಚಾರಮಾಡಿದ. "ಹಂ, ನಾನು ತಡವಾಗಿ ಬರುತ್ತೇನೆಂದರೂ ಕೂಡಲೇ ಬನ್ನಿರಿ ಅಂತೆ. ಸುಳ್ಳೇನೆವ. ಅಷ್ಟು ತಿಳಿಯುವದಿಲ್ಲವೇ" ಮತ್ತೆ ಏನೇನೋ.

ಊರ ಹೊರಗಿನ ಮನೆಯಾದ್ದರಿಂದ ತೀರ ಸಮೀಪದಲ್ಲಿ ಇತರ ಮನೆಗಳೂ ಇರಲಿಲ್ಲ. ಅಂದೇ ಸಂಜೆಯ ಸುಮಾರು, ಗಾಳಿ ಬಲವಾಗಿ ಒಂದೇ ಸಮನೇ ಬೀಸುತ್ತಿದ್ದಿತು. ಮನೆಗೆ ಬಂದ ದೂರದ ಬಳಗದವರ ಕೂಡ ಮಾತನಾಡಿ ಅವರು ಹೊರಟುಹೋದ ಅನಂತರ ದೇವರಿಗೆ ದೀವಿಗೆ ಹಚ್ಚಬೇಕೆಂದು ಒಳಗೆ ಹೋದಳು. ಮಬ್ಬುಗತ್ತಲವಾಗಿದ್ದರೂ ದೀವಿಗೆಗಳನ್ನು ಹಚ್ಚಿರಲಿಲ್ಲ. ದೇವರಿಗೆ ದೀವಿ ಹಚ್ಚಿ ನಡುಮನೆಯ ಬಾಗಿಲಕ್ಕೆ ಬರುವದಕ್ಕೂ ತಲೆಬಾಗಿಲಲ್ಲಿ ಯಾರೋ ಸೂಟುಹಾಕಿಕೊಂಡು ಬಂದು ನಿಂತದ್ದನ್ನು ನೋಡಿದಳು. ಸಂಶಯ ಧ್ವನಿಯಿಂದಲೇ ಕೇಳಿದಳು, 'ಯಾರವರು?' ಉತ್ತರವೇನೂ ಬರಲಿಲ್ಲ. ನಡುಬಾಗಿಲನ್ನು ಬಿಟ್ಟು ಮುಂದೆ ಬರುವದಾಗಲಿಲ್ಲ ಆಕೆಗೆ. ಆಕೆ ಗಾಬರಿಯಾದಳು. ಆ ವ್ಯಕ್ತಿ ಮೆಲ್ಲನೇ ಒಳಬರಹತ್ತಿದ. ಸುನೀತಿ ತಿಳಿದಳು ಶಂಕರರಾಯರಿರಬೇಕೆಂದು. ಆದರೂ ತಲೆಕೆಳಗೆಮಾಡಿ ನಿಂತ ಆ ವ್ಯಕ್ತಿ ಸರಿಯಲೂ ಇಲ್ಲ. ಯಾರೆಂಬುದು ಪೂರ್ಣ ಆಕೆಗೆ ತಿಳಿಯಲಿಲ್ಲ. ದೀವಿಗೆ ಹಚ್ಚಬೇಕೆಂದರೆ ಬಾಗಿಲಿನಲ್ಲ ಸ್ವಿಚ್ ಇದ್ದಿತು.

'ಶಂಕರರಾಯರೇನು? ಇಂದು ತಡವಾಗಿ ಬರುತ್ತೇವೆಂದು ಹೇಳಿ ಹೋಗಿದ್ದಾರೆ. ನಾಳೆ ಮುಂಜಾನೆ ಬನ್ನಿರಲ್ಲ'. ಎಂದರೂ ಉತ್ತರಬಾರದ್ದಕ್ಕೆ ಆಕೆಯ ಧೈರ್ಯವೆಲ್ಲ ಓಡಿಹೋಯಿತು. ನಡುಮನೆಯ ಬಾಗಿಲನ್ನು ಹಾಕಿಕೊಂಡು ಬಿಟ್ಟಳು. ಇಲ್ಲದ ಸಂಶಯ ಆಕೆಯ ಮನಸ್ಸಿನಲ್ಲಿ. ಶಂಕರನೇನೂ ಹಾಗೆ ಮಾಡತಕ್ಕ ಮನುಷ್ಯರಂತೆ ಕಾಣುತ್ತಿದ್ದಿಲ್ಲ. ಸಂಜೆಯ ಮುಂದೆ ಏಕೆ ಬಂದಿದ್ದಾರೆಯೋ ಉದ್ದೇಶವೇನು ಕೆಟ್ಟದ್ದಿರಲಿಕ್ಕಿಲ್ಲವಷ್ಟೇ. ತಾನಿಷ್ಟು ಸ್ವತಂತ್ರತೆಯಿಂದ ವರ್ತಿಸುವುದರಿಂದ ತಪ್ಪುತಿಳಿದಿದ್ದಾರೆಯೋ ಮತ್ತೆ. ಹೀಗೆಲ್ಲ ವಿಚಾರಿಸುತ್ತಿರುವಾಗ ತಾನೀರೀತಿ ಶಂಕರನ ಕೂಡ ವರ್ತಿಸುವುದಕ್ಕಾಗಿಯೇ ವಿನಯ ಸಿಟ್ಟಾಗಿರಬಹುದೇ ಎಂಬ ಸಂಶಯ ಮಾತೂ ಬಂದು ಹೋಯಿತು. ಆದರೆ

ಅದರ ಮೇಲೆ ಬಹಳಹೊತ್ತು ನಿಧಾನಿಸಲಿಲ್ಲ ಮಾತ್ರ. ಬಾಗಿಲಬಳಿಯೇ ಕೆಲ ಹೊತ್ತು ನಿಂತುಬಿಟ್ಟಳು. ಅಷ್ಟರಲ್ಲಿ ಮುಂಚಿನ ಬಾಗಿಲ ಹಾಕಿದ ಸಪ್ಪಳ ಕೇಳಿಸಿತು. ದೀವಹಚ್ಚಿದುದು ಬಾಗಿಲ ಸಂದಿಗಳಲ್ಲಿ ಕಾಣುತ್ತಿದ್ದಿತು. ಸುನೀತಿ ಬಾಗಿಲಿಗೆ ಕಿವಿಹಚ್ಚಿ ನಿಂತಳು. ಹಾಳೆ ಮಗುಚಿಹಾಕುವ ಸಪ್ಪಳ ಕೇಳಿಸಿತಾಕೆಗೆ. 'ಶಂಕರರಾಯು ಬಂದಿದ್ದರೂ ಏನೋ ಅತ್ಯವಶ್ಯ ಕೆಲಸವಿರಬೇಕು' ಎಂದು. ಹಾಗಾದರೆ ಮಾತನಾಡಲಿಲ್ಲವೇಕೆ ಎಂಬ ಪ್ರಶ್ನೆ ಬೇರೆ. ಯಾರಿದ್ದಾರೆ ನೋಡಿಯೇ ಬಿಡೋಣವೆಂದು ಮೆಲ್ಲನೆ ಬಾಗಿಲು ತೆಗೆದಳು. ಕುರ್ಚಿಯು ಮೇಲೆ ಅತ್ತ ಮುಖಮಾಡಿ ಕುಳಿತವರಾರೆಂಬುದೂ ತಿಳಿಯಲಿಲ್ಲ. ಬರಿಹಾಳೆ ತಿರುವಿಹಾಕುತ್ತಿದ್ದುದನ್ನು ನೋಡಿದಳು ಮಾತ್ರ. ಪೂರ್ಣ ಬಾಗಿಲನ್ನು ತೆರೆದ ಅನಂತರ 'ಸುನೂ' ಎಂದು ಮುಖತಿರಿವಿದ ಮೇಲೆ ಆಕೆಗೆ ಆಶ್ಚರ್ಯ ಆನಂದ ಗಳೆರಡೂ. 'ನೀವೇನು' ಧೈರ್ಯ ತಂದುಕೊಂಡವಳಾಗಿ ಮಾತನಾಡಿದಳು. 'ಎಷ್ಟು ಬೇಗನೇ ಬಂದಿದ್ದೀರಿ, ನಾನು ಶಂಕರರಾಯರಿರಬೇಕೆಂದು ಮಾಡಿದ್ದೆ. ಏನು ಕೇಳಿದರೂ ನೀವು ಸುಮ್ಮನೆ ನಿಂತುಬಿಡಬೇಕೇ'?

ವಿನಯನಿಗೆ ಏನುಹೇಳಬೇಕೆಂಬುದು ತಿಳಿಯಲಾರದೇ ಹೋಯಿತು 'ನೀನೇನು ಕೇಳಿದೆಯೆಂಬುದೇ ಗೊತ್ತಾಗಲಿಲ್ಲ ನೋಡು. ನನ್ನ ಲಕ್ಷ್ಯವೆಲ್ಲ ಬೇರೆಕಡೆ' ಎಂದು ಏನನ್ನೊ ಗೊಳ್ಳುಗುಚ್ಚಿದ

ವಿಷಮ ವಿಚಾರಗಳಿಂದ ತುಂಬಿದ ಆಕೆಯ ಹೃದಯ ಈಗ ಶಾಂತ ವಾಗಿದ್ದಿತು. ಹಿಂದೆ ತಾನೊಬ್ಬಳೆ ತನ್ನ ಓದುವ ಖೋಲಿಯಲ್ಲಿ ಕೂತಾಗ್ಗೆ ಹುಳಗಳ ಸಪ್ಪಳವಾದರೂ ಕೂಡ ಹೆದರುತ್ತಿದ್ದುದನ್ನು ನೆನೆಯಿಸಿಕೊಂಡು ತಾನು ಬಹು ಅಳ್ಳೆದೆಯವಳೆಂದು ನಕ್ಕಳು ಮಾತ್ರ.

ತನ್ನ ಗುಟ್ಟು ಕಂಡುಹಿಡಿದು ನಕ್ಕಳೇನೋ ಎಂದು 'ಏಕೆ ನಕ್ಕೆ' ಎಂದು ಒಮ್ಮೆಲೆ ಕೇಳಿದ.

'ಏಕಿಲ್ಲ, ನೀವು ಈ ಸೂಟಿನಲ್ಲಿ ಎದ್ದುಕಾಣುತ್ತೀರಿ. ಹೋಗುವಾಗ್ಗೆ ಏನನ್ನೊ ಒಯ್ದಿರಲಿಲ್ಲವೇ. ಅದನ್ನೆಲ್ಲಿಟ್ಟಿರಿ'?.

'ನಮ್ಮ ಸಾಹೇಬನ ಮನೆಯಲ್ಲಿಯೇ. ಅವನೂ ಸೂಟಿನಲ್ಲಿ ಹೊರಟು ಬಿಟ್ಟ ಮಹಾರಾಯ. ಅಂತಲೇ ನಾನೂ ಹಾಕುವ ಪ್ರಸಂಗ ಬಂದಿತು. ಇಷ್ಟು ಕೂಡಲೇ ಬರುತ್ತೇನೆಂದು ಅನಿಸಿರಲಿಲ್ಲ ನನಗೆ. ಕೆಲವು ಕಾಗದ ಪತ್ರಗಳಲ್ಲಿ

ಹೊಂದಿಕೆಯಾಗದ್ದರಿಂದ ಅವನೂ ಒದರಾಡಿಬಿಟ್ಟ. ನಾನೂ ರೇಗಿಗೆದ್ದು ನಾಲ್ಕು ಮಾತುಗಳನ್ನಾಡಿದೆ. ಹಾಗೆಯೇ ಜಗಳವೇ ಆಯಿತು'.

'ಅಂಥ ಪ್ರಸಂಗವನ್ನೇಕೆ ತಂದುಕೊಂಡಿರಿ ಅವನದೇ ತಪ್ಪಿದ್ದರೂ ಸಂದುಬಿಟ್ಟರಾಗುತ್ತಿದ್ದಿಲ್ಲವೇ.

'ಹೀಗೇ ಬಿಟ್ಟರೆ ತೀರಿಯೇ ಹೋಯಿತು. ಮತ್ತಿಷ್ಟು ಸೊಕ್ಕಿಗೆ ಬರುತ್ತಾರೆ' ಹಾಗೆ ಹೀಗೆ ಎಂದು ಜೋರಿನಿಂದ ಒದರಾಡಿಬಿಟ್ಟ. ಕಡೆಗೊಮ್ಮೆ 'ಇರಲಿ. ತಲೆತಿಕ್ಕಿ ಹೋಯಿತು ಅವನ ಕಾಲಲ್ಲಿ ನಡೆ ಅಡುಗೆಯಾಗಿದೆಯೇ', ಎಂದು ಅರಿವೆ ಬದಲಾಯಿಸಲು ಎದ್ದ

'ಎಲ್ಲಿಯ ಅಡುಗೆ? ನೀವು ತಡವಾಗಿ ಬರುವಿರೆಂದು ನಾನಿನ್ನೂ ಇಟ್ಟೆಯೇ ಇಲ್ಲ. ಮೇಲಾಗಿ ನಿಮ್ಮ ದೂರದ ಆಪ್ತರೊಬ್ಬರು ಬಂದಿದ್ದರು. ಆಗಲೇ ಹೊತ್ತಾಗಿತ್ತು'.

'ಕೂಡಲೇ ಏನಾದರೂ ಮಾಡಿಬಿಡು. ಬಹಳ ದಣಿದು ಬಂದಿದ್ದೇನೆ' ಎಂದು ಅಟ್ಟದ ಮೇಲೆ ಹೋಗಿಬಿಟ್ಟ. ಸುನೀತಿಯೂ ಅಡುಗೆ ಮನೆಯನ್ನು ಸೇರಿದಳು.

ತಾನು ಮಾಡಿದದು ಸರಿಯೇ ಎಂಬ ಯೋಚನೆಯೇ ವಿನಯನಿಗೆ. ಸಂಶಯ ಬಂದ ಮೇಲೆ ತಿಳಿದುಕೊಂಡೇ ಬಿಡಬೇಕೆನ್ನುವದು ತಪ್ಪಾಗಲಾರದಿದ್ದರೂ, ತಾನು ಈ ರೀತಿ ಮಾಡಿದುದು ಒಂದು ದೃಷ್ಟಿಯಿಂದ ಸರಿಯೇ ಎಂದುಕೊಂಡ. ನಿಜವಾಗಿಯೂ ಸುನೀತಿಯು ಅವನಿಗೆ ಸಂಶಯಕ್ಕೆ ದೃಢವಾದ ಕಾರಣ ಕೊಟ್ಟಿದ್ದೇ ಇಲ್ಲವಾದರೂ ತನ್ನ ಸ್ವಭಾವವನ್ನಷ್ಟು ಹಳಿದುಕೊಂಡ. ಸಂಶಯ ಸ್ವಭಾವಾನುಗುಣವಾಗಿ ಸುನೀತೀಯ ನಡತೆಯ ಬಗ್ಗೆ ಉಂಟಾದ ಸಂಶಯ ನಿವಾರಣೆಯಾದ ಬಳಿಕಾದರೂ ಅತ್ಯಾನಂದವಾಗಬೇಕಾಗಿದ್ದಿತು. ಆದರೆ ಅವನ ಮನಸ್ಸು ಈಗ ಹುಳು ಹುಳು ಎನ್ನುತ್ತಿತ್ತು. ತಾನು ಆಫೀಸಿಗೆ ಹೋಗುವಾಗ್ಗೆ ಅವಳು ಆರ್ತಸ್ವರದಲ್ಲಿ ಹೇಳಿದ್ದಳು—ಕೂಡಲೇ ಬನ್ನಿರೆಂದು. ಅದಕ್ಕವನು ಎಷ್ಟು ಅಪಾರ್ಥಮಾಡಿಬಿಟ್ಟಿದ್ದ! ಅವಳಿಗಿದೆಲ್ಲ ತಿಳಿದರೆ ಸುನೀತಿಯ ದೃಷ್ಟಿಯಲ್ಲಿ ಎಷ್ಟು ಕೆಳಗೆ ಹೋಗಬಹುದುವೆಂಬುದರ ಸಂಶಯ ಕೂಡಾ ಬಂದು ಹೋಗದಿರಲಿಲ್ಲ ಅವನಿಗೆ ಅನಿಸಿತು 'ಸುನೀತಿ ಎಷ್ಟೋ ಪಾಲು ಒಳ್ಳೆಯ ಹುಡಿಗಿ ಇಲ್ಲದಿದ್ದರೆ ತನ್ನನ್ನು ಕೈಗೊಂಬೆಯಾಗಿರಿಸಬಲ್ಲ ಹುಡಿಗಿಯರಿಗೇನು ಕಡಿಮೆಯೇ'. ಮೊದಲು ಸುನೀತಿ ಮನೆಗೆ ಬಂದಾಗ್ಗೆ ಒಳ್ಳೇ ದರ್ಪದ

ಹುಡಿಗಿ ಎಂದು ತಿಳಿದಿದ್ದ. ಆದರೆ ಎಂಥ ಗರ್ವದ ಹೆಣ್ಣಾದರೂ ವಿನಯನಂಥ ಬುದ್ಧಿವಂತ ಶಾಂತ ಮನುಷ್ಯನನ್ನು ನೋಡಿದಾಗಲೂ ಮೊದಲಿನ ದರ್ಪವಿಡು ವಂತಿರಲಿಲ್ಲ. ಅದು ಅವನಿಗೆ ಗೊತ್ತೂ ಆಗಲಿಲ್ಲ.

'ಕೆಳಗೆ ಬನ್ನಿರಿ' ಎಂದು ಸುನೀತಿ ಕೂಗಿದಳು.

ವಿನಯ ಅಡುಗೆಯಾಗಿರಬೇಕೆಂದು ಬಂದ. ಆದರಿನ್ನೂ ಅನ್ನ ಒಲೆಯ ಮೇಲೆ ಕುದಿಯುತ್ತಿದ್ದಿತು. 'ಇನ್ನೂ ಆಗಿಲ್ಲಕೂಡ, ಕರೆದುಬಿಟ್ಟೆಯೇ'

'ನನಗೊಬ್ಬಳಿಗೇ ಬೇಜಾರು ಬರುತ್ತದೆ ಇಲ್ಲಿಯೇ ಮಣೆಯಮೇಲೆ ಕೂಡಿರಿ. ಮಾತನಾಡಲು ಯಾರೂ ಇರುವದೇ ಇಲ್ಲ'.

'ನನಗೂ ಬೇಜಾರವಾಗಿದೆ. ಸಿನಿಮಾಕ್ಕೆ ಹೋಗೋಣವೇ ಇಂದ' ೮-೧೦ ದಿವಸಗಳಿಂದ ಮುಖ ಗಂಟುಹಾಕಿಕೊಂಡು ಇರುತ್ತಿದ್ದ ತನ್ನ ಪತಿ ಇಂದು ಪ್ರೇಮದಿಂದ ಸಿನಿಮಾಕ್ಕೆ ಹೋಗೋಣವೆಂದು ಕೇಳಿದಾಗ ಜಾಡ್ಯ ಮನಸ್ಸಿನಲ್ಲಿ ಚೈತನ್ಯ ಉಂಟಾಯಿತು ಉಲ್ಲಸಿತ ಮನಸ್ಸಿನಿಂದ ಹೇಳಿದಳು, 'ಮುಂದಿನ ಆದಿತ್ಯವಾರ ಮಧ್ಯಾಹ್ನ ಆಟಕ್ಕೆ ಹೋದರಾಯಿತು. ಈಗೇತಕ್ಕೆ ಸುಳ್ಳೆ ಅವಸರ ಮಾಡಿ' ಅಲ್ಲದೆ ಆಕೆಗೆ ಸಿನಿಮಾಕ್ಕೆ ಹೋಗಬೇಕೆಂಬ ಉತ್ಸುಕತೆ ಅಂದು ಇರಲಿಲ್ಲ ವಿನಯ ಸುಮ್ಮನಿದ್ದು ಬಿಟ್ಟ ಆಕೆಯೇ ಸುರುಮಾಡಿದಳು 'ಅಲ್ಲ, ಇನ್ನು ಕೆಲ ದಿನಗಳಲ್ಲಿ ನಿಮ್ಮ ಊರಿಗೆ ಹೋಗಿ ಬರೋಣವಂತೆ. ರಜಕ್ಕೆ ಬರೆದು ಕೇಳಿರಿ' ಅವನಿಗೆ ಅತ್ಯಾಶ್ಚರ್ಯವಾಯಿತು. 'ಈಗೇಕೆ?' 'ಸುಮ್ಮನೆ ಬಹಳ ದಿವಸಗಳಾಗಿವೆ. ಇಲ್ಲದಿದ್ದರೆ ಅತ್ತೆಮಾವಂದಿರನ್ನು ಇಲ್ಲಿಗೆ ಕರೆಯಿಸಿಬಿಡಿರಿ. ಹತ್ತಿರ ಮನೆಗಳಿಲ್ಲದ ಈ ಮನೆಯಲ್ಲಿ ಒಬ್ಬಳೇ ಇರಲು ಭಯವಾಗುತ್ತದೆ. ಮೇಲಾಗಿ ಅತ್ತೆ ಮಾವಂದಿರಿದ್ದರೆ ಮನೆ ನೊಗಸಲ್ಲವೇ' ಎಂದು ತಲೆತಗ್ಗಿಸಿ ದಳು. ಒಲೆಯ ಉರಿಯ ಬೆಳಕಿನಲ್ಲಿ ಆಕೆಯ ಮೊಗದ ಮೇಲೆ ಸುಳಿಯುವ ನಾಚಿಕೆ ಎದ್ದು ಕಾಣುತಿತ್ತು.

'ದೇವರು ಒಳ್ಳೇ ಬುದ್ಧಿ ಕೊಟ್ಟಿದ್ದಾನೆ. ಯಾಕೋ' ಎಂದು ವಿನಯ ಖೊಳ್ಳನೇ ನಕ್ಕು ಬಿಟ್ಟ.

'ನೀನೊಬ್ಬಳೇ ಇದ್ದರೂ, ನಿನ್ನ ಕೈಯಲ್ಲಿ ಜೀವಕೊಟ್ಟು ಹೋದರೂ ನೀನು ಕಾಪಾಡಬಲ್ಲೆಯೆಂಬ ಭರವಸೆ ಇದೆ ನನಗೆ ಸುನೂ ಆದರೆ ನೋಡು. ತಿಂಗಳು ಸರಿಯಾಗಿ ರೂಪಾಯಿಗಳು ಮುಟ್ಟುತ್ತವೆಯೆಂದ ಮೇಲೆ ಅವರೇನು

ದುಃಖಿತರಾಗಿರಲಿಕ್ಕಿಲ್ಲ. ಅವರು ಬಂದರೆ ಸರಿಯಾಗುವದೇನೋ ನೋಡಿಕೋ, ನನ್ನದೇನು'

"ಅದೇಕೆ, ಇಲ್ಲಿಗೆ ಕರೆಯಿಸಿದರೆ ಹೆಚ್ಚಿಗೆ ಆನಂದವಾಗಲಿಕ್ಕಿಲ್ಲವೇ" ಎಂದು ಗೊಣಗುಟ್ಟಿದಳು.

'ನಿನ್ನ ಕೂಡ ತೀರಿಯೇ ಹೋಯಿತು. ಸ್ವಲ್ಪ ದಿವಸಗಳಲ್ಲಿ ಮತ್ತೆ ತಿರುಗಿ ಕಳಿಸುವ ಪ್ರಸಂಗ ಬಂದೀತು, ಬೇಡ.'

"ಅದರ ಕಾಳಜಿ ನಿಮಗೇತಕ್ಕೆ, ಇರಲಿ, ಕೈಕಾಲು ತೊಳೆದುಕೊಳ್ಳಿರಿ" ಎಂದು ಗೋಣನ್ನು ಕೊಂಕಿಸಿದಳು. ಅತಿ ಹರ್ಷದ ಮೊಗದಿಂದ ಆಕೆಯನ್ನೇ ನೋಡುತ್ತಿದ್ದ. 'ನಿಜವಾಗಿಯೂ ಸು-ನೀತಿಯಾಗಿರುವೆ ನೋಡು ಈಗ' ಅವಳೂ ಅವನನ್ನೇ ನೋಡುತ್ತಿದ್ದಳು.



# ಕಲಾವಿದ

[ಶ್ರೀ ಎಸ್ ಅನಂತನಾರಾಯಣ, ಬಿ ಎ. (ಆನರ್ಸ್), ಮೈಸೂರು.]

"ನನಗದು ಬೇಕಿಲ್ಲ, ಬೇಕಿಲ್ಲ! ಸುಮ್ಮನೆ ಯಾಕೆ ಗೋಳು ಹುಯ್ಯುತ್ತೀರುವಮ್ಮಾ?"

"ಹೀಗೇ ಎಷ್ಟು ದಿನ ಮನೆಯಲ್ಲೇ ಕುಳಿತಿರುವೆ, ಮಗು?"

"ಇಷ್ಟು ದಿನವಿರಲಿಲ್ಲವೇನಮ್ಮ—ಇನ್ನು ಮೇಲೆ ಹಾಗೆಯೇ, ಹೊರಗಿನ ಪ್ರಪಂಚಕ್ಕಿಂತ ನನ್ನ ಈ ಪ್ರಪಂಚವೇ ವಾಸಿ ನನ್ನನ್ನ ನೋಡಿ ತಿರಸ್ಕರಿಸುವವರು ಇಲ್ಲಿಲ್ಲ."

"ನಿನ್ನನ್ನು ತಿರಸ್ಕರಿಸುವರೇ ಮಗು? ಇಷ್ಟು ಚೆನ್ನಾಗಿ ಚಿತ್ರ ಬರೆಯುವೆ. ಈಗಾಗಲೇ ನಿನ್ನ ಹೆಸರು ಎಲ್ಲೆಲ್ಲೂ ಕೇಳುತ್ತಿದೆ. ಉತ್ತಮ ಕಲಾವಿದನೆಂದು ಜನ ನಿನ್ನನ್ನ ಹೊಗಳುತ್ತಿದ್ದಾರೆ ಪತ್ರಿಕೆಗಳಲ್ಲಿ ನಿನ್ನನ್ನು ಹೊಗಳಿ ಬರೆದುದನ್ನು ನೀನೇ ನನಗೆ ತೋರಿಸಿದೆ. ಮತ್ತೆ ತಿರಸ್ಕಾರವೆಲ್ಲಿಯದು ಮಗು?"

"ಅಮ್ಮ, ನೀನು ನನ್ನನ್ನು ನೋಡುತ್ತಿರುವುದು ನಿನ್ನ ದೃಷ್ಟಿಯಿಂದ, ಪ್ರಪಂಚದ ಕಣ್ಣಿನಿಂದಲ್ಲ. ತಾಯಿಯ ಕಣ್ಣಿಗೆ ಮಗು ಹೇಗಿದ್ದರೂ ಚೆನ್ನೇ! ಆದರೆ ಪ್ರಪಂಚದ ಕಣ್ಣಿಗೆ—ನಾನು ಬೀದಿಯಲ್ಲಿ ಹೋಗುತ್ತಿದ್ದರೆ ನನ್ನನ್ನು ನೋಡಿ ನಗುವವರೆಷ್ಟು ಮಂದಿ ಗೊತ್ತೇ? ಎದೆ ಕಿವಿಚಿಹೋಗುತ್ತದಮ್ಮ, ಅವರ ನಗು ಕೇಳಿ. ಮಕ್ಕಳು ದೂರದಿಂದ ನನ್ನನ್ನು ಕಂಡೇ ಕಿರಿಚಿ ಓಡಿ ಹೋಗುತ್ತವೆ. ಹೂವನ್ನು ಮುಟ್ಟಿದರೆ ಹೂವು ಕೂಡ ಸೆಟೆದುಕೊಂಡು ಮುಳ್ಳಾಗುವುದೋ ಏನೋ! ಅಮ್ಮಾ—"

"ಇಲ್ಲ ಮಗು, ನೀನು ಹಾಗೆಲ್ಲ ಅನ್ನಬಾರದು. ನಿನಗೆ ಇಷ್ಟಾಗಿ ಏನಾಗಿರುವುದು—"

"ಅಮ್ಮ ಈ ಸುಟ್ಟ ಮುಖವನ್ನು ಹೇಗೆ ತೋರಿಸಲಮ್ಮ? ಯಾರಿಗೂ ತೋರಿಸಲು ನಾಚಿಕೆಯಾಗುವುದಮ್ಮ. ನೀನು ಹೆತ್ತ ತಾಯಿ, ನಿನ್ನ ಮುಂದೆ ಬರಲೂ ಒಂದೊಂದು ಬಾರಿ ಮನಸ್ಸು ಅಳುಕುತ್ತದೆ. ನಾನೇಕೆ ಹೀಗೆ ಹುಟ್ಟಿದೆನೋ ಎನಿಸುತ್ತದೆ."

"ಹಾಗನ್ನಬೇಡ, ಮಗು—"

"ಅಮ್ಮ, ನಾನು ಸತ್ತರೇ ವಾಸಿಯಲ್ಲವೇನಮ್ಮ?"

"ಛೆ! ಕೆಟ್ಟಮಾತಾಡಬೇಡ"—

ತಾಯಿ ಕಣ್ಣೊರೆಸಿಕೊಂಡರು. ಎದುರಿಗೆ ಮಗ, ವಿಖ್ಯಾತ ಕಲಾವಿದ. ಚಿಕ್ಕತನದಲ್ಲಿಯೇ ಚಿತ್ರಬರೆಯುವುದರಲ್ಲಿ ಹೆಸರು ಪಡೆದವನು. ಎಲ್ಲರ ಬಾಯಲ್ಲೂ ಅವನ ಹೆಸರೇ. ಸಾವಿರಮಂದಿ ಅವನಿಂದ ಚಿತ್ರಬರೆಯಿಸಿಕೊಳ್ಳಲು ಇಚ್ಛೆಪಡುವವರು. ಆದರೆ ಅವನಿಗೆ ಮನಸ್ಸಿನಲ್ಲಿ ಶಾಂತಿ ಇಲ್ಲ ಹೃದಯದಲ್ಲಿ ಬೆಂಕಿ—ಜ್ವಾಲಾಮುಖಿ—ಹುದುಗಿದೆ. ಇಷ್ಟೆಲ್ಲಾ ಕಾರಣ—ಅವನ ಮುಖ. ಆಳೇನೂ ಸಣ್ಣವನಲ್ಲ ಪುಷ್ಟವುಷ್ಟವಾಗಿಯೇ ಬಳೆದವನು. ಕಟ್ಟುಮಸ್ತಾದ ದೇಹ ಹಿಂಭಾಗದಿಂದ ನೋಡಿದರೆ ಸುಂದರನಾಗಿಯೇ ತೋರುವನು. ಮೈಯಿನ ಒಂದೊಂದು ಅಂಗವೂ ಅಚ್ಚಿಗೆ ಹಾಕಿ ಮಾಡಿ ಕೂಡಿಸಿದಂತೆ ಇತ್ತು ಸಮರೂಪ ಆದರೆ ಮುಖ ಮಾತ್ರ ವಿಕಾರ. ಅಗಲವಾಗಿ ಕಾಂತಿಯುತ ವಾದ ಕಣ್ಣುಗಳು ತೀಕ್ಷ್ಣತೆಯಿಂದ ಹೊಳೆಯುತ್ತಿದ್ದುವು ಆದರೆ ಹಣೆಯ ಮೇಲೆ—ಕೆನ್ನೆಯಮೇಲೆ ನೋಡಲಾಗದಂತೆ ವಿಕಾರ ಗೆರೆಗಳು—ಸುಕ್ಕು ಸುಕ್ಕು ಚರ್ಮವನ್ನು ಕಿತ್ತು ದಿಣ್ಣೆ ಕಟ್ಟಿ ನಡುವೆ ಕೆತ್ತಿದಂತೆ, ಉತ್ತಂತೆ ತೋರುತ್ತಿತ್ತು. ಈ ಮುಖದ ಬಗೆಯಿಂದಲೇ ಅವನಿಗೆ ಚಿಕ್ಕಂದಿನಿಂದಲೂ ದುಃಖ. ಎಳೆತನ ದಿಂದಲೂ ಸಖಿಯುವರಿಂದ ಬೈಗಳು, ಕುಹಕ, ವ್ಯಂಗ್ಯಹಾಸ್ಯ ಅದು ಇಂದಿನ ವರೆಗೂ ನಿಂತಿರಲಿಲ್ಲ. ಒಮ್ಮೆ ಏನಾದರೂ ಅಪ್ಪಿತಪ್ಪಿ ಹೊರಗೆ ಹೊರಟನೆಂದರೆ ಸರಿ, ಎಲ್ಲರ ಕಣ್ಣೂ ಅವನ ಮೇಲೆಯೇ! ಎಲ್ಲರೂ ತನ್ನನ್ನೇ ನೋಡುತ್ತಿರುವರು, ತನ್ನನ್ನು ತಿರಸ್ಕಾರದಿಂದ ನೋಡುವರೆನ್ನುವ ವಿಚಾರ ಅವನ ಸೂಕ್ಷ್ಮಹೃದಯಕ್ಕೆ ನಾಟಿತ್ತು. ಅದೊಂಪ ಮುಳ್ಳು ಹತ್ತಿದ ಕೈ ಹಿಂದಕ್ಕೆಳೆದುಕೊಳ್ಳುವಂತೆ ಮತ್ತೆ ಮನೆಗೆ ಓಡಿ ಬರುತ್ತಿದ್ದ. ಮತ್ತೆ ತನ್ನ ಕೋಣೆಯಾಯಿತು, ಚಿತ್ರರಚನೆ ಯಾಯಿತು. ಯಾರನ್ನೂ ಕರೆಯುತ್ತಿರಲಿಲ್ಲ. ಯಾರ ಮನೆಗೂ ಹೋಗು ತ್ತಿರಲಿಲ್ಲ. ದೂರದ ಹಳೆಯ ಸ್ನೇಹಿತನೊಬ್ಬ ಮನೆಗೆ ಬಂದು ಚಿತ್ರಗಳನ್ನು ತಗೆದುಕೊಂಡು ಹೋಗಿ ಮಾರುತ್ತಿದ್ದ. ಬಂದ ಹಣದಲ್ಲಿ ಜೀವನ ಹೇಗೋ ಹಾಗೆ ಸಾಗುತ್ತಿತ್ತು. ಅವನಿಗೆ ಮನಸ್ಸು ಸಮಾಧಾನವಿಲ್ಲ. ತಾಯಿಗೂ ಸಮಾ ಧಾನವಿಲ್ಲ. ಅವನಿಗೆ ವಿರೂಪದಿಂದ ಕುಗ್ಗಿದ ಹೃದಯ. ತಾಯಿಗೆ ಅವನ

ನೋವಿನಿಂದಾದ ನೋವು. ಜತೆಗೆ ಅವನನ್ನು ಸುಖಗೊಳಿಸಲು ಸೊಸೆ ತರುವ ಆಸೆಯು ಹೃದಯ.

"ಹಾಗನ್ನಬಾರದು ಮಗು, ಆಗಲೇ ಅವರಿಗೆ ಹೇಳಿ ಕಳಿಸಿದೆ ನಾಳೆ ಬರುವರು"

"ಯಾರು? ಅಯ್ಯೋ ಬೇಡವ್ಮ. ಅವರೂ ನನ್ನ ಮುಖ ಕಂಡು ಉಗಿಯಲಿ ಎಂದೇನವ್ಮ?"

"ಇಲ್ಲ ಮಗು, ಅವರು ಅಂತಹವರಲ್ಲ. ಹುಡುಗಿಯನ್ನು ನೀನು ನೋಡು. ಒಪ್ಪಿದರೆ—"

"ಅವ್ಮ—ನಾನು—ಹುಡುಗಿಯ ಮುಂದೆ ಬಂದು—ಇಲ್ಲ! ಇಲ್ಲ! ಸಾಧ್ಯವಿಲ್ಲ!"

"ಬೇಡ ಮಗು, ನೀನು ನಿನ್ನ ಕೋಣೆಯೊಳಗಿಂದಲೇ ನೋಡು."

"ಕಳ್ಳತನದಲ್ಲಿ ನೋಡುವುದು ಬೇಡವ್ಮ ಇಷ್ಟಾಗಿ ಹುಡುಗಿಯನ್ನು ನಾನು ಒಪ್ಪಿದರೂ ಹುಡುಗಿಗೆ ನಾನೊಪ್ಪಿಗೆಯಾಗಬೇಡವೇ? ನೀನೇ ಹೇಳವ್ಮ. ಈ ಮುಖ ಕಂಡು ಯಾವ ಹುಡುಗಿಯಾದರೂ ಒಪ್ಪುವಳೇ? ನಿಜ, ನನ ಗೇನೋ ಬೇಕಾಗಿದೆ. ನನ್ನ ಹೃದಯಕ್ಕೆ ಶಾಂತಿ ನೀಡುವ ಹೃದಯ ಬೇಕಾಗಿದೆ. ಸುಖದ ಅಮೃತದ ಹೊಳೆಯನ್ನು ನನ್ನ ಜೀವನದಲ್ಲಿ ಹರಿಸುವವರೂ ಬೇಕಾಗಿದೆ. ನನ್ನ ಕತ್ತಲೆಯಲ್ಲಿ ಬಳಕು ನೀಡುವವರೂ ಬೇಕಾಗಿದೆ. ಆದರೆ ಅಮೃತ ಕೊಟ್ಟು ವಿಷ ಕುಡಿಯುವವರು ಯಾರಿದ್ದಾರವ್ಮ?"

ಮೋಹನ ತಾಯಿಯಿಂದ ಆ ಕಡೆಗೆ ಸರಿದು ನಿಂತ. ತಾನೇ ಚಿತ್ರಿಸಿದ ಪರಶಿವನ ಮೂರ್ತಿ. ಉಳಿದೆಲ್ಲ ಚಿತ್ರಗಳ ಶಿವನಂತಲ್ಲ ಆ ಚಿತ್ರದ ಶಿವ. ಮುಖದಲ್ಲಿ ಭಾವನೆಯೇ ಕಾಣದ ಶಿವನಲ್ಲ. ಬರಿಯ ಜಟಾಜೂಟಧಾರಿಯಲ್ಲ. ಇದು ಪರಮ ಮಾನವ ಶಿವನ ಮೂರ್ತಿ. ಮುಖದಲ್ಲಿ ತ್ಯಾಗದ—ಮುಗುಳು ನಗೆ ಕಣ್ಣಿನಲ್ಲಿ ಪ್ರೇಮದ ಕಾಂತಿ. ಬಲಗೈಯಲ್ಲಿ ವಿಷ—ಹಾಲಾಹಲ. ಆ ಕೈ ಬಾಯಿಯ ಕಡೆಗೆ ಕೊಂಚ ಓಲಿದೆ. ಎಡಗೈಯಲ್ಲಿ ಅಮೃತದ ಬಟ್ಟಲು. ಆ ಕೈ ಮುಂದೆ ನೀಡಿದೆ ದಾನ ಕೊಡುವಂತೆ ಸಾವಿಗೆ ಸಿದ್ಧನಾದ ಪರಮ ತ್ಯಾಗಿ ಶಿವ ಸಂತೋಷದಿಂದ ಹಾಲಾಹಲ ಧರಿಸಲು ಹೊರಟಿದ್ದಾನೆ.

"ಹಾಲಾಹಲ ಕುಡಿಯುವ ಸಾಹಸ, ತ್ಯಾಗ ಆ ಪರಶಿವನೊಬ್ಬನಿಗೆ ಪಾತ್ರ" ಎಂದುಕೊಂಡ ಮೋಹನ.

"ಹಾಗನ್ನಬೇಡ ಮಗು, ಹೆಂಗಸಿಗೆ ರೂಪ ಬೇಕಿಲ್ಲ. ಗುಣಬೇಕು ಒಪ್ಪ ಬೇಕಾದುದು ನಿನ್ನ ಮುಖವನ್ನಲ್ಲ— ನಿನ್ನ ಕಲೆಯನ್ನು—"

"ಕಲೆ, ಕಲೆಯಾರಿಗೆ ಬೇಕು? ಹೆಣ್ಣಿಗೆ ಕಲೆಯಲ್ಲಿ ಆಸಕ್ತಿಯಿಲ್ಲ. ಕಲಾ ವಿದನಲ್ಲಿ. ತಾನೊಬ್ಬ ಕಲಾವಿದನ ಹೆಂಡತಿಯಾಗುವೆನೆನ್ನುವ ಹೆಮ್ಮೆ ಇರುವುದೇ ಹೊರತು, ಆ ಕಲೆಯ ಹಿರಿಮೆಯಲ್ಲಿ ವಿಶ್ವಾಸವಿರುವುದಿಲ್ಲ. ರೂಪ ಯಾರಿಗೆ ತಾನೆ ಬೇಡಮ್ಮ?— ನೀನೂ ರೂಪವತಿಯಾದ ಸೊಸೆಯನ್ನೇ ಬಯಸುವು ದಿಲ್ಲವೇ?"

"ಹೂಂ—"

"ಅತ್ತೆಗೆ ರೂಪವತಿಯಾದ ಸೊಸೆಯ ಬಯಕೆ, ಹೆಣ್ಣಿಗೆ ರೂಪವಂತ ಗಂಡನ ಬಯಕೆ, ಗಂಡಿಗೆ ರೂಪವತಿಯಾದ ಹೆಣ್ಣಿನ ಬಯಕ, ಅದು ಸಹಜ. ನನ್ನನ್ನು ಒಪ್ಪುವವರು ಯಾರಮ್ಮ?"

ಮೋಹನನ ಕಣ್ಣಿನ ತುಂಬ ನೀರು ತುಂಬಿಕೊಂಡಿತು. ಮಾತು ಕಂಠದಲ್ಲೇ ಮುಕ್ಕಾಯಿತು. ಹೃದಯದ ನೂರು ಆಸೆ ಹೊಗೆಯಾಡುತ್ತಿ ದ್ದುದು ಎಚ್ಚೆತ್ತು ಉರಿಯುತಿತ್ತು. ಅವನಿಗೇನೂ ಆಸೆ ಇಲ್ಲದಿಲ್ಲ. ಅವನು ಕಲಾವಿದ, ಸೌಂದರ್ಯ ಪ್ರೇಮಿ. ಸೌಂದರ್ಯವನ್ನು ಎಲ್ಲಿಕಂಡರೂ ಸವಿಯುವ ರಸಿಕ ಮನಸ್ಸಿನವನು. ಆದರೆ, ತನ್ನ ವಿಕಾರತೆಯಿಂದ ಅವನ ಮನಸ್ಸು ಕುಗ್ಗಿ ಹೋಗಿತ್ತು. ಹೃದಯ ಬಹಳ ಸೂಕ್ಷ್ಮವಾಗಿ ಹೋಗಿತ್ತು. ಆಸೆ, ಆಕಾಂಕ್ಷೆಗಳ ನ್ನೆಲ್ಲಾ ಹೃದಯದಲ್ಲೇ ಗೋರಿಮಾಡಲು ಯತ್ನಿಸಿದ್ದ. ಆದರೆ ಅಷ್ಟು ಸುಲಭ ವಾಗಿ ಅದು ಸಾಧ್ಯವಾಗುವಂತಿದ್ದರೆ ಇನ್ನೇನು?— ಹಿಂದೆ ಒಂದು ಬಾರಿ ಅವನು ಕಾಲೇಜಿನಲ್ಲಿ ಓದುತ್ತಿದ್ದಾಗ, ಅವನು ಚರಿತ್ರೆಯ ಸಂಘಕ್ಕೆ ಒಂದು ತೈಲ ಚಿತ್ರ ಬರೆದು ಕೊಟ್ಟಿದ್ದ. ಸಂಘದ ಉತ್ಸವದಂದು ಚಿತ್ರದ ಅನಾವರಣೋತ್ಸವ ವಿತ್ತು. ಅವನು ಚಿತ್ರ ಬರೆಯುವನೆಂದು ಯಾರಿಗೂ ಗೊತ್ತಿರಲಿಲ್ಲ. ಕಾಲೇಜಿನ ಬಳಿ ಕಾಲಿಟ್ಟರೆ ಎಲ್ಲರೂ ಅವನ ಕಡೆಗೆ ನೋಡಿ ಕಣ್ಣು ಹೊರಳಿಸುವವರೇ— ನಗುವವರೇ! ಅವನ ಮನಸ್ಸಿನ ಕುದಿ ಯಾರಿಗೂ ತಿಳಿಯದು. ಆ ದಿನ ಸಂಜೆ ಚಿತ್ರ ಅನಾವರಣವಾದ ಮೇಲೆ ಚಿತ್ರ ಬರೆದವರು ಇವರೇ ಎಂದು ಅಧ್ಯಕ್ಷರು ಅವನನ್ನು ವೇದಿಕೆಯ ಮೇಲಕ್ಕೆ ಕೂಗಿದರು. ಆಗ, ಕೆಳಗಿನಿಂದ ತೀವ್ರ ಬೆಳಕು ಅವನ ಮೇಲೆ ಬೀಳುತ್ತಿರುವಾಗ ವೇದಿಕೆಯ ಮೇಲೆ ಬಂದು ನಿಂತಿದ್ದ. ಹೊಗಳಿಕೆ, ಮೆಚ್ಚುಗೆ ಪಡೆದ ಹಿಗ್ಗಿನಲ್ಲಿ ಅರೆ ನಿಮಿಷ ತನ್ನನ್ನು ತಾನೇ ಮರೆತ.

ಬಣ್ಣದ ಪ್ರಪಂಚದಲ್ಲಿ ತೇಲಿದ. ಆದರೆ ಮರುನಿಮಿಷವೇ ನಗೆಯೊಂದು ಕಿವಿ ಹೊಕ್ಕು ಎದೆ ಕುದಿತ ಹೆಚ್ಚಿತು. ನನ್ನ ವಿಕಾರತೆಯನ್ನು ನೋಡಲು ಈ ವೇದಿಕೆ ಬೆಳಕು ಎಂದು ಹೃದಯ ಅಂದಿತು. ಮನಸ್ಸೂ ಹೂಂಗುಟ್ಟಿತು. ಸರಿ ಮೊದಲಿನ ದ್ವೇಷ ಉಕ್ಕಿತು. ಅಲ್ಲಿಂದ ಒಂದೇ ಹಾರಿಗೆ ಹಾರಿದ, ಪಕ್ಕದ ಕೋಣೆಗೆ- ಅಲ್ಲಿಂದ ಮನೆಗೆ ಓಡಿದ. ಆದರೆ ವೇದಿಕೆಯನ್ನು ಬಿಡುವ ಮೊದಲು ಒಂದು ಸುಂದರ ಮುಖ— ಹೆಣ್ಣಿನ ಮುಖ ಕಂಡಿದ್ದ. ಮುಂದಿನ ಸಾಲಿನಲ್ಲಿ ಕುಳಿತಿದ್ದ ಹೆಣ್ಣು ಮಕ್ಕಳಲ್ಲೊಬ್ಬಳ ಮುಖ ಮುದ್ದಾಗಿತ್ತು. ಸುಂದರವಾಗಿತ್ತು. ಅವನು ಬಣ್ಣದ ಜಗತ್ತಿನಲ್ಲಿ ಯಾವುದನ್ನು ಆರಾಧಿಸುತ್ತಿದ್ದನೋ ಆ ಮೂರ್ತಿಗೆ ಜೀವಕಳೆ ಕೊಟ್ಟಂತಿದ್ದಳು ಆಕೆ. ಆ ಹುಡುಗಿ ಯಾರೆಂಬುದು ಆವನಿಗೆ ತಿಳಿಯದು ಆಕೆಯ ಹೆಸರೇನೆಂಬುದು ತಿಳಿಯದು. ತಿಳಿದುದಿಷ್ಟೇ— ಅವಳ ಮುಖದ ಸೌಂದರ್ಯ. ಆ ಸೌಂದರ್ಯ ಅವನ ಮನಸ್ಸನ್ನು ಆಕ್ರಮಿಸಿ ಬಿಟ್ಟಿತು. ಏನೇ ಮಾಡಿದರೂ ಆ ಸೌಂದರ್ಯವನ್ನು, ಆ ಮುಖವನ್ನು ಮರೆಯಲಾಗಲಿಲ್ಲ. ಹೂವಿನ ಸುಗಂಧದ ನೆನಪಿನಂತೆ ಒಂದೇ ಸಮನಾಗಿ ಅವನ ಮನಸ್ಸಿನ ಹಿನ್ನೆಲೆಯಲ್ಲಿ ಹಿಂಸೆ ಪಡಿಸುತ್ತಿತ್ತು. ಕೊನೆಗೊಮ್ಮೆ ಆ ಮುಖದ ಚಿತ್ರ ಬರೆದ. ಅದೂ ಹದಿನೈದು ದಿನಗಳ ತಾಕಲಾಟದ ಅನಂತರ. ಭಂಗಾರದ ನೂಲಿನಿಂದ ನೇದ ಒಂದು ಜೇಡನ ಬಲೆ. ಜೇಡನ ಬಲೆಯ ಭಂಗಾರದ ಎಳೆಗಳ ಮಧ್ಯದಲ್ಲಿ, ನಡುಮಧ್ಯದಲ್ಲಿ ಬರಿಯ ಆಕೆಯ ಮುಖ. ಕೆಂಪು ನೀಲಿಮೊಗಳು ಬೆಳ್ಳಿ ಬಿಳುಪುಗಳಿಂದ ರಚಿಸಿದ ಆ ಮುಖ ಭಂಗಾರದ ಹಿನ್ನೆಲೆಗೆ ಹೊಳೆಯುತ್ತಿತ್ತು. ಆದರೆ ಆ ಮುಖದಲ್ಲಿ ಶಾಂತಿಯಿರಲಿಲ್ಲ. ಕಾತರವೂ ಇರಲಿಲ್ಲ. ಗೆಲುವೂ ಇಲ್ಲ. ಮುಖದಲ್ಲಿ ಸೌಂದರ್ಯವೇ ಇರಲಿಲ್ಲ. ರೂಪವೆಲ್ಲ ಹೊರಗಿನ ಆಕರ್ಷಕ ರೂಪ. ಆದರೆ ಏನೋ ಕೊರತೆ ಚಿತ್ರದಲ್ಲಿ. ಅದು ಅವನ ಮನಸ್ಸಿನ ಕೊರತೆ. ಆ ಸೌಂದರ್ಯ ತನಗೆ ಬೇಕೆನ್ನುವ ಆಸೆ. ಆದರೆ ಅದು ಅಸಾಧ್ಯವೆನ್ನುವ ನಿರಾಸೆ ಹೀಗಾಗಿ ಸೌಂದರ್ಯದ ಒಳ ಆತ್ಮ ಕೈಮೀರಿ ಹೋಗಿತ್ತು. ಅಂದಿನಿಂದಲೂ ಆ ಮುಖಕ್ಕಾಗಿ, ಆ ಸೌಂದರ್ಯಕ್ಕಾಗಿ ಕಾತರಿಸುತ್ತಿದ್ದ. ಬಯಸುತ್ತಿದ್ದ. ಆದರೆ, ಅವನನ್ನು— ಅವನ ಸುಟ್ಟ ಮೋರೆಯನ್ನು ಕಂಡು ಮೆಚ್ಚುವರವರಾದರೂ ಯಾರು? ಈ ಕೊರತೆಯಿಂದ ಅವನ ಚಿತ್ರಕ್ಕೂ ಒಂದು ಕೊರತೆ ಬಂದಿತ್ತು.

ಆ ಚಿತ್ರದ ನೆನಪಾಗಿ ಮೋಹನ ತಾಯಿ ನಿಂತಿದ್ದ ಕಡೆಗೆ ತಿರುಗಿದ. ಅಲ್ಲಿಯೇ ಎದುರಿಗೇ ಆ ಚಿತ್ರ. ಇನ್ನೂ ಮೊದಲಿನಂತೆಯೇ ಉಳಿದಿತ್ತು.

ಆ ಚಿತ್ರದ ಕುಂದು ಕಲಾವಿದನ ಕಣ್ಣಿಗೆ ಚೆನ್ನಾಗಿ ಕಾಣುತ್ತಿತ್ತು. ಮಾಂಸದ ಮುದ್ದೆಯೊಂದರ ಮುಖ ಇದು. ಇದರಲ್ಲಿ ಜೀವಕಳೆಯಿಲ್ಲ ಎಂದು ಅವನ ಹೃದಯ ಹೇಳಿತು. ಹೌದು, ಕಲಾವಿದನಲ್ಲಿ ಕೊರತೆಯಿರಬೇಕಾದರೆ ಕಲೆ ಹೇಗೆ ತಾನೆ ಪೂರ್ಣವಾದೀತು ಎಂದುಕೊಂಡ. ಮತ್ತೆ ಆ ಮಾತು— ಆ ದಿನದ ಮಾತು ನೆನಪಾಯಿತು ಆ ಚಿತ್ರ ಬರೆಯುತ್ತಿರುವಾಗ ಒಂದು ದಿನ ಕಾಲೇಜಿನ ಕಡೆಗೆ ಹೋಗುತ್ತಿದ್ದ. ಅಂದು ಎಂದಿನಂತೆ ತಲೆತಗ್ಗಿಸಿ, ಕರವಸ್ತ್ರದಿಂದ ಮುಖ ಮುಚ್ಚಿಕೊಂಡು ಹೋಗುತ್ತಿದ್ದಾಗ ಹಲವಾರು ಕಂಠಗಳು ಕೇಳಿದವು. ಅವನ ಹೃದಯ ಅಳುಕು ಹೃದಯ. ತನ್ನ ವಿಚಾರವಾಗಿ ಏನಾದರೂ ಮಾತಾಡಿಕೊಳ್ಳುತ್ತಿರುವರೋ ಏನೋ ಎಂದು ಸಂದೇಹ. ಏನೆನ್ನುವರೋ ಎಂಬ ಕಾತರ. ಗೊತ್ತೇ ಇದೆ ತನ್ನನ್ನು ತಿರಸ್ಕರಿಸುವರೆಂಬ ಕಳವಳ. ಇಲ್ಲ ಹಾಗಿರಲಾರದು. ಅವರು ಬಯ್ಯಲಾರರು ಎಂಬ ಭ್ರಮೆ— ಆಸೆ ಅದರಲ್ಲಿ ಅವನಿಗೇ ಸಾಕಷ್ಟು ನಂಬಿಕೆಯಿರಲಿಲ್ಲ. ಹೀಗಾಗಿ ಮನಸ್ಸು ಕುದಿಯುತ್ತಿತ್ತು. ಮೈಯೆಲ್ಲಾ ಕಿವಿಯಾಗಿ ಕೇಳಿದ. ಮಾತು ಅರ್ಧ ಅರ್ಧ ಕೇಳಿಸಿತು.

"ಅಯ್ಯೋ— ಹೆಸರು ಹೇಗಿದ್ದರೇನು ?"

"ಸರಿ, ಸರಿ, ಕಣಿಗಲೆಗೆ ಗುಲಾಬಿ ಎಂದು ಹೆಸರಿಟ್ಟರಾಯಿತೇ ?"

ಮೋಹನನ ಎದೆ ಕಿವಿಚಿದಂತಾಯಿತು, ಗುಲಾಬಿ – ಕಣಿಗಲೆ— ತಾನು!

"ಮುಳ್ಳು ಮುಳ್ಳು ಮುಖದ ಆ ಮೆಳ್ಳೆಗಣ್ಣ ಇಲ್ಲವೇ— ಅವಳ ಹೆಸರು ಮೀನಾಕ್ಷಿ!"

"ಅದಕ್ಕೇನು ಮಾಡಲಾಗುತ್ತೆ. ಕೊಕ್ಕರೆ ಕೊರಳಿನವರೂ ಹಂಸ ಆಗುವುದಿಲ್ಲವೇ ?"

ಮೋಹನನ ಎದೆ ಹೊಡೆದುಕೊಳ್ಳುತಿತ್ತು. ಮನಸ್ಸು ವಿಹ್ವಲವಾಯಿತು. ಸಾಗರದ ಮಹಾ ಅಲೆಗಳ ನಡುವೆ ಸಿಕ್ಕಿಕೊಂಡು ಹೆಣಗಾಡುವ ಮರದ ತುಣುಕಿನಂತೆ ಒದ್ದಾಡುತ್ತಿತ್ತು. ತನ್ನ ರೂಪ! ತನ್ನ ಹೆಸರು! ಎಂತಹ ಕೂಡಿಕೆ! ಎರಡು ಧ್ರುವಗಳ ಕೂಡಿಕೆ ಅದು! ಆ ಹೆಸರನ್ನು ಯಾರಿಟ್ಟರೋ ತನ್ನ ವಿಕಾರಾಕೃತಿಗೆ ಎಂದು ಮರ ಮರ ಮಿಡುಕಿದ. ಕಣ್ಣಿನಲ್ಲಿ ನೀರು ಬಂತು. ಉಕ್ಕಿ ಹರಿಯಿತು. ಅಂದು ಮತ್ತೆ ಕಾಲೇಜಿಗೆ ಹೋಗುವ ಮನ

ಸ್ನಾನಗಲಿಲ್ಲ. ನೇರವಾಗಿ ಮನೆಗೆ ಬಂದ. ಬಂದು ಒಂದೇ ಸಮನೆ ಮಿಸುಕಾಡಿದ. ಪರೆಬಿಡುವ ಹಾವಿನಂತೆ ಒದ್ದಾಡಿದ. ಅಯ್ಯೋ ಹಾಳು ಮುಖ! ಹಾಳು ಹೆಸರು! ನಾನೇಕೆ ಹುಟ್ಟಿದೆನೋ ಎಂದು ತನ್ನನ್ನು ತಾನೇ ಹಳಿದುಕೊಂಡ. ತನಗೆ ಜೀವಕೊಟ್ಟ ತಾಯಿಯನ್ನು ಶಪಿಸಿದ. ಆತ್ಮಹತ್ಯೆ ಮಾಡಿಕೊಂಡು ಬಿಡಲೇ ಎಂದು ಎದ್ದು ನಿಂತ. ಎದುರಿಗೇ ಕಲೆಯ ಅಧಿದೇವತೆ. ತಾನೇ ಚಿತ್ರಿಸಿದ ಮಹಾಶಕ್ತಿ—ಸರಸ್ವತಿ-ಶಾರದೆ. ಅವನು ಚಿತ್ರಿಸಿದ ಶಾರದೆ ಎಂದಿನ ವೀಣಾಪಾಣಿ ಶಾರದೆಯಲ್ಲ. ಬಿಳಿಯ ದುಕೂಲದ ಚಂದ್ರಮುಖಿಯಲ್ಲ. ನೆಳಲು ಬೆಳಕಿನ ಕಲೆಯ ದೇವತೆ ಶಾರದ. ಎರಡು ಪಕ್ಕಕ್ಕೂ ಮೋಡಗಳು. ಬಿಳಿಯ ದೊಂದು ಕರಿಯದೊಂದು ಅವುಗಳ ತಳು ಪರದೆಯೊಳಗಿಂದ ಒಳಗಿನ ಮನೋಹರ ಮೂರ್ತಿ ಕಾಣುತಿತ್ತು. ಮುಖದ ಒಂದು ಪಕ್ಕಕ್ಕೆ ಹೆಚ್ಚು ನೆಳಲು ಬಿದ್ದು ಕೊಂಚ ಕಪ್ಪುಛಾಯೆ ಮೂಡಿತ್ತು. ಅದರಿಂದ ಕಲೆಯ ಅಧಿ ದೇವತೆಯ ಕಣ್ಣಿನ ಆಲಿ ಹೊಳೆಯುತಿತ್ತು. ಆದರೆ ಕಣ್ಣೀರಿನ ಮೂಲಕ. ಮತ್ತೊಂದು ಪಕ್ಕ ಪೂರ್ಣ ಬೆಳಕಿನಲ್ಲಿ ಶುಭ್ರವಾಗಿತ್ತು. ಕಣ್ಣು ನಗೆಯ ಶಾಂತಿ ಸೂಸುತ್ತಿತ್ತು. ಶಾರದೆಯ ಎರಡು ಕೈಗಳಲ್ಲಿ ಒಂದರಲ್ಲಿ ಅರಳುತ್ತಿರುವ ಹೂಮೊಗ್ಗು ಮತ್ತೊಂದರಲ್ಲಿ ಮುಳ್ಳಿನ ಮಾಲೆ! ತನ್ನ ಕಲಾಪ್ರೇಮಿಯ ಚಿತ್ರ ಕಂಡು ಎದ್ದು ನಿಂತವನು ಮತ್ತೆ ಕುಳಿತ. ತಲೆ ತಗ್ಗಿಸಿದ. ತಾಯಿ! ನನಗೇಕ ಈ ಕಲೆಯನ್ನು ಕೊಟ್ಟೆ? ಸೌಂದರ್ಯದ ಸವಿಯನ್ನೇಕೆ ತೋರಿಸಿದ? ನನ್ನನ್ನೂ ಸಾಮಾನ್ಯನನ್ನಾಗಿನಬಾರದಿತ್ತೇ? ಕಲ್ಪನೆಯ ಬಿಸಿ ಮುಳ್ಳಿನ ಮಾಲೆಯೇ ನನ್ನ ಹಣೆಗೆ, ಹೂವಿಲ್ಲವೇ? ಎಂದೆಂದಿಗೂ ಹೀಗೆಯೇ ನಾನು ದುಃಖ ಅನುಭವಿಸಬೇಕೇ? ಸೌಂದರ್ಯ ಕಾಣುವ ಬಯಕೆ ಕೊಟ್ಟೆ, ಶಕ್ತಿ ಕೊಟ್ಟೆ, ಆದರೆ ಅದನ್ನು ಪಡೆಯುವ ಶಕ್ತಿ ಕೊಡಲಿಲ್ಲ ಈ ಕಲೆ, ಈ ಶಕ್ತಿ, ಈ ಯಶಸ್ಸು, ಈ ಕಲ್ಪನೆ ಯಾರಿಗೆ ಬೇಕು? ಮನಸ್ಸಿಗೆ ಶಾಂತಿ ಕೊಡಲಾರೆಯಾ? ಎಂದು ಮೂಕ ವೇದನೆಯಿಂದ ಶಾರದೆಯ ಚಿತ್ರದ ಮುಂದೆ ಬೇಡಿಕೊಂಡ. ಪಕ್ಕದಲ್ಲೇ ವಸಂತ ಋತುವಿನ ಆಗಮನದ ಚಿತ್ರ. ಮೂಕರಿಗೂ ಬಾಯಿ ಬರುವಂತೆ ಹೂ ಬಿರಿಯುವ ವಸಂತದ ಚಿತ್ರ. ಬಳುಕುವ ಬಿಳಿ ಮೋಡದ ಮೇಲೆ ನಾಚಿಕೆಯ ಕೆಂಪು ರಂಗು ಚೆಲ್ಲುವ ವಸಂತರಾಜನ ಆಗಮನ ಚಿತ್ರ. ಅದನ್ನು ಹರಿದು ಚೂರು ಚೂರು ಮಾಡಿಬಿಡಲೇ ಎನ್ನುವಷ್ಟು ಕೋಪ ಬಂದಿತ್ತು ಮೋಹನನಿಗೆ. ಆದರೆ ಅದೇಕೋ ಏನೋ ಆ ದಿನ ಕೈ ತಡೆದಿತ್ತು. ತಲೆ ಹಾಗೆಯೇ ಎಷ್ಟೋ ಹೊತ್ತು ಚಿತ್ರದ ಮುಂದೆ ಬಾಗಿತ್ತು. ಅಂದು ರಾತ್ರಿ

ಬಹಳ ಹೊತ್ತಿನ ವರೆಗೂ ಕುಂಚ ಹಿಡಿದು ಯಾವುದೋ ಚಿತ್ರ ಬಿಡಿಸಿದ್ದ. ಅವು ತನ್ನ ಚಿತ್ರ. ತನ್ನೆಲ್ಲ ಆಸೆ ಆಕಾಂಕ್ಷೆಗಳನ್ನು ಹುದುಗಿಸಿದ್ದ ಮುಖ, ಚಿತ್ರ! ಅದನ್ನು ಚಿತ್ರಿಸುವಷ್ಟು ದಿನ ಮನಸ್ಸಿನ ನೋವಿನಲ್ಲೂ ಒಂದು ಸುಖ, ಅದನ್ನು ಮುಗಿಸಿದ ಮೇಲಿನ ಸಮಾಧಾನದಲ್ಲೂ ಒಂದು ಅಶಾಂತಿ!

ಇದೆಲ್ಲಾ ನೆನಪಾಯಿತು ಮೋಹನನಿಗೆ. ಕಣ್ಣಿವೆ ಮಳೆಯಿಂದ ತೊಯ್ದ ಹೂವಿನೆಸಳಿನಂತೆ ತೇವವಾಗಿತ್ತು. ಮುಳ್ಳಿನ ತುದಿಯ ಮಂಜಿನ ಹನಿಯಂತ ಕೆನ್ನೆಯ ಚರ್ಮದ ದಿಣ್ಣೆಯ ಮೇಲೆ ಒಂದು ಹನಿ ನೀರು ನಿಂತು ಕೆಳಗಿಣುಕು ತ್ತಿತ್ತು.

ತಾಯಿ ಅವನನ್ನು ಅಷ್ಟಕ್ಕೇ ಬಿಡಲಿಲ್ಲ ಒಂದೇ ಸಮನಾಗಿ ಒತ್ತಾಯ ಮಾಡಲಾರಂಭಿಸಿದರು.

“ಮೊದಲು ನೀನು ನೋಡು. ನಿನಗೊಪ್ಪಿಗೆಯಾದರೆ ಸರಿ. ಆ ಮೇಲೆ ಮುಂದಿನ ಮಾತು. ಸುಮ್ಮನೆ ಯಾಕೆ ಒದ್ದಾಡುತ್ತೀ? ನೀನೇ ನನಗೆ ನೂರು ಸಾರಿ ಹೇಳಿಲ್ಲವೇ? ಒಳಗಿನ ಸೌಂದರ್ಯವೇ ನಿಜವಾದ ಸೌಂದರ್ಯವೆಂದು ಸಾರಿಸಾರಿಗೂ ಹೇಳುತ್ತಿರುವೆಯಲ್ಲಾ,” ಎಂದರು.

ಮೋಹನ ಮಾತಾಡಲಿಲ್ಲ. ಹೃದಯದಲ್ಲಿ ದ್ವೇಷ, ದುಃಖಗಳು ತುಂಬಿ ಬರುತ್ತಿದ್ದುವು.

“ನಾಳೆಯ ದಿನ ಮಧ್ಯಾಹ್ನ ಮನೆಯಲ್ಲೇ ಇರು ನಾನು ಏನು ಹೇಳಿದೇನೆ ನೋಡುತ್ತಿರು. ಹುಡುಗಿ ನಿನ್ನ ಕಲೆಯನ್ನು ಮೆಚ್ಚುತ್ತಾಳೆ. ಖಂಡಿತ ನಿನ್ನನ್ನು ಮದುವೆಯಾಗಲು ಒಪ್ಪುತ್ತಾಳೆ.”

ತಾಯಿ ಹೊರಟು ಹೋದರು. ಮೋಹನ ಹಾಗೆಯೇ ನಿಂತಿದ್ದ. ಮನಸ್ಸಿನಲ್ಲಿನ್ನೂ ಬಿರುಗಾಳಿ. ಹೀಗೋ ಹಾಗೋ ತಿಳಿಯದೆ ಒದ್ದಾಡುತ್ತಿದ್ದ. ನೂರು ಬಗೆಯ ಮಿಣುಕು ಚಿಂತೆಗಳು ಮಿಂಚಿ ಮಾಯವಾಗುತ್ತಿದ್ದುವು. ಒಂದು ನಿಮಿಷ ಆಸೆ. ಸುಖದ ಕನಸು. ವಸಂತದ ಮಧುವಿನಲ್ಲಿ ಮಿಂದು ತಾನೂ ತನ್ನ ಗೆಳತಿಯೂ ಬಣ್ಣ ಬಣ್ಣದ ಜಗತ್ತನ್ನು ಕಟ್ಟಿ ಅಲ್ಲಿ ಕುಣಿದಂತೆ. ಮೋಡಗಳ ಮರೆಯಿಂದ ಇಣುಕುವ ಬಣ್ಣಕ್ಕೆ ಮಾರುಹೋದಂತೆ. ಆದರೆ ಮರುನಿಮಿಷವೇ ಏಕಾಕಿತನದ ಭೀಕರ ದುಃಸ್ವಪ್ನ! ಮತ್ತೆ ಕುದುರುವ ಆಸೆ. ಹುಡುಗಿಗೆ ನಿಜವಾಗಿಯೂ ಕಲೆಯಲ್ಲಿ ಆಸಕ್ತಿ ಇದ್ದರೆ ಖಂಡಿತವಾಗಿ ತನ್ನ

ಕಲೆಗಾಗಿಯಾದರೂ ತನ್ನವಳಾಗುವಳು ಎಂಬ ಆಸೆ ನಿರಾಸೆಯ ಮಡಿಲಿಂದ ಇಣುಕುತ್ತಿತ್ತು. ಮನಸ್ಸಿಗೆ ಅದೂ ಒಗ್ಗದು. ಎಲ್ಲಿ, ಹೇಗೆ ಸಾಧ್ಯ ಅದು? ಹೆಣ್ಣು ಅಷ್ಟು ಸುಲಭವಾಗಿ ಹೊರ ರೂಪದ ಆಸೆಯನ್ನು ಬಿಟ್ಟು ಬಿಡುವಳೇ ಎಂದು ಹೃದಯ ಆಸೆಯ ಕನ್ನಡಿಯನ್ನು ಒಡೆಯುತಿತ್ತು. ಮೋಹನ ಮೆಲ್ಲನೆ ಶಾರದೆಯ ಚಿತ್ರದ ಬಳಿ ಬಂದು ತಲೆ ತಗ್ಗಿಸಿದ. ತಾಯಿ—ಕಲೆಯನ್ನು ಕೊಟ್ಟೆ, ಸೌಂದರ್ಯ ತಿಳಿಯುವ ಶಕ್ತಿ ಕೊಟ್ಟೆ. ಈಗ ಮನಸ್ಸಿನ ಶಕ್ತಿ ಕೊಡು. ಮನಸ್ಸಿನ ಸ್ಥೈರ್ಯ ನೀಡು ಕಾಪಾಡು—ಎಂದು ಕಣ್ಣೀನಿಂದ ಮೊರಯಿಟ್ಟ

ಮಾರನೆ ದಿನ ತಾಯಿಗೆಷ್ಟೋ ಹೇಳಿದ. ನನ್ನ ಮದುವೆಯ ಯೋಚನೆ ಬಿಟ್ಟುಬಿಡು ಬೇಡ ಎಂದೆಷ್ಟೋ ಕೇಳಿಕೊಂಡ. ಆದರೆ ತಾಯಿಯನ್ನು ಒಪ್ಪಿಸ ಲಾಗಲಿಲ್ಲ. ರಾತ್ರಿಯೆಲ್ಲಾ ಇಬ್ಬರೂ ನಿದ್ರೆಯಿಲ್ಲದೆ ಕಳೆದಿದ್ದರು. ಮೋಹನ ತನ್ನ ಚಿತ್ರಗಳ ಮುಂದೆ, ಹೃದಯದ ಯಾವುದೋ ಮೂಲೆಯಲ್ಲಿ ಎದ್ದ ಕೊರಗನ್ನು, ನೋವನ್ನು ತಣಿಸುವ ಶಕ್ತಿ ಬೇಡುತ್ತ ಶಾರದೆಯ ಚಿತ್ರದ ಮುಂದೆ, ಬೃಂದಾವನ ವಿಹಾರಿ ಗೀತಾಚಾರ್ಯ ಶಾಂತಿಪ್ರಿಯ ಮೋಹನ ಕೃಷ್ಣನ ಮುಂದೆ, ಕೊನೆಯದಾಗಿ ಜಗತ್ತನ್ನು ಬಿಟ್ಟು ಹೊರಟು ಬುದ್ಧನಾಗುವ ನಿಶ್ಚಿತ ಮನಸ್ಸಿನ ಯುವಕ ಗೌತಮನ ಚಿತ್ರದ ಮುಂದೆ. ಆದರೆ ಯಾವುದ ರಿಂದಲೂ ಮನಸ್ಸಿಗೆ ಸಮಾಧಾನ ಸಿಕ್ಕಿರಲಿಲ್ಲ. ಮನಸ್ಸು ಮತ್ತೆ ಮತ್ತೆ ವಸಂತಾಗಮನದ ಚಿತ್ರಕ್ಕೆ ಸುಯ್ಯುತ್ತಿತ್ತು. ಅದರ ಎದುರಿಗಿದ್ದ ಜೇಡನ ಬಲೆಯ ಹೆಣ್ಣಿನ ಮುಖದ ಕಡೆಗೆ ಕಣ್ಣು ಓಡುತ್ತಿತ್ತು.

ತಾಯಿ ರಾತ್ರಿಯೆಲ್ಲ ದೇವರನ್ನು ಬೇಡಿಕೊಳ್ಳುತ್ತಿದ್ದರು. ಈ ಅಗ್ನಿ ಪರೀಕ್ಷೆಯನ್ನು ಪಾರುಗೊಳಿಸಿ ಬಿಡೆಂದು ಶ್ರೀರಾಮನನ್ನು ಬೇಡಿಕೊಂಡರು. ಹೇಗಾದರೂ ಸರಿ, ಮನೆಗೆ ರೂಪವತಿಯಾದ ಸೊಸೆಯೊಬ್ಬಳು-ಬಂದರೆ ಸಾಕು ಎಂದು ಮೊರೆಯಿಡುತ್ತಿದ್ದರು. ದೇವರ ಮುಂದೆ ನೂರು ಹರಕೆ ಹೊತ್ತರು. ಹುಡುಗಿಯನ್ನು ಹೇಗಾದರೂ ಮೋಹನ ಒಪ್ಪುವಂತೆ ಮಾಡಿರೆಂದು ಕೇಳಿ ಕೊಂಡರು. ಮೋಹನ-ನನ್ನ ಮಗ-ಅವನ ಮನಸ್ಸೇ ವಿಚಿತ್ರ. ಯಾವಾಗ ನೋಡಿದರೂ ತನ್ನನ್ನು ತಾನೇ ಹಳಿದುಕೊಳ್ಳುತ್ತಾನೆ. ಮದುವೆಯ ಮಾತೆತ್ತಿ ದರೇ ನೊಂದುಕೊಳ್ಳುತ್ತಾನೆ. ಈಗಲಾದರೂ ಹೇಗಾದರೂ ಅವನು ಮದುವೆಗೆ ಒಪ್ಪುವಂತಾಗಲಿ ದೇವರೇ ಎಂದು ಹಂಬಲಿಸುತ್ತಿದ್ದರು. ಆದರೆ ಅವರ ಮನಸ್ಸಿನ ವಿಚಾರ ಮೋಹನನ ವಿಚಾರದ ರೀತಿಗೆ ಹರಿಯಲೇ ಇಲ್ಲ. ಹುಡುಗಿ

ತನ್ನನ್ನೊಪ್ಪುವುದಿಲ್ಲವೆಂದು ಮೋಹನನ ಯೋಚನೆಯಾದರೆ ಹುಡುಗಿಯನ್ನು ಮೋಹನನೊಪ್ಪುವುದಿಲ್ಲವೆಂದು ಅವರ ಕಳವಳ. ಆದರೆ ಇಬ್ಬರು ಯೋಚಿಸ್ತಿದ್ದುದೂ ಒಂದೇ ವಿಷಯ!

ಮಧ್ಯಾಹ್ನದ ಹೊತ್ತಿಗೆ ಚಿಂತೆಯಿಂದ ಮೋಹನನ ಮನಸ್ಸು ದಿಕ್ಕುಗಾಣದಾಗಿತ್ತು. ಮೀನು ಸಿಕ್ಕಿಕೊಂಡ ಗಾಳದ ದಾರದಂತೆ ಒಂದೇ ಸಮನಾಗಿ ಕುಣಿದಾಡುತ್ತಿತ್ತು. ಹೊರಗೆ ಯಾವ ಸಮಯಕ್ಕೆ ಆ ಹುಡುಗಿ ಬಂದು ಬಿಡುವಳೋ, ಹೇಗಿರುವಳೋ, ತನ್ನನ್ನೆಲ್ಲಿ ನೋಡಿ ಬಿಡುವಳೋ ಎಂಬ ಹೆದರಿಕೆ ಕಾತರ. ಜತೆಗೆ ಅವಳನ್ನು ನೋಡಿಬಿಡಬೇಕೆನ್ನುವ ಆಸೆ ಮನಸ್ಸಿನಲ್ಲಿ ಈ ಆಸೆ ರಾತ್ರಿಯೆಲ್ಲಾ ಬೇರೂರಿ ಬೆಳೆದಿತ್ತು. ಭವಿಷ್ಯವನ್ನು ಸುಖಮಯವನ್ನಾಗಿಸುವ ಆಸೆ ಯಾರಿಗೆ ತಾನೇ ಇರುವುದಿಲ್ಲ? ಮೋಹನ ಸಾಧ್ಯವಾದಷ್ಟು ಚೆನ್ನಾಗಿ ಬಟ್ಟೆಹಾಕಿಕೊಂಡ. ತಲೆ ಬಾಚಿಕೊಳ್ಳಲು ಕನ್ನಡಿಯ ಮುಂದೆ ಸಿಲ್ಲುವವರೆಗೆ ಅರೆ ಭರವಸೆ ಆದರೆ ಕನ್ನಡಿಯಲ್ಲಿ ತನ್ನ ಮುಖ ಕಂಡೊಡನೆಯೇ ಹೃದಯಕ್ಕೆ ಈಟಿ ಇಟ್ಟಂತಾಯಿತು. ಎಷ್ಟೇ ಕಷ್ಟ ಪಟ್ಟರೂ ಅಷ್ಟೇ ತನ್ನ ಬಾಳು ಎನಿಸಿತು. ಆದರೂ ತಾಯಿಯ ಮಾತಿನಿಂದ ಒಂದು ಬಗೆಯ ಆಶ್ವಾಸನೆ. ಸರಿಹೋದರೂ ಹೋಗಬಹುದು ಆ ಹುಡುಗಿ ಒಪ್ಪಿದರೂ ಒಪ್ಪ ಬಹುದು. ತನ್ನನ್ನು ತನಗಾಗಿಯಲ್ಲದಿದ್ದರೂ ತನ್ನ ಕಲೆಗಾಗಿ ಒಪ್ಪ ಬಹುದು. ಕೊಂಚ ಆದರ್ಶವಾದವಿದ್ದರೆ ಖಂಡಿತವಾಗಿಯೂ ಒಪ್ಪಬಹುದು. ಎಂದು ಮನಸ್ಸಿಗೆ ಸಮಾಧಾನ ಹೇಳಿ ಕೊಳ್ಳಲಾರಂಭಿಸಿದ ಮನಸ್ಸಿನ ಸಂದೇಹ, ತಾಕಲಾಟಗಳ ಬಾಯಿಗೆ ಬಟ್ಟೆ ತುರುಕಿ ತನ್ನ ಈ ಅಭಿಪ್ರಾಯವನ್ನು ಮನಸ್ಸಿನ ಮೇಲೆ ಒತ್ತಿ ಒತ್ತಿ ಮನಸ್ಸು ಅದನ್ನು ನಂಬುವಂತೆ ಮಾಡಿದ. ಹಿಗಾಗಿ ಹುಡುಗಿ ಅವನ ಮನೆಯ ನಡು ಕೋಣೆಯಲ್ಲಿ ಮೋಹನನ ತಾಯಿಯೊಂದಿಗೆ ಕುಳಿತುಕೊಂಡು ಮಾತಾಡಲು ಆರಂಭಿಸುವ ವೇಳೆಗೆ ಮೋಹನನ ಮನಸ್ಸಿನಲ್ಲಿ ಒಂದು ಬಗೆಯ ನಂಬುಗೆ ಭರವಸೆ ಮೂಡಿತ್ತು.

ಹುಡುಗಿ ನಿಜವಾಗಿಯೂ ರೂಪವತಿ. ಮೋಹನ ಚಿತ್ರಿಸಿದ್ದ ಕಲಾಧಿದೇವತೆಯ ಪ್ರತಿರೂಪ ಆ ಹುಡುಗಿ ಎನ್ನುವಂತಿತ್ತು. ಆ ನೆಳಲು ಬೆಳಕಿನ ವೈಖರಿಯಿಲ್ಲದಿದ್ದರೂ ತುಸು ಕಂದು ಬಿಳುಪು. ಮುಖದಲ್ಲಿ ಅಗಲವಾದ ಕಣ್ಣುಗಳು, ಅಗಲವಾದ ಹಣೆಯಲ್ಲಿ ಹೊಳೆಯುವ ಚಮುಕಿಯಿಟ್ಟ ಕುಂಕುಮದ ಬೊಟ್ಟು, ಎಡಕ್ಕೆ ತೆಗೆದ ಬೈತಲೆ, ಬೈತಲೆಯ ಮೇಲೆ ಬಂಗಾಲಿ ಹೆಣ್ಣುಮಕ್ಕಳಂತೆ ಕೊಂಚ ಚಂದ್ರ ಸೋಕಿಸಿದ್ದಳು. ಮುಖಕ್ಕೊಪ್ಪುವ ಮೂಗು,

ಮೂಗಿಗೊಪ್ಪುವಂತಹ ನತ್ತು. ಕಿವಿಗಳೆರಡಕ್ಕೂ ವಜ್ರದ ಓಲೆಗಳು. ತೂಗು ಬಿಟ್ಟ ಎರಡು ಬಿಲ್ಲಿನಾಕಾರದ ಲೋಲಕ್ಕುಗಳು ಬೈತಲೆಯ ಪಿಡಿಯಿಂದ ಕಿತ್ತು ಬಂದ ಒಂದೆರಡು ಎಳೆ ಕೂದಲು ಕಿವಿಯ ಮೇಲುಭಾಗದ ಮೇಲೆ ಹಾದಿದ್ದುವು. ಸಮರೂಪ, ಸಮಸೃಷ್ಟಿಯ ಕಲೆ ಆ ಹುಡಿಗಿಯ ಮುಖದಲ್ಲಿತ್ತು. ಮೋಹನ ತನ್ನ ಕೋಣೆಯಿಂದ ಕದ್ದು ನೋಡಿದ ಎದೆ ಡವಗುಟ್ಟುತ್ತಿತ್ತು- ನೋಡಲು ಆರಂಭಿಸಿದಾಗ. ಆದರೆ ಎಷ್ಟು ಹೊತ್ತಾದರೂ ಅಲ್ಲಿಂದ ಕಣ್ತೆರೆಯ ಲಾಗಲೇ ಇಲ್ಲ ಕಲಾವಿದನ ದೃಷ್ಟಿ ಕಲೆಯ ಸುಂದರ ಮೂರ್ತಿಯಲ್ಲಿ ಐಕ್ಯವಾಗಿ ಹೋಗಿತ್ತು ಮದುವೆಗಾಗಿ ಬಂದಿರುವವಳು ಈ ಹುಡುಗಿ. ತಾನು ಈ ಹುಡಿಗಿಯನ್ನು ನೋಡಿ ಒಪ್ಪಬೇಕು. ತಾಯಿ ಆ ಹುಡುಗಿಯನ್ನು ಮಾತಾಡಲು ಯತ್ನಿಸುತ್ತಿದ್ದಾಳೆ. ಆ ಹುಡಿಗಿ ತನ್ನನ್ನೊಪ್ಪಬೇಕು. ತನ್ನ ಕಲೆಯನ್ನೊಪ್ಪಿ ತನ್ನವಳಾಗಲೊಪ್ಪಬೇಕು. ಅದು ಸಾಧ್ಯವೋ ಇಲ್ಲವೋ, ಈ ಯೋಚನೆಗಳೊಂದೂ ಅವನ ಮನಸ್ಸಿನಲ್ಲಿ ಸುಳಿಯಲಿಲ್ಲ. ತಾನಿದುವರೆಗೂ ಯಾವ ಆದರ್ಶವನ್ನು ಚಿತ್ರಿಸಲು ಯತ್ನಿಸಿದ್ದೆನೋ ಆ ಚಿತ್ರಕ್ಕೆ ಈ ಹುಡುಗಿ ಸ್ಫೂರ್ತಿಯಾಗಿರುವಳೆಂದು ಮಾತ್ರ ಅವನಿಗೆ ಗೊತ್ತು. ಅವಳು ಹುಡುಗಿ ಯನ್ನುವಷ್ಟೂ ಅವನಿಗೆ ಮೈಯರಿವಿರಲಿಲ್ಲ. ಅಂದೊಂದು ಮುಖ ಮಾತ್ರ. ಆ ಮುಖದ ಸೌಂದರ್ಯ ಮಾತ್ರ ಅವನಿಗೆ ಗೊತ್ತು. ಶಾಂತಿ ಬಂದಿತ್ತು. ಸಮಾಧಾನ ನೀಡಿತ್ತು

ಈ ರಸಸೃಷ್ಟಿಯ ಕಲ್ಪಿತ ಪ್ರಪಂಚದ ಮೈಮರೆವಿನಿಂದ ಮೋಹನನ ಮನಸ್ಸು ಎಚ್ಚರಗೊಂಡು ಮತ್ತೆ ಭೂಮಿಗೆ ಇಳಿದಾಗ, ಮತ್ತೊಮ್ಮೆ ಅವರು ಕುಳಿತ ಕಡೆ ನೋಡಿದ. ಅಲ್ಲಿ ಅವರಾರೂ ಇರಲಿಲ್ಲ. ತಕ್ಷಣವೇ ಮೊದಲಿನ ಅಸಮಾಧಾನ, ಅಶಾಂತಿ, ಕಳವಳ ಕಾತರಗಳು ನೂರುಮಡಿಯಾಗಿ ಹಿಂತಿರುಗಿ ದವು. ತನ್ನ ತಾಯಿ ಆ ಹುಡುಗಿಯನ್ನು ತನ್ನ ಕಲೆಯ, ತನ್ನ ಚಿತ್ರಗಳ ಪರೀಕ್ಷೆಗೆ ಕರೆದೊಯ್ದಿದ್ದಾರೆ. ತನ್ನ ಸತ್ವಪರೀಕ್ಷೆಯಾಗುತ್ತಿದೆಯೆಂದು ತಕ್ಷಣ ಮನವರಿಕೆ ಯಾಯಿತು. ಮನಸ್ಸು ಚಿತ್ರಶಾಲೆಗೆ ಓಡಿತು. ಕಾಲು ಅವನಿಗರಿವಿಲ್ಲದೆಯೇ ಒಂದರೆ ನಿಮಿಷದಲ್ಲಿ ಅವನನ್ನು ಚಿತ್ರಶಾಲೆಯ ಪಕ್ಕದ ಕೋಣೆಗೆ ಒಯ್ದಿತು.

ಅಲ್ಲಿಂದ ಅವನಿಗೆ ಅವರು ಕಾಣುತ್ತಿರಲಿಲ್ಲ. ಅವರಿಗೆ ಅವನಲ್ಲಿರುವುದೂ ಕಾಣುತ್ತಿರಲಿಲ್ಲ. ಆದರೆ ಅವನ ಮೈಯೆಲ್ಲ ಒಂದು ಬಗೆಯ ಉತ್ಸುಕತೆಯಿಂದ ಪುಲಕಗೊಂಡಿತ್ತು. ಅವರ ಮಾತೆಲ್ಲ ಅವನಿಗೆ ಕೇಳಿಸುತ್ತಿತ್ತು. ತನ್ನ ನಾಳಿನ ಸೊಸೆಯಾಗುವ ಹುಡುಗಿಗೆ ತಾಯಿ ತನ್ನ ಮಗನ ಚಿತ್ರಗಳನ್ನು ಒಂದೊಂದನ್ನಾಗಿ

ತೋರಿಸುತ್ತಿರುವರೆಂದು ಗೊತ್ತಾಯಿತು. ಒಂದೊಂದು ಚಿತ್ರದ ಹತ್ತಿರ ಬಂದು ತಾಯಿ ನಿಂತು ತೋರುವುದನ್ನೂ ಮನಸ್ಸಿನಲ್ಲೇ ಚಿತ್ರಿಸಿ ಕೊಳ್ಳುತ್ತಿದ್ದ.

"ನೋಡಮ್ಮ, ಇದು ಸಂಜೆಯ ದೃಶ್ಯ" ಎಂದು ತಾಯಿ ಹೇಳಿದುದು ಕೇಳಿಸಿತು. ತಾನು ಚಿತ್ರಿಸಿದ ಸಂಜೆಯ ಚಿತ್ರ ಅವನ ಮುಂದೆ ಬಂದು ನಿಂತಿತು. ದೂರದಲ್ಲಿ ತೆಳು ನೀಲಿಯಾಗಿ ಬೆಟ್ಟದ ಹಿನ್ನೆಲೆ. ಅದರಿಂದೀಚೆಗೆ ವಿಶಾಲವಾದ ಬಯಲು. ಬಯಲಿನ ನಡುವೆ ಒಂದು ಸಣ್ಣ ಕಾಲುಹಾದಿ ಆ ಸಣ್ಣ ಕಾಲುಹಾದಿಯಲ್ಲಿ ಒಬ್ಬ ಕಾವಿಧಾರಿ ಹೋಗುತ್ತಿದ್ದಾನೆ. ಆಕಾಶದ ವಿಶಾಲವಾದ ನೀಲಿಮೆಯಲ್ಲಿ ಕಾಣದಾಗಲು, ಐಕ್ಯವಾಗಲು ಹೋಗು ತ್ತಿದ್ದಾನೆ. ಅವನ ಮೂರ್ತಿಯಷ್ಟೇ ನೆರಳಿನಂತೆ ಕಾಣುತ್ತಿದೆ. ಆ ಪಕ್ಕಕ್ಕೆ ಕರಿಎಳ್ಳಿನಂತಹ ಮೋಡದ ಮರೆಯಿಂದ ಕೊಂಚ ಕೊಂಚ ಬಣ್ಣ ಕಾಣಿಸಿ ಕೊಳ್ಳುತ್ತಿದೆ ಹೂಂ! ಆ ಚಿತ್ರ ಅವನು ಬಹಳ ಮೊದಲು ಬರೆದುದು. ಅದು ಚಿತ್ರಕಲೆಯನ್ನಾರಂಭಿಸಿದ ಮೊದಲಲ್ಲಿ ಬರೆದುದು. ಅವನಿಗೇ ಅದು ಅಷ್ಟೊಂದು ಚೆನ್ನಾಗಿ ಒಪ್ಪಿರಲಿಲ್ಲ. ಆ ಹುಡುಗಿ ಏನೆಂದುಕೊಳ್ಳುವಳೋ ಎಂದುಕೊಂಡ.

"ಬಹಳ ಸೊಗಸಾಗಿದೆ" ಎಂದು ಮಧುರ ದನಿಕೊಟ್ಟ ಉತ್ತರ ಕೇಳಿಸಿತು.

ಮೋಹನನ ಮೈಯೆಲ್ಲಾ ಶ್ರುತಿಯಿಟ್ಟ ವೀಣೆಯಂತಾಯಿತು!

"ಇಗೋ ಈ ಕಡೆ ನೋಡಮ್ಮ—ಇದು ಒಬ್ಬ ಮುದುಕ ಕೂಲಿಗಾರನ ಚಿತ್ರ" ಎಂದರು ತಾಯಿ. ಮೋಹನನಿಗೆ ತಾನು ಆ ಚಿತ್ರಕ್ಕೆ ಎರಕ ಹುಯ್ದ ಭಾವನಾಪರಂಪರೆಯೆಲ್ಲ ನೆನಪಾಯಿತು. ಆ ಮುದುಕ ಕೂಲಿಗಾರನಲ್ಲಿ ತೋರಿಸಬೇಕಾದ ದೇಹಶಕ್ತಿ, ಮನಸ್ಸಿನ ಶಕ್ತಿಯ ಜತೆಗೆ ಬಾಳನ್ನು ಎದುರಿ ಸುವ ಕೆಚ್ಚು, ಅನುಭವದ ಸಹನೆಗಳನ್ನೆಲ್ಲ ಕುಸುರು ಕುಸುರಾಗಿ ಬಿಡಿಸಲು ಅವನು ಪಟ್ಟ ಕಷ್ಟವೆಲ್ಲ ನೆನಪಾಯಿತು. ಅವನ ಮನಸ್ಸಿನ ನೋವನ್ನು ಅವನು ಊರಿಗೋಲಿನ ಆಸರೆಯಲ್ಲಿ ನಿಂತ ನಿಲುವಿನಲ್ಲಿ ಚಿತ್ರಿಸಿದ್ದ. ಇಷ್ಟಾದರೂ ಅವನಿಗೇ ಅದು ಸಮಾಧಾನಕರವಾಗಿರಲಿಲ್ಲ. ಆ ಚಿತ್ರದಲ್ಲಿ ಕಣ್ಣಿನಲ್ಲಿ ತೋರಿಸಬೇಕಾಗಿದ್ದ ಹಸಿವು ಕಂಡಿರಲಿಲ್ಲ. ಅದು ತನ್ನ ಅನುಭವಕ್ಕೆ ಬಂದಿರ ಲಿಲ್ಲ. ತಾನು ಚಿತ್ರಿಸಲಾಗಿರಲಿಲ್ಲ.

"ಇದು—"

ಹೀಗೆಯೇ ತಾಯಿ ಒಂದಾದ ಮೇಲೊಂದು ಚಿತ್ರ ತೋರಿಸಿಕೊಂಡು

ನಡೆದಂತೆ ಮೋಹನನ ಮನಸ್ಸಿನಲ್ಲೂ ಆ ಚಿತ್ರಗಳು ಸುಳಿದವು. ಅಷ್ಟರಲ್ಲಿ ಹೊರಗೆ ಯಾರೋ ಕೂಗಿದ ದನಿಯಾಯಿತು.

"ಯಾರೋ ಕೂಗುತ್ತಿದ್ದಾರೆ. ನೋಡಿ ಬರುತ್ತೇನೆ. ಒಂದೇ ಕ್ಷಣ" ಎನ್ನುತ್ತ ತಾಯಿ ಹೊರಟು ಹೋದರು. ಮೋಹನನ ಹೃದಯದ ಆವೇಶ ಹೆಚ್ಚಾಯಿತು. ಎಲ್ಲಿ ತಾನಿರುವುದು, ಅವರಿಗೆ ಗೊತ್ತಾಗಿ ಹೋಗುವುದೋ ಎಂದು ಒದ್ದಾಡಿದ ಆದರೆ ಆ ಜಾಗ ಬಿಟ್ಟು ಕದಲಲೂ ಇಷ್ಟವಿಲ್ಲ. ಅಲ್ಲಿ ಆ ಹುಡುಗಿ ಅವಳ ಜತೆಗೆ ಬಂದಿದ್ದ ಅವಳ ಅಕ್ಕ ಇಬ್ಬರೂ ಮಾತನಾಡುವುದು ಅವನಿಗೆ ಕೇಳಿಸುತ್ತಿತ್ತು

"ಅಕ್ಕ, ಈ ಚಿತ್ರ ನೋಡು. ಎಷ್ಟು ಚೆನ್ನಾಗಿದೆ. ಆ ಭಂಗಾರದ ಚಿಟ್ಟೆ, ಬಂದು ಹೂವನ್ನು ಮುತ್ತಿಡಲು ಹೋಗುತ್ತಿದೆ. ಹೂವು ತೊಟ್ಟು ಕಳಚಿ ಬೀಳುತ್ತಿದೆ. ಆ ಚಿಟ್ಟೆಯ ರೆಕ್ಕೆಗಳು ನೋಡು, ಎಷ್ಟು ಚೆನ್ನಾಗಿ ಬಣ್ಣವಾಗಿ ವ್ಯಖರಿಯಿಂದಿವೆ!" ಎಂದಳು ಹುಡುಗಿ

"ಆ ಚಿತ್ರಕ್ಕೇನೋ ಹೆಸರು ಬರೆದಂತಿದೆ. ನೋಡು"

"ಪ್ರೇಮದ ಬಗೆ ಅಂತ ಚಿಟ್ಟೆ ಕೊನೆಗೆ ಬಂದಿದೆ ಹೂವು ತೊಟ್ಟು ಕಳಚಿ ಬೀಳುವ ವೇಳೆಗೆ! ಎಷ್ಟು ಚೆನ್ನಾಗಿದೆ, ಅಕ್ಕ!"

"ನಿಜವಾಗಿಯೂ ಇಂತಹ ಕಲಾವಿದನ ಕೈಹಿಡಿಯಲು ಪುಣ್ಯ ಮಾಡಿರ ಬೇಕು ಕಣೆ"

"ಇಷ್ಟೊಂದು ಸುಂದರವಾಗಿ ಚಿತ್ರ ಬರೆಯುವರಲ್ಲ' ಅವರು ಇನ್ನೆಷ್ಟು–"

ಮೋಹನನ ಎದೆ ಹೊಡೆತ ನಿಂತು ಹೋದಂತಾಯಿತು ಆ ಹುಡುಗಿಯ ಮಾತನ್ನು ಪೂರ್ತಿ ಕೇಳಲೂ ಇಲ್ಲ. ಕೊನೆಗೆ ಅಲ್ಲಿಗೇ ಬಂತೆ? ತಾನೆಣಿಸಿದಂತೆಯೇ? ಕಲೆಯ ಸೌಂದರ್ಯವಲ್ಲ. ಕಲಾವಿದನ ಸೌಂದರ್ಯದ ಬಯಕೆ!

"ಆಗಲೇ ಅವರ ಯೋಚನೆ ಬಂದು ಬಿಟ್ಟಿತೇನೇ" ಎಂದು ಅಕ್ಕ ಹಾಸ್ಯ ಮಾಡಿದುದು ಕೇಳಿಸಿತು.

ಅಕ್ಕ ತಂಗಿಯರ ಕಿಲ ಕಿಲ ನಗು ಕೇಳಿತು ಮೋಹನನಿಗೆ. ಆದರೆ ಈಗ ಅವನ ಕಿವಿಗೆ ಅದರ ಮಾಧುರ್ಯ ಮಾಧುರ್ಯವಾಗಿರಲಿಲ್ಲ. ಅದು ತನ್ನನ್ನು

ಹಾಸ್ಯಮಾಡಲು ಅವರು ಹೂಡಿದ ಸಂಚು ಎಂದು ಅವನ ಮನಸ್ಸು ಚುಚ್ಚು ತ್ತಿತ್ತು. ಅವರು ಬರದಿದ್ದರೆ ಎಷ್ಟೋ ಚೆನ್ನಾಗಿತ್ತು. ಅವರಿಗೆ ನನ್ನ ಚಿತ್ರ ಗಳನ್ನು ತೋರಿಸದಿದ್ದರೇ ಚೆನ್ನಾಗಿತ್ತು. ಎಂದು ಕೊಂಡ. ಆದರೆ ಆಗಲೇ ಕೆಲಸ ಮಿಂಚಿಹೋಗಿತ್ತು. ಅಲ್ಲಿಂದಲೇ ತನ್ನ ಕಲಾಧಿ ದೇವತೆ ಶಾರದೆಯನ್ನು ಮನಸ್ಸಿನ ಶಕ್ತಿಗಾಗಿ ಬೇಡಿಕೊಂಡ. ಕಣ್ಣಿನಲ್ಲಿ ಮತ್ತೊಮ್ಮೆ ದ್ವೇಷದ ಕೆಂಪು ಕಾಣಿಸಿಕೊಂಡಿತು.

"ಅಬ್ಬಾ ಈ ಚಿತ್ರ ನೋಡಿದರೇ ಹೆದರಿಕೆಯಾಗುತ್ತೆ" ಎಂದು ಹುಡುಗಿ ಹೆದರಿದ ದನಿಯಲ್ಲಂದುದು ಕೇಳಿಸಿತು.

"ಎಷ್ಟು ಭೀಕರವಾಗಿದೆ ಆ ಮುಖ – ರಾಹುವನ್ನು ಕತ್ತಲಿನ ಭೂತ ಮಾಡಿರುವರಲ್ಲವೇ?" ಎಂದಳು ಅಕ್ಕ.

ಅದು ರಾಹು ಚಂದ್ರನನ್ನು ನುಂಗುವ ಚಿತ್ರ. ರಾಹು ವಿಕಾರ ಭೂತ, ಹುಂ! ಹೇಗಿದ್ದರೇನು ಎಂದುಕೊಂಡ ಮೋಹನ್.

"ಈ ಚಿತ್ರ ನೋಡಿದೆಯೇನಮ್ಮ" ಎಂದು ತಾಯಿ ಅಂದುದು ಕೇಳಿಸಿತು.

ಯಾಕೆ ನೋಡಬೇಕು ಆ ಹುಡುಗಿ? ಯಾವ ಚಿತ್ರವನ್ನಾದರೂ ಯಾಕೆ ನೋಡಬೇಕು? ಮೊದಲು ಇಲ್ಲಿಂದ ಅವರನ್ನು ಓಡಿಸಬೇಕು ಎಂದು ಉದ್ರೇಕದಿಂದ ಬಾಗಿಲಿಗೆ ಕೈಯಿಕ್ಕಿದ. ಮರುನಿಮಿಷವೇ ಅನ್ನಿಸಿತು-ನಾನು ಹೋಗಬಾರದು. ನಾನು ಹೋದರೂ ಏನು ಪ್ರಯೋಜನವಿಲ್ಲ. ಎರಡು ಕ್ಷಣ ನೋಡುವರು. ಹೊರಟು ಹೋಗುವರು. ಎಂದು ಸಮಾಧಾನ ತಂದುಕೊಂಡ. ಆ ಕ್ಷಣದಲ್ಲಿ ಮನಸ್ಸಿನ ಆಸೆ ಮತ್ತೆ ಎಲೆಯೊಡೆಯುತ್ತಿತ್ತು. ಹೇಗೋ ಆದರೂ ಆಗಬಹುದೆಂಬ ಮಿಣುಕು ಆಸೆ ಹೃದಯದಲ್ಲಿ ಇನ್ನೂ ಆಗಾಗ ಬೆಳಕುಗೊಳ್ಳುತ್ತಿತ್ತು.

"ಈ ಚಿತ್ರದ ಹೆಸರು ಕಲೆಯ ಕಣ್ಣು" ಎಂದರು ತಾಯಿ. ಮೋಹನನಿಗೆ ತಕ್ಷಣ ನೆನಪಾಯಿತು. ಅದೇ ಅವನ ಚಿತ್ರ. ಅವನ ವಿಕಾರಾಕೃತಿಯ ಚಿತ್ರ. ಮುಂದೆ ತೆಳುವಾಗಿ ಸಿಡಿಮಿಡಿಗೊಂಡ ಮುಖದ ನೀಲಿಮೆಯ ಚಿತ್ರ ಅಲ್ಲಿಯೇ ಕಿಡಿಕಾರುವ ಕಣ್ಣು. ಅದರಲ್ಲಿ ಸೇರಿಕೊಂಡಂತೆ ಒಂದು ಭಂಗಾರದ ಬಣ್ಣದ ಹೃದಯ. ಆ ಹೃದಯದ ಮೂಲೆಯಲ್ಲಿ ಒಂದು ಕಡೆ ಹೂಗೊಂಚಲು. ಅಡಿಯಲ್ಲಿ ಹೆಡೆ ಎತ್ತಿದ ಹಾವು. ಮತ್ತೊಂದು ಮೂಲೆಯಲ್ಲಿ ಮುಳ್ಳಿನ

ಮಾಲೆಯ ನಡುವೆ ಒಂದು ಹೊಳೆಯುವ ಮಣಿ. ಅದು ಅವನ ಆದರ್ಶದ ಚಿತ್ರ. ತನ್ನ ಎಲ್ಲ ನೋವನ್ನೂ ಎರಕ ಹೊಯ್ದ ಚಿತ್ರ.

"ನೋಡು ಮಗು, ಕಲೆಯ ಕಣ್ಣು ಎಲ್ಲವನ್ನೂ ಕಾಣುತ್ತದೆ. ಹಾವು ಹೂವು, ಮುಳ್ಳು, ಮಣಿ ಎಲ್ಲವನ್ನೂ ಒಂದೇ ಸಮನಾಗಿ ನೋಡುತ್ತದೆ ಕಲೆಯ ಕಣ್ಣು ಮೇಲಿನ ಆಕೃತಿ ಚೆನ್ನಾಗಿಲ್ಲದಿರಬಹುದು. ಆದರೆ ಹೃದಯ ಭಂಗಾರದ್ದಾಗಿರಬಹುದು" ಎಂದರು ತಾಯಿ ಮೆಲ್ಲನೆ. ಅವರ ದನಿಯಲ್ಲಿ ಕೊಂಚ ಅಳುಕಿದ್ದುದು ಮೋಹನನಿಗೆ ಗೊತ್ತಾಯಿತು.

"ಸರಿ ತಾಯಿಯೇನೋ ತಾನು ಆ ಚಿತ್ರದ ವಿಚಾರ ಹೇಳಿದುದನ್ನು ತಪ್ಪದೆ ಸರಿಯಾಗಿ ಹೇಳುತ್ತಿದ್ದಾರೆ ಆ ಹುಡುಗಿ ಏನು ಉತ್ತರ ಕೊಡುವುದೋ," ಎಂದು ಕಳವಳದಿಂದ ಕಾತರಿಸಿದ ಮೋಹನ

"ಹೌದು ಹೂವಿನಂತಹ ಮುಖವಿದ್ದರೂ ಹಾವಿನಂತಹ ಹೃದಯವಿರಬಹುದು ಹೃದಯ ಚೆನ್ನಾಗಿರಬೇಕು. ಗುಣ ಒಳ್ಳೆಯದಾಗಿರಬೇಕು" ಎಂದಳು ಹುಡುಗಿಯ ಅಕ್ಕ

"ತಾಯಿಯ ಕಣ್ಣಿಗೆ ಮಕ್ಕಳು ಕಾಣುವಂತೆ ಪ್ರಪಂಚವನ್ನೆಲ್ಲವನ್ನೂ ನೋಡಬೇಕು. ಮಮತೆಯಿಂದ, ವಿಶ್ವಾಸದಿಂದ ನೋಡಿದರೆ ಒಳಗೆ ಮರೆಯಾಗಿರುವ ಗುಣ ಕಾಣುವುದೇ ಹೊರತು ಹೊರಗಿನ ಹುಳುಕಲ್ಲ" ಎಂದರು ತಾಯಿ ಕೊಂಚ ಗಂಭೀರವಾದ ದನಿಯಲ್ಲಿ

"ನಿಜ, ಒಂದು ಬಾರಿ ನಿಜವಾದ ವಿಶ್ವಾಸವನ್ನಿಟ್ಟರೆ ತಪ್ಪುಗಳು ವಿಕಾರಗಳು ಎಲ್ಲಾ ಮರೆತು ಹೋಗುತ್ತವೆ. ಬರಿಯ ಗುಣಗಳು ಮಾತ್ರವೇ ಕಾಣುತ್ತದೆ. ಅದೇ ನಿಜವಾದ ವಿಶ್ವಾಸ. ಮನುಷ್ಯನಿಗೆ ಬೇಕಾದುದೂ ಅದೇ, ಅಂತ ನಮ್ಮ ಪುಸ್ತಕಗಳಲ್ಲಿ ಓದಿದ್ದೇನೆ" ಎಂದಳು ಹುಡುಗಿ.

ಒಳಗೆ ನಿಂತು ಕೇಳುತ್ತಿದ್ದ ಮೋಹನನ ಹೃದಯದ ಆಸೆಯ ಬಳ್ಳಿ ಹೂಬಿಟ್ಟಿತು. ಇನ್ನು ಪರವಾಗಿಲ್ಲ. ಆ ಹುಡುಗಿಯೂ ಕಲಿತವಳು. ಆದರ್ಶವನ್ನೇ ನಂಬುವವಳು. ಹೊರರೂಪಕ್ಕೆ ಮರುಳಾಗುವವಳಲ್ಲ. ತಾನು ಹೇಗಿದ್ದರೂ ಸರಿ ತನ್ನನ್ನು ಒಲಿಯುವಳು. ತನ್ನ ಕಲೆಗಾಗಿ ತನ್ನನ್ನೊಪ್ಪುವಳೆಂದುಕೊಂಡು ಸಮಾಧಾನಮಾಡಿಕೊಂಡ. ಆ ಹುಡುಗಿಯ ಮಾತುಗಳು ಬರಿಯ ಪುಸ್ತಕಗಳಲ್ಲಿ ಕಲಿತ ಆದರ್ಶದ ಮಾತುಗಳಿರಬಹುದೆಂಬ ಸಂದೇಹ ಇಣುಕಲು ಅದನ್ನು ಅಲ್ಲಿಗೇ ಮೊಟಕುಮಾಡಿದ.

"ಇಂತಹ ಸುಂದರ ಚಿತ್ರ ರಚಿಸಿದವರ ಕೈ ಹಿಡಿಯಲು ನನ್ನ ತಂಗಿ ಪುಣ್ಯ ಮಾಡಿದ್ದಳು." ಎಂದಳು ಅಕ್ಕ. ಆ ಚಿತ್ರಗಳಂತೆಯೇ ಕಲಾವಿದ ಸುಂದರ ನೆನ್ನುವ ಅವರ ಭ್ರಮೆ ಮೋಹನನಿಗೆ ತಿಳಿಯಲಿಲ್ಲ. ಅವನಿಗೆ ಕೇಳಿಸಿದಷ್ಟು ಮಾತಿನಿಂದ ಹೃದಯದ ಹೂವು ಅರಳಿತು. "ಹಾಗಾದರೆ ನನ್ನ ಸೊಸೆಯಾಗಲು ಒಪ್ಪಿಗೆಯೇನಮ್ಮ?" ಎಂದರು ತಾಯಿ ಬಹಳ ಮೃದುವಾಗಿ.

ಮೋಹನನ ಹೃದಯ ಕುಣಿಯುತ್ತಿತ್ತು. ಕಲೆಯ ದೇವತೆ ಸೌಂದರ್ಯ ರೂಪದಲ್ಲಿ ತನಗೆ ಸಾಕ್ಷಾತ್ಕಾರಳಾಗಿ ಬಿಟ್ಟಳೆಂದು ಹಿಗ್ಗಿದ. ತನಗಿನ್ನೇನು ಕಲೆಯ ಸ್ವರ್ಗ ಸಿಕ್ಕಿತೆಂದು ಆನಂದಪಟ್ಟ.

"ನಿನ್ನ ಅತ್ತೆಗೆ ನಮಸ್ಕಾರಮಾಡು — ಆಶೀರ್ವಾದಮಾಡಿ" ಎಂದಳು ಹುಡುಗಿಯ ಅಕ್ಕ.

"ನೂರುಕಾಲ ಧೀರ್ಘಸುಮಂಗಲಿಯಾಗಿ ಮೋಹನನೊಂದಿಗೆ ಬಾಳು, ಮಗು" ಎಂದು ತಾಯಿ ಮಮತೆಯಿಂದ ಹರಸಿದರು.

ಮೋಹನನಿಗೆ ಸಂತೋಷ ತಡೆಯಲಾಗಲಿಲ್ಲ. ತನ್ನನ್ನು ತಾನೇ ಸಂಪೂರ್ಣವಾಗಿ ಮರೆತುಬಿಟ್ಟ. ಆಗಲೇ ಆ ಹುಡುಗಿ ತನ್ನ ಹೆಂಡತಿಯಾಗಿ ಹೋದಳೆನ್ನುವ ಹಿಗ್ಗು. ಈ ಅಪಾರ ಸುಖದಲ್ಲಿ ಆನಂದದಲ್ಲಿ ಎಚ್ಚರವೇ ಇಲ್ಲದಂತಾಗಿತ್ತು. ಅವನಿಗರಿವಿಲ್ಲದೆಯೇ ಬಾಗಿಲು ತೆರೆದು ಚಿತ್ರಶಾಲೆಗೆ ಬಂದುಬಿಟ್ಟ. ಅವನು ಬಂದು ನಿಲ್ಲುವ ವೇಳೆಗೂ ಹುಡುಗಿ ನಮಸ್ಕಾರಮಾಡಿ ಏಳುವ ವೇಳೆಗೂ ಸರಿಹೋಯಿತು. ಹುಡುಗಿಯ ಕಣ್ಣು ಬಿದ್ದುದು ಮೊದಲು ಅವನ ಮೇಲೆಯೇ. ಹುಡುಗಿ ಗಾಬರಿಯಿಂದ ಚೀರಿ ಅಕ್ಕನ ಕಡೆಗೆ ಹಿಮ್ಮೆಟ್ಟಿದಳು. ಮೋಹನನ ಬಣ್ಣದ ಸ್ವಪ್ನ ಚೂರುಚೂರಾಯಿತು. ಹೃದಯ ನುಚ್ಚುನೂರಾಯಿತು. ಕಣ್ಣು ಕತ್ತಲಾಯಿತು. ಹಾಗೆಯೇ ಕೆಳಕ್ಕೆ ಕುಸಿದ. ಒಂದರೆ ನಿಮಿಷದಲ್ಲೇ ಮೈಯುರಿತು ನೋಡಿದ. ಚಿತ್ರಶಾಲೆ ಬರಿದಾಗಿತ್ತು. ಎದುರಿಗೇ — ಹಾಲಾಹಲವನ್ನು ಬಾಯಿಗೆ ತೆಗೆದುಕೊಳ್ಳಲು ಸಿದ್ಧನಾದ ಪರಶಿವನ ಚಿತ್ರ. ತಲೆತಗ್ಗಿಸಿ ಮೌನವಾಗಿಯೇ ಕಣ್ಣೀರು ಸುರಿಸಿದ ಮೋಹನ. ಆ ಕಣ್ಣೀರಿನ ಅರ್ಥ ಅವನಿಗೇ ತಿಳಿಯದು. ತಿಳಿದಿದ್ದರೆ ಆ ಪರಶಿವನೊಬ್ಬನಿಗೇ!.



# ಆ ಕಣ್ಣೀರು

(ಶ್ರೀ ಮಿರ್ಜಿ ಅಣ್ಣಾರಾಯರು, ಧಾರವಾಡ)

ಮಧ್ಯಾಹ್ನದ ಆರು ತಾಸಿನ ಸಮಯ. ಬಿಸಿಲು ರಣಗುಟ್ಟುತ್ತಿತ್ತು. ಕಲ್ಲವ್ವನು ಉರುವಲ ಹೊರೆಯೊಂದನ್ನು ಹೊತ್ತು ತಂದು, ಗುಡಿಸಲಿನ ಮುಂದೆ ಒಗೆದು ಬೇವಿನ ಗಿಡದ ನೆರಳಿನಲ್ಲಿ ಕುಳಿತು ಉಸ್ಸೆಂದು ಉಸುರುಗರೆದಳು.

ಗುಡಿಸಲಿನೊಳಗಿಂದ ನಾಲ್ಕಾರು ಚಿಕ್ಕ ಮಕ್ಕಳು ಹೊರಗೆ ಹಾತೊರೆದು ಬಂದು, "ಅವ್ವಾ! ಅವ್ವಾ! ರೊಟ್ಟೀ ಕೊಡs; ಹಸಿವಿ ಆಗೇದ" ಎಂದು ಚೀರ ಹತ್ತಿದವು. ಏನೋ ಧೇನಿಸುತ್ತ ಕಲ್ಲವ್ವ ಕೈಯೂರಿ ಎದ್ದಳು. ಅವಳ ಮುಖ ದಿಂದ ನಿಟ್ಟುಸಿರೊಂದು ಅವಳಿಗೆ ಗೊತ್ತಿಲ್ಲದೆ ಹೊರಟು ಆದೇ ಬೀಸುತ್ತಿರುವ ಬಿಸಿಗಾಳಿಯಲ್ಲಿ ಬೆರೆದು ಹೋಯಿತು. ಮೆಲ್ಲನೆ ಒಳಗೆ ಹೋಗಿ ನೆಲುವಿನ ಮೇಲಿನ ಬುಟ್ಟಿಯನ್ನಿಳಿಸಿ ನೋಡಿದಳು. ಎರಡು ದಿನಗಳ ಹಿಂದಿನ ದುಡ್ಡಿನಳತೆಯ ನಾಲ್ಕಾರು ರೊಟ್ಟಿಯ ತುಣುಕುಗಳು ಬಿದ್ದಿದ್ದವು. ತಂದು ಮಕ್ಕಳ ಕೈಯಲ್ಲಿ ಒಂದೊಂದು ತುಣುಕು ಕೊಟ್ಟಳು. ಆ ಹುಡುಗರು ಅಂಥ ತುಣುಕುಗಳನ್ನು ಆನಂದದಿಂದ ಕಚ್ಚಿ ಕಚ್ಚಿ ತಿನ್ನಹತ್ತಿದವು.

ಅಷ್ಟರಲ್ಲಿ ಬಸಪ್ಪನು ಕೆಲಸದಿಂದ ಬಂದ.

"ಬರಲಾಕ ಇಷ್ಟ್ಯಾಕ ವೇಳೆ ಮಾಡ್ದಿ?"

ಕಲ್ಲವ್ವ ಜಗ್ಗಿದ ದನಿಯಿಂದ ಕೇಳಿದಳು.

"ಹಾಂಗs ಗೌಡರ ಮನೀಗೆ ಹೋದ್ನಿ; ಕೂಲಿಯ ನಾಲ್ಕಾಣೆ ತಗೊಂಡು ಬರಬೇಕಂತ."

"ಹುಡ್ಗುರ ಹಸ್ತಿದಾರ ಮನ್ಯಾಗ . . . . . ಜೋಳಾನ ಹಾಕ ಅನಬಾರದಿತ್ತ?"

ನಡುವೆಯೇ ಮಾತು ನೇರಿಸಿದಳು ಕಲ್ಲವ್ವ.

"ಹೂಂ! ಜೋಳಾ ಹಾಕ್ತಾರ ಇಂಥಾ ಧಾರಣಿಯೊಳಗ. ಈ ನಾಲ್ಕಾಣೆ ಕೊಡಬೇಕಾದ್ರ 'ಜಳಕಾ ಮಾಡಿದ್ನಿ—ಪೆಟ್ಗಿ ಮುಟ್ಟುವ ಹಂಗಿಲ್ಲ.

ಊಟಾ ಮಾಡಿ ಕೊಡತೇನ ಕೂಡ' ಅಂತಾ ತಾಸಾನು ತಾಸ ಕೂಡಿಸಿದ್ರು"
ಸ್ವಲ್ಪ ಕೆರಳಿದ ಕಂಠದಿಂದ ನುಡಿದ ಬಸಪ್ಪ.

"ಇರ್ಲಿ; ಅವರ ಹೊಟ್ಟಿ ತಣ್ಣಗಾಗಲಿ! ಈ ಹೊರಿಯನ್ನರ ಯಾರ ತಗೋತಾರೇನ ಕೇಳ್ರಿ—ಅವ ಇವ ಕೂಡಿಸಿ ಸೇರ ನೆಜ್ಜಿನಾರ ಬರ್ತಾವೇನ ನೋಡಾಕ ಲಗೂನ." ಎಂದು ಹೇಳಿ ಮಣ್ಣಿನ ಕೊಡ ತಕ್ಕೊಂಡು ನೀರಿಗೆ ಹೊರಟಳು ಕಲ್ಲವ್ವ.

"ನಿನ್ನಿಂದ ತಿನ್ನಾಕ ತುತ್ತ ರೊಟ್ಟಿಲ್ಲ, ಬರಿ ಹೊಟ್ಟಿಂದ ಹರಿವತ್ತಿಂದೂ ದುಡಿದ ದುಡಿದ ಕಣ್ಣಳ್ಳಿ ಬಿಟ್ಟದ. ಬರೀ ಸಜ್ಜೀಯಿಂದ ಏನಾಗ್ತದ, ಹುಡುಗ ಓಗೆ ನಮುಗ? ಅಚ್ಚೇರ ಬಹಿಮುಕಾಳ ಹಿಂಡೀ ಉಳಿದ ಸಜ್ಜೀ ತರತೇನ"

ಬಸಪ್ಪ ಹೊರೆ ನೆಗೆಯುತ್ತಾ ಒದರಿ ಹೇಳಿದ.

"ಏನಾರ ಮಾಡ್ಕೊಂಬಾ ಲಗೂನ."

x x x x

"ಹತ್ತಿ ಕಟ್ಗಿ ಬೇಕ್ಯಾಗ್ರಿ?"

ಒಂದು ದೊಡ್ಡ ಬಾಗಿಲ ಮುಂದೆ ನಿಂತು ಕೇಳಿದ ಬಸಪ್ಪ.

"ಹೊತ್ತಿಲ್ದ ಹೊತ್ತಿನೊಳಗ ಈಗ್ಯಾಕೋ ಬನ್ಯಾ?"

ಉಂಡು ದಿಂಬಿಗೊರಗಿ ವೀಳೆಯನ್ನು ಮೆಲ್ಲುತ್ತ ಕುಳಿತ ರಾಯರ ಪ್ರಶ್ನೆಯಿದು!

"ನಮ್ಮಾಕಿ ಅಡವಿಗೆ ಹೋಗಿ ತಂದಳ್ರಿ ಈಗ . . . .". ರಾಯರು ಉಗುಳಲೆಂದು ಹೊರಗೆ ಬಂದು, ಹೊರೆಯನ್ನು ನಿರೀಕ್ಷಿಸಿ,—

"ಎಲ್ಲಿಂದ ತಂದಳೋ ಇಂಥಾ ಹೊತ್ತಿನಾಗ? ಕುಲಕರ್ಣೇರ ಊರ ಬಡ್ಡಿ ಹೊಲದಿಂದ ತಂದಳೇನ ಮತ್ತ!" ಎಂದು ಗದರಿಸಿದರು

"ಇರಲಿಕ್ಕಿಲ್ರಿಯಪ್ಪಾ . . . ಹರಿವತ್ತ ಹೋಗಿದ್ಳು, ಇನ್ನೂ ಹೊತ್ತಿನ ಗೊಂಡಿ ಒಡಿಯೋದಕ್ಕಿಂತ ಮೊದಲ. ದೂರ ಎಲ್ಲಿಂದ್ರ ಕಿತ್ತಿ ತಂದಿರಬೇಕ. ಹೊಟ್ಟಿಗೆ ನಿನ್ನಿಂದೂ ಏನೂ ಇಲ್ಲ; ಇದನ ಮಾರಿ ಏನ್ರ ಇಟ್ಟಿ ತಿನ್ನಾಕ ಆದೀ ತಂತ ತಂದಾಳ್ರಿ . . . "

"ಅದೆಲ್ಲಾ ಹೌದೋ. ಕುಲಕರ್ಣೇರ ಹೊಲದಾಗ ಇಂದೇ ಹತ್ತಿ ಕಟ್ಗಿ ಕಿತ್ತಿದಾರಂತ, ನನಗೊಂದ ಹತ್ತ ಹೊರಿ ಬೇಕಾದ್ರ ಒಯ್ದು ಒಗಿಸಿಕೊಳ್ರಿ

ಅಂತ ಹೇಳಿದ್ರು. ಅದಕ್ಕ ಅಂತೇನಿ." ಸ್ವಲ್ಪ ಯೋಚಿಸಿ, "ಹೂಂ! ಏನ ಹೇಳಿದಿ ಹೊರಿಗಿ?"

"ಯಪ್ಪ ನೀವs ನೋಡಿ ಏನಾದ್ರೂ ಬೇಡ್ರಲ್ಲ!"

"ನನಗೇನ ಈಗ ಉರೋಲ್ಲ ಜರೂರಿ ಇಲ್ಲ; ಕುಲಕರ್ಣೇರ ಒಯ್ಯಿರಿ ಅಂತ ಹೇಳಿದಾರ ಅನಲಿಲ್ಲ ಈಗ....? ಆದರ ಮನೆ ಮುಟ್ಟ ಬಂದೀದಿ ಅಂದ ಮ್ಯಾಲ ಮೂರ ಆಣೆ ಕೊಡತೇನ ಒಗೆ."

"ಅಲ್ರಿ, ದೊಡ್ಡ ಹೊರೆ ಐತಿ. ನಾಲ್ಕ ಆಣೆಯನ್ನರ ಮಾಡ್ರಿ."

ರಾಯರು ಹಣೆ ಏರಿಸಿ ಏನೋ ಸ್ವಲ್ಪ ವಿಚಾರಿಸಿ,—"ಹೂಂ! ಇರ್ಲಿ ಒಗೆ ಹೋಗ. ನೀನs ಒಂದ ಆಣೆ ತಿಂದ್ರೂ ತಿನ್ನ ನಮ್ಮಾನs ಇದ್ದಿದಿ...."

"ಹೌದ್ರಿಯಪ್ಪ. ಬಡವನ ಹೊಟ್ಟಿಗೆ ಹಾಕಿದ್ರಿ" ಉಪಕೃತ ಸ್ವರದಲ್ಲಿ ನುಡಿದ ಬಸಪ್ಪ.

ರಾಯರು ಒಳಗೆ ಹೋಗಿ ಕೆಲ ಹೊತ್ತಿನ ಮೇಲೆ ರೊಕ್ಕ ತಕ್ಕೊಂಡು ಬಂದು,—

"ಏನೋ ಬಸ್ಯಾ, ಕುಲಕರ್ಣೇರ ಹೊಲದಿಂದ ಹೆತ್ತೆಂಟ ಹೊರಿ ಹತ್ತಿ ಕಟ್ಗಿ ತಂದ ಒಗಿಯುವಿ ಏನೋ? ಚಹಾಕ್ಕ ನಾಲ್ಕ ದುಡ್ಡ ಕೊಡತೇನಿ" ಸಾವಿರ ರೂಪಾಯಿ ದಾನ ಕೊಡುವವರ ರೀತಿಯಿಂದ ವಾಗ್ದಾನ ಮಾಡಿದರು, ರಾಯರು.

"ಎಲ್ಲಿ ಚಹಾರಿಯಣ್ಣಾ? ಹೊಟ್ಟೆಗೇನಾದ್ರ ಕಾಳಗೀಳ ಹಾಕ್ರಿ, ಸಂಜಿನಾಗ ನಾನೂ ನಮ್ಮಾಕಿನೂ ಬಂದ ತಂದ ಒಗಿತೇವರಿ...."

"ಕಾಳ ಎಲ್ಲಿಂದ ತರಲ್ಯೋ? ರೊಕ್ಕಾನ ಬೇಕಾದರ ಎರಡ ದುಡ್ಡ ಹೆಚ್ಚ ಕೊಡತೇನಂತ.... ಈ ರೊಕ್ಕ ತಗೋ". ಎಂದು ಮುಟ್ಟಿಗೆಯೊಳಗಿನ ರೊಕ್ಕವನ್ನು ಬಸಪ್ಪನ ಕೈಯಲ್ಲಿ ಮೇಲಿಂದ ಒಗೆದರು. ಬಸಪ್ಪನು ರೊಕ್ಕ ತಕ್ಕೊಂಡು ನೋಡಿ,—

"ಧಣೇರ.... ಮೂರೇ ಆಣೆ ಅವ ಅಲ್ರಿ?"

ಅಂಜುತ್ತ ಅಂಜುತ್ತ ಹೀಗೆ ಕೇಳಿದ.

"ಹಾದೋ ನನಗೂ ಗೊತ್ತದ, ಮೂರ ಆಣೆ ಅವ ಅನ್ನೊಡು....

ಚಿಲ್ಲರೆ ಇಲ್ಲ ಈಗ. ಸಂಜಿಗೆ ಹೊರೆ ಒಗೆಯಲಿಕ್ಕೆ ಬರ್ತೀ ಅಲ್ಲ? ಆಗs ಇದೂ ಒಂದಾಣೆ ಕೊಡತೇನಂತ".

ಬಸಪ್ಪನನ್ನು ಮುಂದಿನ ಕೆಲಸದ ಬಲೆಯಲ್ಲಿ ಹಿಡಿಯುವ ಉದ್ದೇಶದಿಂದ ಈ ಚಿಲ್ಲರೆಯ ಪುರಾಣವನ್ನು ಮುಂದಿಟ್ಟರು, ರಾಯರು

"ಇಲ್ರಿ! ನಿನ್ನಿಂದೂ ಹೊಟ್ಟೆಗೆ ಇಲ್ಲ. ಅದೂ ಒಂದ ಆಣೆ ಕೊಟ್ರ ಸೇರ ನೆಷ್ಟಿನಾರ ಕೊಂಡ ಕೊಂಡ ಹೋಗತೇನ್ರಿ".

ಎಂದು ಬಸಪ್ಪ ಅಂಗಲಾಚಬೇಕಾಯಿತು. "ಅದೇ ಮೂರ ಆಣೆ ಸಿಕ್ಕದ್ದ ನಿನ್ನ ಪುಣ್ಯಾ ಹೋಗ—ಈಗ ಚಿಲ್ಲರದ ತಾಪತ್ರಯ ಎಷ್ಟು ಅದ ಗೊತ್ತಿಲ್ಲ ನಿನಗ?" ಎಂದು ಕೇಳುತ್ತ ಒಳಗೆ ಹೋಗಿಬಿಟ್ಟರು, ರಾಯರು. ಬಸಪ್ಪನು ಸ್ವಲ್ಪ ಹೊತ್ತು ಅಲ್ಲೇ ನಿಂತು ರಾಯರು ರೊಕ್ಕ ತಕ್ಕೊಂಡು ಬರುವರೇನೋ ಎಂದು ದಾರೀ ಕಾಯ್ದನು. ಬಹಳ ಹೊತ್ತಾದರೂ ರಾಯರು ಬರದಿರಲು ಅಂಜುತ್ತಂಜುತ್ತ ಬಾಗಿಲಲ್ಲಿ ಇಣಿಕಿನೋಡಿ,—

"ಧಣೇರs"

ಎಂದು ಕರೆದ ಕರುಣಸ್ವರದಿಂದ

"ಒಗೆ ನಮ್ಮ ರೊಕ್ಕ, ತಗೊಂಡ ಹೋಗ ನಿನ್ನ ಹೊರೆ! ಈಗೇನ ಉರುವಲ ಬೇಕಾದಷ್ಟು ಸಿಗತಾವ" ಎಂದು ವರ್ತಮಾನ ಪತ್ರದಲ್ಲಿ ದೃಷ್ಟಿ ಇಟ್ಟೇ ರಾಯರು ಗುಡುಗಿದರು

x x x x

ಬಸಪ್ಪನ ಕೈಯಲ್ಲಿ ಏಳಾಣೆ. ಒಂದೆರಡು ವಾರಗಳಲ್ಲಿ ಅವನ ಹತ್ತರ ಇಷ್ಟು ಹಣವೆಂದೂ ಆಗಿರಲಿಲ್ಲ ಇಂದೇನೋ ಸುದೈವ. ಹೊಟ್ಟೆತುಂಬ—ಅಲ್ಲ—ಹೊಟ್ಟೆಗೆ ಹತ್ತುವಷ್ಟು ತಿನ್ನಲು ಸಿಕ್ಕುವದೆಂದು ಸ್ವಲ್ಪ ಅರಳಿದ ಮುಖದಿಂದಲೇ ಅಂಗಡಿಯಲ್ಲಿ.

"ಅಚ್ಛೇರ ಹಿಂಡಿ ಕೊಡ್ರಿ!"

ಎಂದು ಕೇಳಿದ. ಅಂಗಡಿಕಾರ ಯಾರೊಡನೆಯೋ ಹರಟುವದರಲ್ಲಿ ಮೈ ಮರೆತಿದ್ದ. ಬಸಪ್ಪ ಬೇಡಿದುದು ಕೇಳಿಸಲಿಲ್ಲವೇನೋ! ಹಾಗೇ ಮಾತು ಮುಂದೊರಿಸಿದ. ಹತ್ತು ನಿಮಿಷಗಳಷ್ಟು ಕಳೆದಿರಬೇಕು. ಬಸಪ್ಪ ಎರಡನೆಯ ಅಂಗಡಿಗೆ ಹೋಗಬೇಕೆಂದು ಒಮ್ಮೆ ವಿಚಾರಿಸಿದ. ಆದರೆ ಆ ಹಳ್ಳಿಯಲ್ಲಿ ಆ

ಅಂಗಡಿಯುನ್ನುಳಿದರೆ ಬೇರೆ ಕಡೆಗೆ ನೆಲಗಡಲೆಯ ಹಿಂಡಿ ಸಿಕ್ಕುವಂತಿರಲಿಲ್ಲ. ಬರೇ ಸಜ್ಜೆಯುನ್ನೊಯ್ದರೆ ಹೊಟ್ಟೆಗೆ ಸಾಲುವಂತಿಲ್ಲ. ಏನು ಮಾಡಬೇಕೆಂಬ ಚಿಂತೆಯಲ್ಲಿ ಸ್ವಲ್ಪ ಕಾಲ ಕಳೆಯುವದರಲ್ಲಿ ಯಾರೋ ಒಬ್ಬರು ಅಂಗಡಿಗೆ ಬಂದರು.

"ಉತ್ತುತ್ತಿ ಹ್ಯಾಗ ಕೊಡುತೀರಿ?"

ಬಂದವರು ಕೇಳಿದರು. ಅಂಗಡಿಕಾರನು ಕೂಡಲೆ ಬೆಚ್ಚಿ ಬಿದ್ದವನಂತೆ ಎದ್ದು,—

"ಈಗ್ಯಾಕರೀ ಉತ್ತುತ್ತಿ ಗೌಡರ? ಒಂದೂ ಕಾಲು ರೂಪಾಯಿಗೆ ಸೇರು."

ಎಂದು ಹೇಳಿದ.

"ಎರಡು ಸೇರ ಕೊಳ್ತೇನಿ, ಒಂದು ರೂಪಾಯಿ ಎರಡಾಣೆ ಮಾಡಿ ಕೊಟ್ಟು ಬಿಡೊ?"

ಅಂಗಡಿಕಾರನು ಆರಿಸಿ ತೂಕ ಹಾಕುತ್ತ,—

"ಯಾಕರೀ, ಖಾರಿಕ ಬಹಳ ಒಯ್ಯುತ್ತೀರಿ?" ಎಂದು ಕೇಳಿದ.

"ಏನೋ ನಿನ್ನೆ ತಿರುಗುತ್ತ ಸ್ಟೇಶನ್ನಿಗೆ ಹೋಗಿದ್ದೆ. ಸಹಜ ತೂಕ ಮಾಡಿಸಿಕೊಂಡೆ. ಮೊದಲಿನಕ್ಕಿಂತ ಎರಡು ಪೌಂಡು ಕಡಿಮೆಯಾಯ್ತು! ಒಂದು ತಿಂಗಳಲ್ಲಿ ಮೊದಲಿನಷ್ಟು ತೂಕ ಏರಿಸೋದು ಎಂದು ನಿಶ್ಚಯಿಸಿದ್ದೇನೆ."

ಎಂದು ಮಾತು ಮುಗಿಸಿ, ಬಿಂಕದಲ್ಲಿಯೇ ಉತ್ತುತ್ತಿ ತಕ್ಕೊಂಡು ಹೋದರು. ಅಂಗಡಿಕಾರನು ಏನೂ ಕೇಳದೆ ಕೀರ್ದಿಯಲ್ಲಿ ಲೆಕ್ಕ ಬರೆದಿಟ್ಟು ಕೊಂಡ. ಇದೇ ಸಂಧಿಯೆಂದು ಅರಿತು,—

"ಅಚ್ಛೇರ ಹಿಂಡಿ ಕೊಡ್ರಿ!"

ಎಂದು ಬಸಪ್ಪ ದೈನ್ಯದಿಂದ ಮತ್ತೊಮ್ಮೆ ಕೇಳಿದ.

"ಹೂಂ!"

ಎಂದು ಅಂಗಡಿಕಾರನು ಆಲಸ್ಯದಿಂದ ಎದ್ದು ಹಿಂಡಿಯುನ್ನು ತೂಗಿ ತಂದು,—

"ತಗೋ!" ಎಂದ.

ಬಸಪ್ಪ ಉಟ್ಟದೋತರ ಉಡಿಯಲ್ಲಿ ತಕ್ಕೊಂಡು ಚವಲಿಯೊಂದನ್ನು ಕೊಟ್ಟ.

"ನಿನಗೆ ಕೊಡಲಿಕ್ಕೆ ಎರಡ ದುಡ್ಡ ಇಲ್ಲಲೋ? ಮತ್ತೇನಾದರ ತಗೊ!"

ಪೆಟ್ಟಿಗೆಯಲ್ಲಿ ನೋಡದೆ ಅಂಗಡಿಕಾರ ಹೇಳಿದ "ಸಜ್ಜಿ ಬೇಕರಿ"

"ಸಜ್ಜಿ ನಮ್ಮಲ್ಲಿಲ್ಲ. ಬಿಳೀ ಗೋಧಿ ಅವ, ತಗೋ ಬೇಕಾದರ, ಸಜ್ಜಿ ಧಾರಣೆ ಗೋಧಿ ಧಾರಣೆ ಒಂದೇ ಅದ. ಚಪಾತಿ ಮಾಡಿಸಿ ಹೊಡಿಯಲ್ಲ!"

"ಒಲ್ಲಿರಿ! ಹಿಂಡೀ ಹಾಕಿ ಬೀಸಲಿಕ್ಕೆ ಬರೂದಿಲ್ಲ. ಈ ಆಣೆ ತಗೊಳ್ಳಿರಿ. ಆ ಅಂಗಡೀಲಿ ಸಜ್ಜಿ ತಗೊಂಡ ಬರತಾ ಎರಡ ದುಡ್ಡ ಕೊಟ್ಟ ಹೋಗ್ತೇನಿ" ಎಂದು ಒಂದಾಣೆ ಕೊಟ್ಟ.

"ಇಲ್ಲದ ಒಂದ ಮಾಡಲಿಕ್ಕ ಹಚ್ಚತಿ, ಬಿಸಲ ಹೊತ್ತಿನಾಗ. ಸುರಪ ಅಲ್ಲೇ ಕಟ್ಟೀ ಮ್ಯಾಲ, ಬರುವಾಗ ಎರಡ ದುಡ್ಡ ಕೊಟ್ಟ ಒಯ್ಯಂತ."

ಕೆರಳಿ ಕೈಯಲ್ಲಿಯ ಚವಲಿಯನ್ನು ಒಗೆದ ಅಂಗಡಿಕಾರ. ಬಸಪ್ಪ ಸಜ್ಜಿ ಕೊಳ್ಳಲೆಂದು ಮತ್ತೊಂದು ಅಂಗಡಿಗೆ ಹೋದ. ಅಲ್ಲಿಯೂ ಚಿಲ್ಲರೆ ಇಲ್ಲವೆಂದು ಹೇಳಿದ್ದರಿಂದ ಉಪಾಯುಗಾಣದೆ, ಆರಾಣೆಯ ಎಲ್ಲ ಸಜ್ಜಿಯನ್ನು ಕೊಂಡು ಹಿಂತಿರುಗಿ ಮೊದಲಿನ ಅಂಗಡಿಗೆ ಬಂದು,—

"ಅಲ್ಲೂ ಇಲ್ರಿ! ಎರಡ ದುಡ್ಡಿನ ಹಿಂಡೀನ ತಕ್ಕೊಳ್ರಿ!"

ಎಂದ ನಮ್ರ ಸ್ವರದಿಂದ.

"ಹೂಂ! ಅದಕ್ಕsಅನಲಿಲ್ಲೇನ ಉಪದ್ರವ ಕೊಡುತೀ ಅಂತ."

ಎಂದು ಅರ್ಧಕ್ಕಿಂತ ಹೆಚ್ಚಿಗೇನೇ ಹಿಂಡಿಯನ್ನು ತಕ್ಕೊಂಡು ಒಳಗೆ ಹೋದ ಅಂಗಡಿಕಾರ.

"ಹೀಗ್ಯಾಕ್ರಿ, ಅಷ್ಟ್ಯಾಕ ತಗೀತೇರಿ?"

ಎಂಬ ಹಸಿದ ಹೊಟ್ಟೆಯುವನ ಮರುಕ ಕೇಳಲಿಲ್ಲವೇನೋ ಆವನಿಗೆ!

ಹೊತ್ತು ಹೊರಳಿತು. ಮನೆಯಲ್ಲಿ ಮಕ್ಕಳು ಹಸಿದು ಕಳವಳಿಸುತ್ತಿರಬೇಕು. ಇದನ್ನು ಬೀಸಿ ಹೊಟ್ಟೆಗೆ ಕೂಳುಗಾಣ ಬೇಕಾದರೆ ಇನ್ನೂ ಒಂದು ತಾಸು ಬೇಕು. ಎಂದು ಲಗುಬಗೆಯಿಂದ ಹಿಂಡಿಯನ್ನು ಉಡಿಯಲ್ಲಿ ಹಾಕಿ

ಕೊಂಡು, ಬಸಪ್ಪ ಮನೆಯ ಹಾದೀ ಹಿಡಿದ. ಮನೆಯ ಸಮೀಪಕ್ಕೆ ಬರುವಷ್ಟರಲ್ಲಿ,—

“ಕಳ್ಳಸೂ . . . ಮಗ ಎಲ್ಲಿ ಹೋದಾ? ಇಷ್ಟ ಲಗೂನೆ ಮಾರಲಿಕ್ಕೆ ಕಳಿಸಿ ಬಿಟ್ಟಿದಿ? ಯಾರ ಕಿತ್ತಿ ತಾ ಅಂದಿದ್ರೂ ನಮ್ಮ ಹೊಲದಿಂದ. . . . ಹುಚ್ಚ ಭೋನ . . . ಈಗೇನ ಮೊದಲಿನಂಗ ಅಗ್ಗ ಧಾರಣಿ ಅದ?”

ಎಂದು ಯಾವನೋ ಒಬ್ಬ ರೈತನು ಗುಡಿಸಲಿನ ಮುಂದೆ ನಿಂತು, ಬೈಗಳ ಮಳೆಗರೆಯುವದನ್ನು ಕೇಳಿ ಬಸಪ್ಪನ ಕೈ ಕಾಲೇ ತಣ್ಣಗಾದುವು. ಏಳಲಾರದ ಕಾಲುಗಳನ್ನು ಕಿತ್ತಿಟ್ಟು ಮೆಲ್ಲನೆ ಗುಡಿಸಲಿನ ಕಡೆಗೆ ಬಂದ. ಬಸಪ್ಪನನ್ನು ಕಂಡೊಡನೆಯೇ ರೈತನ ಕೋಪಾಗ್ನಿಗೆ ಸಮಿದೆ ಸಿಕ್ಕಂತಾಯಿತು.

“ಎಷ್ಟಕ್ಕ ಮಾರ್ದಿ ಮಗನ ಹೊರಿ?”

ಎಂದು ಗದ್ದರಿಸುತ್ತ ಮೈಮೇಲೆ ಏರಿಹೋಗಿ ಧೋತರ ಹಿಡಿದು ಎಳೆದ. ಬಸಪ್ಪನು ಉಟ್ಟುಕೊಂಡ ಧೋತರವು ತೀರ ಹಳೆಯದೂ ಕೊಳಕೂ ಆದುದರಿಂದ ಕೂಡಲೆ ಹರಿದು ಕಾಳುಗಳೆಲ್ಲ ನಲಕ್ಕೆ ಬಿದ್ದುವು. ಬೈಗುಳಿನಿಂದಲೇ ಬೆಂದು ಬೆಂಡಾದ ಬಸಪ್ಪನ ಮುಖವು ಧೋತರ ಹರಿಯಿತೆಂಬ ಚಿಂತೆಯಿಂದ ಸುಟ್ಟ ಸುಣ್ಣದ ಹರಳಿನಂತಾಯಿತು. ಬಸಪ್ಪನ ನಡುವಿಗೆ ರೊಕ್ಕವಿರಬೇಕು, ಅವನ್ನು ತಕ್ಕೊಳ್ಳಬೇಕೆಂಬ ರೈತನ ಬಯಕೆಯು ಸಫಲವಾಗದ್ದರಿಂದ ಅವನ ಕಣ್ಣುಗಳು ಕೆಂಪಗೆ ಕೆಂಡದಂತಾದುವು. ಗಿಡದ ಮರೆಯಲ್ಲಿ ಅಡಗಿನಿಂತ ಚಿಕ್ಕ ಹುಡುಗರು—ಬಸಪ್ಪನ ಮಕ್ಕಳು—ಹಸಿವೆಗಾಗಿ ಹೆದರಿಕೆಯನ್ನು ಬಿಟ್ಟು ಓಡಿಬಂದು ನೆಲದ ಮೇಲೆ ಬಿದ್ದ ಹಿಂಡಿಯ ಚೂರುಗಳನ್ನು ಆರಿಸಿ ತಿನ್ನ ಹತ್ತಿದವು. ನೆಜ್ಜೆಯೆಲ್ಲ ಮಣ್ಣುಪಾಲಾದವೆಂದು ಕಲ್ಲವ್ವನು ಗುಡಿಸಲಿನೊಳಗಿಂದ ಹರಕು ಮೊರವೊಂದನ್ನು ತಂದು ಬಳಿದು ತುಂಬುತ್ತಿದ್ದಳು. ಆಗ ತಮ್ಮ ಅಸಹಾಯ ಸ್ಥಿತಿಯನ್ನು ನೆನೆದು ಅವಳ ಕಣ್ಣು ಕೊಣಿಕೆಯಲ್ಲಿಂದ ಎರಡು ದೊಡ್ಡ ಹನಿಗಳು ಗಲ್ಲದ ಮೇಲೆ ಉರುಳಿದವು. ಅದೇ ಮುಳುಗುತ್ತಿರುವ ಸೂರ್ಯನ ಮಂದ ಪ್ರಕಾಶದಲ್ಲಿ ಬಸಪ್ಪನಿಗೆ ಆ ಕಣ್ಣೀರು ರಕ್ತದ ಹನಿಗಳಂತೆ ಕಂಡವು.

# ಗುರಿ

(ಶ್ರೀ ಪಿ. ವೆಂಕೋಬಾಚಾರ್ಯ, ಬಿ. ಎ , ಬಿ. ಟಿ., ಹುಬ್ಬಳ್ಳಿ.)

ನನಗಂಥ ಅನುಕೂಲವಾದ ಅವಕಾಶವೊದಗಿದುದು ಆಶ್ಚರ್ಯವೆನಿಸಿತು. ಇಂಥ ಅದೃಷ್ಟ ನನ್ನದೆಂದು ನೆನೆಯಲಿಲ್ಲ. ಈ ಅವಕಾಶ ನನ್ನ ಜೀವನದ ಕ್ರಮವನ್ನೇ ಬದಲಾಯಿಸಿತು. ಹೊಸ ಒಟ್ಟೆಬರೆ ಧರಿಸಿ ಅಲಂಕಾರ ಮಾಡಿಕೊಳ್ಳುವುದರಲ್ಲಿ ಆಸಕ್ತಿ ಹೆಚ್ಚಾಯಿತು. ನನ್ನಲ್ಲಿ ಹೊಸ ಚೈತನ್ಯ ಬಂದಂತೆನಿಸಿತು; ಹೆಚ್ಚಿನ ಉತ್ಸಾಹ ಕಂಡುಬಂತು. ಸಮಯ ಬಹುವೇಗ ಓಡುವಂತೆ ಭಾಸವಾಯಿತು.

ವಯಸ್ಸಾದ ಹುಡುಗಿಗೆ ಓದುಹೇಳುವ ಯೋಗ ನನಗೊದಗಿದುದು ಅದೇ ಮೊದಲನೆಯ ಸಲ. ವಿದ್ಯೆ ಕಲಿಸುವುದು ನನಗೆ ಇಷ್ಟದ ಕೆಲಸವಾದರೂ, ಓರ್ವ ಯುವತಿಗೆ ಹೇಳುವುದೆಂದರೆ ಮೊದಲಿಗೇಕೋ ಅಧೈರ್ಯ ನನ್ನನ್ನಾವರಿಸಿತು. ಆದರೆ ಉತ್ಸಾಹ ಮಾತ್ರ ಕಡಮೆಯಾಗಲಿಲ್ಲ.

ನಿಶ್ಚಿತ ಮನಸ್ಸಿನಿಂದ ದೇಸಾಯರ ಮನೆಯನ್ನು ಪ್ರವೇಶಿಸಿದೆ. ಅವರ ಮನೆಯ ಮುಂದಿನ ವಿಶಾಲವಾದ ತೋಟ, ಭವ್ಯವಾದ ಮಂದಿರ ನೋಡಲು ಬಹುರಮ್ಯವಾಗಿ ಕಂಡುಬಂದವು. ಅವರ ದೊಡ್ಡದಾದ ಮಹಲಿನಲ್ಲಿ ನಾನು ಕಾಲಿಟ್ಟಕೂಡಲೇ ನನ್ನನ್ನು ನಾನೇ ಮರೆತುಬಿಡುವಂತಾಯಿತು. ಬೆಲೆಬಾಳುವ ಸೋಫಾಗಳಿಂದಲೂ, ವಿದೇಶದಿಂದ ತರಿಸಿದ ಉತ್ತಮ ನಿಲುವು ಕನ್ನಡಿಗಳಿಂದಲೂ, ದೇಶದ ನಾಯಕರ ಚಿತ್ರಗಳಿಂದಲೂ ಅಲಂಕೃತವಾದ ಈ ಪಡಸಾಲೆ ನೋಡಲು ಬಹು ಮನರಂಜಕವಾಗಿತ್ತು. ಅಲ್ಲಿಯ ಸೋಫಾಗಳೊಂದರ ಮೇಲೆ ಕುಳಿತುಕೊಂಡು ಒಳಗಡೆಯ ಹೆಬ್ಬಾಗಿಲಿನ ಕಡೆ ನೋಡಿದೆ. ನನ್ನಿಂದ ಓದುಕಲಿಯಬೇಕೆಂದಿರುವ ಆ ಸುಂದರ ಮೂರ್ತಿಯ ಆಗಮನವನ್ನು ನಿರೀಕ್ಷಿಸುತ್ತ ಕುಳಿತುಬಿಟ್ಟೆ. ಅವಳು ಬರುವ ಹಾದಿಯನ್ನು ಬಹು ಆಶೆಯಿಂದ ಕಾಯತೊಡಗಿದೆ. ಆ ಯುವತಿ ಬಂದು ಕುಳಿತರೆ ಯಾವ ರೀತಿ ಮಾತನಾಡಬೇಕೆಂಬುವುದನ್ನು ಮನದಲ್ಲೇ ತರ್ಕಿಸಿ ನಿರ್ಧಾರಮಾಡಿಕೊಂಡೆ. ಇಂಥಾ ಪ್ರಸಂಗಗಳಿಗೆ ಹೊಸಬನಾದ ನನಗೆ ಬಹಳ ಗೊಂದಲವೆನಿಸಿತು; ಮನಸ್ಸು ಸ್ಥಿಮಿತ ಸ್ಥಿತಿಯಲ್ಲಿರಲಿಲ್ಲ.

ಮನೆಯ ಒಳಬಾಗಿಲಿಗೆ ಹಾಕಿದ ತೆರೆ ಅಲುಗಾಡಿದಂತೆ ಕಂಡುಬಂತು; ಸ್ವಲ್ಪ ತೆರೆಯಲ್ಪಟ್ಟಿತು. ನನಗೇಕೋ ನನ್ನ ಹೃದಯದ ಬಾಗಿಲೂ ತೆರೆದಂತೆನಿಸಿತು. ಮುಖವೆಲ್ಲ ಬೆವರಿತು. ಕೈವಸ್ತ್ರದಿಂದ ಬೆವರನ್ನೊರಸಿಕೊಳ್ಳುತ್ತಿರುವಾಗ ಹದಿನಾರು ವಯಸ್ಸಿನ ಯುವತಿಯೋರ್ವಳು ಪುಸ್ತಕದ ಚೀಲದೊಂದಿಗೆ ಹೊರಬಿದ್ದಳು. ಇವಳ ಕಪ್ಪು ಮುಖ ನೋಡಿ ನಿರಾಶೆ ತಲೆದೋರಿತು. ಈ ಕುರೂಪಿಗೆ ಓದು ಹೇಳಿಕೊಡುವ ಸಮಯ ನನಗೇಕೆ ಬಂದಿತೆಂದು ಯೋಚಿಸಿದೆ. ಇಂಥ ಸಂಘಟನೆ ತಂದೊಗಗಿಸಿದುದಕ್ಕೆ ದೇವರನ್ನು ದೂರಿದೆ. ಆ ಹುಡುಗಿ ನನ್ನ ಸೋಫಾ ಸಮೀಪಿಸಿದಾಗ ಏನುಮಾಡುವುದೆಂಬುದು ತೋಚದೆ ಸುಮ್ಮನೇ ಕಣ್ಣುಮುಚ್ಚಿ ಕುಳಿತುಬಿಟ್ಟೆ. ಹೀಗೆಷ್ಟುಹೊತ್ತು ಕಳೆಯಿತೋ ತಿಳಿಯದಂತಿತ್ತು ಆಗಿನ ನನ್ನ ಅವಸ್ಥೆಯಲ್ಲಿ.

"ಅಮ್ಮಾವ್ರು, ಈಗ ಬರುತ್ತಾರೆ", ಎಂದು ಹೇಳಿ ಆ ಕುರೂಪಿ ಅಲ್ಲಿಂದ ಮಾಯವಾದಳು. ಅವಳು ಹೋದಳೆಂದು ಮನಸ್ಸಿಗೆನಿಸಿದ ಕೂಡಲೇ ಸ್ವಲ್ಪ ಧೈರ್ಯಬಂತು. ಮುಚ್ಚಿದ ಕಣ್ಣು ಮೆಲ್ಲಗೆ ತೆರೆದೆ. ಆ ಹೊತ್ತಿಗೆ ಸರಿಯಾಗಿ ತೆರೆಯನ್ನು ಸರಿಸಿಕೊಂಡು ಹದಿನೆಂಟು ವಯಸ್ಸಿನ ಮುಗ್ಧೆ ಮೆಲ್ಲನೆ ಬರುವ ನೋಟ ನನ್ನ ಕಣ್ಣಿಗೆ ಬಿತ್ತು. ಏನವಳ ಚೆಲುವು! ಅವಳೆಷ್ಟು ರೂಪವತಿಯಾಗಿದ್ದಳೋ ಅಷ್ಟೇ ನಯವಿನಯ ಅವಳ ಮುಖದಲ್ಲಿ ಮೂಡಿತ್ತು ಸರಿಯಾದ ಲಕ್ಷಣಗಳನ್ನು ತಿಳಿಯಲೆಷ್ಟು ಹೊತ್ತು ಬೇಕು?

ನಾನು ಕುಳಿತಿದ್ದ ಸೋಫಾ ಬಹುದೊಡ್ಡದು. ಬಂದವಳೇ ಸೋಫಾದ ಆ ಕಡೆಯ ತುದಿಯಲ್ಲಿ ಮೆಲ್ಲಗೆ ಕುಳಿತಳು. ಈ ಸನ್ನಿವೇಷವು ನನ್ನನ್ನು ಹುಚ್ಚೆಬ್ಬಿಸಿತು. ಮೈಮರೆಯುವಂತೆ ಮಾಡಿತು ಆದರೆ ಮರುಕ್ಷಣದಲ್ಲಿಯೇ ನನ್ನ ಕರ್ತವ್ಯವೇನೆಂಬುದರ ಅರಿವೂ ಬಂತು. ಚೇತರಿಸಿಕೊಂಡು ಟೇಬಲದ ಮೇಲಿನ ಪುಸ್ತಕಗಳನ್ನು ತಗೆದುಕೊಂಡು ಪಾಠಗಳ ಕ್ರಮುವನ್ನು, ಎಲ್ಲ ವಿವರವನ್ನೂ ತಿಳಿಸಿ, ಅಂದು ಹೇಳಬೇಕೆಂದು ತೀರ್ಮಾನಿಸಿದ ಪಾಠಹೇಳಿ ಮನೆಗೆ ಹೊರಟೆ. ಹೋಗುವಾಗ ನನ್ನ ಹಾದಿ ಹೇಗೆ ಮುಂದುವರಿಯಿತೆಂಬ ಅರಿವು ನನಗಿರಲಿಲ್ಲ. ಮನೆಯ ಬಾಗಿಲಿಗೆ ಬಂದ ಕೂಡಲೆ ನಾನೆಲ್ಲಿರುವುದೆಂಬುದು ನೆನಪಿಗೆ ಬಂತು. ನಗುಮುಖದಿಂದ ನನ್ನ ಕೋಣೆಯನ್ನು ಪ್ರವೇಶಿಸಿ ನನ್ನ ಅಂದಿನ ವರ್ತನೆಗೆ ಕಾರಣವೇನೆಂಬುದು ತಿಳಿಯಲಾರದಷ್ಟು ಮಾಯೆ ನನ್ನನ್ನೇತಕ್ಕೆ ಆವರಿಸಿತೆಂದು ಯೋಚಿಸುತ್ತ ಕುಳಿತುಬಿಟ್ಟೆ. ನಾನಿನ್ನೂ

ಮೂರನೆಯ ದಿನದಿಂದ ಪಾಠ ಹೇಳುವುದು ಕ್ರಮದಂತೆ ನಡೆಯಿತು. ಸರಳ ಬಹು ಜಾಣೆ; ಪಾಠ ಕಲಿಯುವುದೆಂದರೆ ಬಹು ಕುತೂಹಲ. ಇಂಥವರಿಗೆ ಪಾಠ ಹೇಳುವುದೆಂದರೆ ನನಗೂ ಸಂತೋಷ. ಹೇಳಿಕೊಟ್ಟುದ್ದೆಲ್ಲವನ್ನೂ ಬಹು ಎಚ್ಚರದಿಂದ ಕಲಿಯುವುದಲ್ಲದೆ, ನಾನು ಕೇಳಬಹುದಾದ ವಿಷಯಗಳೆಲ್ಲವನ್ನೂ ಊಹಿಸಿ ಯಾವ ಬಗೆಯ ತೊಂದರೆಯನ್ನೂ ಕೊಡದಲೇ ವರ್ತಿಸುತ್ತಿದ್ದ ಅವಳ ಸ್ವಭಾವ ಹೆಸರಿಗೆ ತಕ್ಕಂತೆ ಸರಳವೇ ಆಗಿತ್ತು. ಅವಳು ದಿನೇ ದಿನೇ ನನ್ನಲ್ಲಿ ಪಡೆಯುತ್ತಿದ್ದ ವಿದ್ಯೆಯ ಬಹುಮಾನವೇನು ದೊರೆಯಬಹುದೆಂದು ಮನಸ್ಸಿನಲ್ಲಿಯೇ ಯೋಚಿಸಿದೆ.

ದಿನಗಳುರುಳಿದಂತೆ ನಮ್ಮಿಬ್ಬರಲ್ಲಿ ಸಲುಗೆ ಬೆಳೆಯಿತು. ಆ ಸಲುಗೆಯ ನೆವದಿಂದ ಅವಳನ್ನು ಪ್ರೀತಿಸಬೇಕೆ ಅಲ್ಲದ ಅವಳನ್ನು ತಂಗಿಯಂತೆ ಕಾಣಬೇಕೇ ಎಂಬ ಯೋಚನೆ ನನ್ನನ್ನೂ ವೇದಿಸುತ್ತಿತ್ತು. ಹೀಗೆ ಹೆಚ್ಚಿನ ಯೋಚನೆಯಿಂದ ನನಗೆ ರಾತ್ರಿಗಳಲ್ಲಿ ನಿದ್ರೆ ಬರುತ್ತಿರಲಿಲ್ಲ. ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಇಂಥಾ ಯೋಚನೆಗಳನ್ನು ಮನಸ್ಸಿನಲ್ಲಿ ಬರಗೊಡುವುದುಚಿತವೇ ಎಂದು ಅನೇಕ ಸಲ ತರ್ಕಿಸತೊಡಗಿದೆ. ನನ್ನನ್ನು ಪೂರ್ಣ ನಂಬಿದ ಅವಳ ತಂದೆಗೆ ದ್ರೋಹವೆನಿಸುವುದೇ? . . . . ಆದರೆ ನಾವಿಬ್ಬರೂ ಸರಿಯಾದ ಜೋಡಲ್ಲವೆ? ಈ ವಿಧದಿಂದ ಬೆಳೆದು ಬಂದ ಒಂದು ವರ್ಷದ ಪರಿಚಯದಲ್ಲಿ ಪರಸ್ಪರ ಮನಸ್ಸುಗಳು ಮಿಲನವಾದರೆ ತಪ್ಪೆಲ್ಲಿ ಬಂತು? ಇಷ್ಟು ಹತ್ತಿರವೇ ಬೆಳೆದು ಬಂದ ಈ ಎರಡು ಜೀವಗಳು ಒಂದಾಗುವುದು ವಿಧಿನಿಯಮಕ್ಕೆ ವಿರುದ್ಧವೆ? ಮಾನವನು ನಿರ್ಮಿಸಿಕೊಂಡ ಸಮಾಜದಲ್ಲಿ ಇಂತಹ ಸಂಘಟನೆ ವಿಚಿತ್ರವೆನಿಸಬಹುದು. ಆದರೆ ದೈವನಿರ್ಮಿತವಾದ ನಿಷ್ಕಳಂಕಮಯ ಜೀವನದಲ್ಲಿ ಇದಕ್ಕೆ ಎಡೆ ಇಲ್ಲವೆ? ನನಗವಳಲ್ಲಿದ್ದ ಪ್ರೇಮ ವ್ಯಕ್ತಗೊಳಿಸಿದರೆ, ಸರಳಳು ಯಾವ ರೀತಿಯಲ್ಲಿ ಅದನ್ನು ಬರಮಾಡಿಕೊಳ್ಳುವಳು? ಸರಳಳು ಬಂದಾಗ ನಿರ್ಭಯದಿಂದ ಅವಳ ಮೇಲಿನ ಪ್ರೇಮ ವ್ಯಕ್ತಗೊಳಿಸಿ ಅದರ ಪರಿಣಾಮವೇನೆಂಬುದನ್ನೂ ತಿಳಿಯುವುದು ಒಳಿತಲ್ಲವೆ? ಪ್ರಪಂಚದ ರೀತಿ ನಿಯಮಗಳನ್ನರಿಯದ ನನ್ನ ಈ ವರ್ತನೆ ನಿಂದಾಸ್ಪದವಾದರೆ, ಮುಂದೆ ನನ್ನ ಜೀವನವು ಕಳಂಕಮಯವಾದರೆ ಹೇಗೆ?

ಹೀಗೆ ಯೋಚನೆಯಲ್ಲೇ ಮತ್ತೆರಡು ತಿಂಗಳು ಕಳೆದೆ. ಎಂದಿನಂತೆ ಪಾಠ ಹೇಳುತ್ತಿದ್ದೆ. ನನ್ನಲ್ಲಿದ್ದ ಉತ್ಸಾಹ ಕಡಮೆಯಾಯಿತು. ಈ ಬದಲಾವಣೆ ಸರಳೆಯ ವರ್ತನೆಯಲ್ಲಿಯೂ ಬಂದಿರುವುದು ನನಗೆ ತಿಳಿಯುತ್ತಿತ್ತು.

ನನ್ನ ಈ ಉದ್ರೇಕಾವಸ್ಥೆಯ ಬಗ್ಗೆ ತೋರುತ್ತ ಬಂದ ಇವಳ ಸಹಾನುಭೂತಿಯನ್ನು ಕಂಡು ನನಗಾಶ್ಚರ್ಯವೆನಿಸಿತು. ಅವಳ ಈ ಮೌನವು ನನಗಿನ್ನಷ್ಟು ಪ್ರೋತ್ಸಾಹವನ್ನು ಕೊಟ್ಟಿತು. ಮುಂದೇನು ಮಾಡಬೇಕೆಂಬುದು ತೋಚದಂತಾಯಿತು. ಇಂಥ ವಿಷಮ ಪರಿಸ್ಥಿತಿ ಬಂದೊದಗಲು ಕಾರಣರಾರೆಂಬುದು ನನಗೇ ಹೊಳೆಯದಂತಾಯಿತು.

ಸಮಯ ಮುಂದೋಡಿದಂತೆ ನನ್ನ ಮನೋವೇದನೆಯೂ ಹೆಚ್ಚಿತು ದಿನ ದಿನಕ್ಕೆ ನನ್ನ ಪ್ರಕೃತಿ ಕೆಡಲಾರಂಭಿಸಿತು. ಅನ್ನ ರುಚಿಸದಂತಾಗಿ ಹಾಸಿಗೆ ಹಿಡಿಯುವಷ್ಟು ನಿರ್ಬಲತೆ ಶರೀರದಲ್ಲಿ ತಲೆದೋರಿತು. ಮೇಲೆ ಜ್ವರವೂ ಬರತೊಡಗಿತು. ಒಂದೆರಡು ವಾರಗಳವರೆಗೆ ಅವರ ಮನೆಗೆ ಹೋಗುವುದು ನಿಲ್ಲಿಸಬೇಕಾಯಿತು. ಇದರ ಕಾರಣವೇನೆಂಬುದನ್ನೂ ಹೇಳಿ ಕಳುಹಿಸುವುದು ಅವಶ್ಯಕವೆಂದು ನನಗೆನಿಸಿತು. ನನಗೆ ಜ್ವರಬರುತ್ತಿರುವುದೆಂದು ತಿಳಿದ ಮೇಲಂತೂ ದೇಸಾಯರ ಮನೆ ಡಾಕ್ಟರು ಬಂದು ಉಪಚರಿಸ ಹತ್ತಿದರು. ಅವರೆಷ್ಟು ಪ್ರಯತ್ನಿಸಿದರೂ ನನ್ನ ಜ್ವರ ಇಳಿಯುವ ದಾರಿ ಕಾಣಲಿಲ್ಲ. ರಕ್ತ ಪರೀಕ್ಷೆಮಾಡಬೆಂಕೆದು ಡಾಕ್ಟರರು ಬಯಸಿದುದರಿಂದ ಅದೂ ಮಾಡಿದುದಾಯಿತು. ಎಕ್ಸರೇ ಫೋಟೋ ತೆಗೆದು ನನ್ನದು ಕ್ಷಯರೋಗವೆಂದು ಡಾಕ್ಟರು ನಿರ್ಧಾರದಿಂದ ಹೇಳಿ ಮುಂದೆ ಯಾವುದಾದರೊಂದು ಆರೋಗ್ಯಾಶ್ರಮಕ್ಕೆ ಹೋಗಬೇಕೆಂದು ಸೂಚಿಸಿದರು. ದೇಸಾಯರು ಈ ವಿಷಯವನ್ನು ತಿಳಿದು ನನ್ನ ಚಿಕಿತ್ಸೆಗಾಗಿ ವಿಶ್ರಾಮಭಾಗದ ಕ್ಷಯದಾಸ್ಪತ್ರೆಗೆ ಕಳುಹಿಸಲು ನಿಶ್ಚಯಿಸಿದರು ತಾವೇ ಎಲ್ಲವನ್ನೂ ನೋಡಿಕೊಳ್ಳುವೆವೆಂದು ಭರವಸೆಯನ್ನಿತ್ತರು.

ಬಾಲ್ಯದಲ್ಲೇ ತಂದೆ ತಾಯಿಗಳನ್ನು ಕಳೆದುಕೊಂಡು, ವಿದ್ಯೆಯನ್ನು ಉದಾರಿಗಳ ಸಹಾಯದಿಂದ ಪಡೆದು, ಪದವೀಧರನಾಗಿದ್ದೆ. ಬಡತನದ ಕಷ್ಟ ಜೀವನದ ಅರಿವು ನನಗೆ ಚೆನ್ನಾಗಿ ಆಗಿತ್ತು. ನನ್ನ ಯೋಗ್ಯತೆಯನ್ನರಿತ ದೇಸಾಯರು ತಮ್ಮ ಮಗಳಿಗೆ ವಿದ್ಯೆ ಕಲಿಸಲು ಅಪ್ಪಣೆಕೊಡಿಸಿದ್ದರು. ಎಂ.ಎ. ಪರೀಕ್ಷೆಗೆ 'ಟರ್ಮು' ತುಂಬಿದ್ದುದರಿಂದ ಇವರ ಅನುಕೂಲವಾದ ನೆರವು ಬಹಳ ಸಹಕಾರಿಯಾಗಿತ್ತು. ಮನುಷ್ಯನೊಂದು ಬಗೆದರೆ ವಿಧಿ ಮತ್ತೊಂದು ಬಗೆಯಿತು. ಮನಸ್ಸನ್ನು ಎಷ್ಟು ಹಿಡಿತದಲ್ಲಿಡಬೇಕೆಂದು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಹೀಗೆ ಮನೋವ್ಯಾಕುಲತೆಗೊಳಗಾದ ನನ್ನ ಶರೀರವು ಕ್ಷೀಣಿಸಿ ಈ ಅವಸ್ಥೆಗಿಳಿಯಿತು. ಬಡವನೊಬ್ಬನಿಗೆ ನೆರವಾಗಲು ಬಂದ

ನೋವನ್ನುಂಟುಮಾಡಿರಬಹುದೆಂದು ನನಗೆ ತಿಳಿದುಬಂತು. ಅಂದು ನನ್ನನ್ನು ಆರೋಗ್ಯಾಶ್ರಮಕ್ಕೊಯ್ಯುವಾಗ ದೇಸಾಯರೂ, ಸರಳೆಯೂ ಆಡಿದ ಸಹಾನುಭೂತಿಯ ಮಾತುಗಳು ಮರೆಯಲಾರದಂತವು. ಸರಳೆಯ ಕಣ್ಣಲ್ಲಿ ತುಂಬಿಬಂದ ನೀರು ನನ್ನ ಹೃದಯವನ್ನು ಕಲಕಿತು. ದೇಸಾಯರ ಇಳಿಮುಖವು ನನ್ನನ್ನು ಅಧೈರ್ಯಗೊಳಿಸಿತು. ಶ್ಯಾನಿಟೋರಿಯಮದವರೆಗೆ ದೇಸಾಯರೇ ಸ್ವತಃ ಕಾರಿನಲ್ಲಿ ಕರೆತಂದು ನನ್ನ ಚಿಕಿತ್ಸೆಯ ಬಗ್ಗೆ ಎಲ್ಲ ವ್ಯವಸ್ಥೆಯನ್ನೂ ಮಾಡಿ ಹೋದರು. ಹಿಂತಿರುಗುವಾಗ ಅವರಾಡಿದ ಉತ್ಸಾಹದ ಮಾತುಗಳು ಬಹಳ ಪರಿಣಾಮಕಾರಿಯಾದವು. ಬೇನೆ ಹಿಡಿತದಲ್ಲಿರುವುದರಿಂದ ಬೇಗ ಗುಣ ಹೊಂದಬಹುದೆಂದು ನನಗೆ ಹೇಳಿದ ಅವರ ಹಿತವಚನಗಳು ಸ್ವಲ್ಪ ಧೈರ್ಯವನ್ನು ತಂದುಕೊಟ್ಟವು.

ಕ್ಷಯದ ಆಶ್ರಮದಲ್ಲಿ ನಾನು ಎರಡು ವರ್ಷಗಳ ವರೆಗೆ ಇರಬೇಕಾಯಿತು. ಆಸ್ಪತ್ರೆಯಲ್ಲಿರುವಾಗ ಪ್ರತಿವಾರವೂ ತಪ್ಪದೆ ದೇಸಾಯರಿಂದಲೂ ಸರಳೆಯಿಂದಲೂ ಕಾಗದಗಳು ಬರುತ್ತಿದ್ದುವು. ತಬ್ಬಲಿಯಾದ ನನಗೆ ಈ ಕಾಗದಗಳೇ ಬೇಕಾದ ಹುರುಪನ್ನು ತಂದು ಕೊಟ್ಟವು. ಸರಳೆಯು ಮಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಮೊದಲನೇ ವರ್ಗದಲ್ಲಿ ಎರಡನೇ ನಂಬರು ಪಡೆದು ಪಾಸಾದಳೆಂಬ ವಿಷಯ ನನಗೆ ಹೆಚ್ಚಿನ ಉತ್ಸಾಹ ತಂದು ಕೊಟ್ಟಿತು. ಸ್ವತಃ ನಾನೇ ತೇರ್ಗಡೆ ಹೊಂದಿದ್ದರೆ ಎಷ್ಟು ಸಂತೋಷವಾಗಬೇಕೋ ಅದಕ್ಕಿಂತಲೂ ಹೆಚ್ಚಿನ ಆನಂದ ನನಗಾಯಿತೆಂದು ಬೇರೆ ಹೇಳಬೇಕಾಗಿಲ್ಲ. ದೇಸಾಯರ ಸಂತೋಷದ ಪತ್ರಗಳೂ, ನನ್ನಲ್ಲಿ ಅವರು ತೋರಿಸುತ್ತ ಬಂದ ಆದರ ಅಭಿಮಾನಗಳೂ ಸದ್ಯದ ದೇಹಸ್ಥಿತಿಯನ್ನು ಸುಧಾರಿಸಲು ಅನುಕೂಲವಾಯಿತು. ದೇಸಾಯರ ಕಡೆಯಿಂದ ಬಂದ ನನಗೆ ಆಸ್ಪತ್ರೆಯಲ್ಲಿ ದೊರೆತ ಅಕ್ಕರೆ ಮತ್ತು ಉಪಚಾರಗಳಿಂದಾಗಿ ನಾನು ಅಲ್ಲಿ ಕಳೆದ ಎರಡು ವರ್ಷಗಳು ಕೇವಲ ಎರಡೇ ತಿಂಗಳಂತೆ ಕಂಡು ಬಂದವು

ಅಂದು ನಾನು ಮನೆಗೆ ಹಿಂತಿರುಗಬೇಕಾದ ದಿನ. ದೇಸಾಯರು ಅವರ ಮಗಳು ಸರಳ ಮತ್ತೆ ತಮ್ಮ ಕಾರಿನಲ್ಲಿ ಕರೆದುಕೊಂಡು ಹೋಗುವುದಕ್ಕೆ ಬಂದಿದ್ದರು. ಇಷ್ಟು ದಿನಗಳು ನನ್ನಲ್ಲಿ ಕಂಡುಬಂದ ಉತ್ಸಾಹ ಸಂತೋಷ ಅಂದೇಕೋ ನನ್ನಲ್ಲಿ ಕಂಡು ಬರಲಿಲ್ಲ. ಮತ್ತೊಂದು ಯೋಚನೆ ನನ್ನನ್ನು ಭಾಧಿಸುತ್ತಲಿತ್ತು. ಸುಖವಾಗಿ ಎರಡು ವರ್ಷಗಳು ಕಳೆದುದಾಯಿತು; ಯಾವ ಯೋಚನೆಯೂ ಇರಲಿಲ್ಲ. ಮುಂದೆ ಜೀವನವೆಂತು ಸಾಗಬೇಕೆಂಬ

ಸಮಸ್ಯೆ ಎದುರಿಗೆ ಬಂದು ನಿಂತಿತು. ಬಾಯ್ಬಿಟ್ಟು ದೇಸಾಯರನ್ನೇ ಕೇಳಲು ನನಗೆ ಧೈರ್ಯ ಸಾಲಲಿಲ್ಲ. ಸಮಯವೊದಗಿದಾಗ ಅದನ್ನು ವಿಚಾರಿಸ ಬಹುದೆಂದು ಸುಮ್ಮನಾದೆ.

ಕರೆದುಕೊಂಡು ಹೋಗಲು ಬಂದ ದೇಸಾಯರು ಬಹು ಉತ್ಸಾಹದಿಂದ "ರಮೇಶರಾಯರೇ, ಇಂದು ನನ್ನ ಜೀವನದಲ್ಲಿಯ ಮಹತ್ವದ ದಿನ. ನನ್ನಿಂದ ನಿಮಗೇನಾದರೂ ನೆರವು ಆಗಿದ್ದರೆ, ಅದು ದೇವರ ದಯೆಯೇ ಹೊರತು ಬೇರೆ ಅಲ್ಲ. ನೀವು ಈ ಕೆಟ್ಟ ಬೇನೆಯ ಹಿಡಿತದಿಂದ ಪಾರಾದುದರಿಂದ ಪುನಹ ನೀವು ಜನಿಸಿದಂತಾಯಿತು. ಸ್ವರ್ಗಸ್ಥರಾದ ನಿಮ್ಮ ತಂದೆ ತಾಯಿಯರ ಆತ್ಮಗಳಿಗೆ ಶಾಂತಿದೊರೆತಿರಬಹುದು. ನಮ್ಮ ಅಭಿವಂದನೆಗಳನ್ನು ಸ್ವೀಕರಿಸ ಬೇಕು." ಎಂದು ಹೇಳಿ ನನ್ನ ಕೈ ಕುಲುಕಿದರು. ಪಕ್ಕದಲ್ಲಿಯೇ ನಿಂತಿದ್ದ ಸರಳ ನಗುತ್ತ ನನಗೆ ನಮಸ್ಕರಿಸಿದಳು. ಆ ನಗುವಿನಲ್ಲಿ ಒಂದು ಬಗೆಯ ನಾವೀನ್ಯತೆ, ಹೊಸತನದ ಕಳೆ, ಪ್ರೇಮದ ಕರೆ ಇದ್ದಂತೆ ನನಗೆನಿಸಿತು. ಎರಡು ವರ್ಷಗಳ ಅನಂತರ ನಾವಿಬ್ಬರೂ ಮತ್ತೆ ಭೇಟಿಯಾದುದರಿಂದ ಹೀಗಾಗಿರ ಬಹುದೇನೊ?

"ದೇಸಾಯರೇ ನಿಮ್ಮ ಉಪಕಾರವನ್ನು ಮರೆಯಲಾರೆ. ನಿಮ್ಮ ಈ ಹಿರಿಯ ಸಹಾಯವನ್ನು ಯಾವ ರೀತಿಯಲ್ಲಿ ನೆನಪಿಡಬೇಕೋ ತಿಳಿಯ ದಾಗಿದೆ."

"ಇದರಲ್ಲಿ ನನ್ನದೇನು ಬಂತು ಸಹಾಯ? ಸರಳಳೇ ಇದಕ್ಕೆಲ್ಲ ಕಾರಣಳು. ಅವಳಿಂದಲ್ಲವೆ ನಿಮ್ಮ ಹತ್ತಿರದ ಪರಿಚಯವಾದುದು. ಅದಿರಲಿ, ಇಂದು ನೀವೇತಕ್ಕೆ ಇಷ್ಟು ನಿರುತ್ಸಾಹಿಗಳಾಗಿರುವಿರಿ? ನಿಮ್ಮಲ್ಲಿ ಇಂದು ಹುರುಪು ಇರಬೇಕಾದುದು ಆವಶ್ಯಕ. ಹೀಗೇಕೆ?"

"ಏನೂ ಇಲ್ಲ ಮುಂದೆ . . ." ಎಂದು ಏನನ್ನೋ ಹೇಳುವುದರಲ್ಲಿದ್ದೆನು. ಆದರೆ ದೇಸಾಯರು ನನ್ನ ಮಾತಿಗೆ ಅಡ್ಡ ಬಂದು, ಅಲ್ಲ ರಮೇಶರಾಯರೆ, ಈಗೇಕೆ ಆ ಯೋಚನೆ; ಊರಿಗೆ ಹೋಗುವ. ಕೆಲವು ದಿನ ನಮ್ಮ ಮನೆ ಯಲ್ಲಿಯೇ ಇದ್ದು ಬಿಡಿ. ಅಲ್ಲಿ ಮುಂದಿನ ವಿಚಾರ ನಿಶ್ಚಯಿಸಿದರಾಯಿತು. ಇಂಥ ಯೋಚನೆಯಿಂದ ನಿಮ್ಮ ತಲೆ ಈಗ ಕೆಡಿಸಿಕೊಳ್ಳಬೇಡಿ." ಎಂದು ಹೇಳಿದರು.

"ಹಾಗಾದರೆ ನಾನು ನಿಮ್ಮ ಮನೆಗೆ ಬರಬೇಕೇನು? ಎಷ್ಟು ತೊಂದರೆ ನಿಮಗೆ? ನನ್ನಿಂದ ನಿಮಗೆ ಬಹಳ ಕಷ್ಟ ಆಯಿತು, ಮಾಡುವುದೇನು?" ಎಂದು ನನ್ನ ಕೃತಜ್ಞತೆಯನ್ನೂ ಸೂಚಿಸಲು ನಮಸ್ಕರಿಸಿದೆ. ನನ್ನ ಈ ಹುಚ್ಚು ವರ್ತನೆಯು ಹಿನ್ನೆಲೆಯನ್ನರಿತ ದೇಸಾಯರು ಸ್ವಲ್ಪ ನಕ್ಕು ಬಿಟ್ಟರು. ಸರಳಳು ಒಂದು ಬಗೆಯ ತೃಪ್ತಿಯನ್ನು ವ್ಯಕ್ತ ಗೊಳಿಸುವುದಕ್ಕೋಸ್ಕರ ಮೆಲ್ಲನೆ ಉಸುರ್ಗರೆದಳು. ಸಮಾಧಾನದ ಸೂಚನೆ ಅವಳ ಮುಖದಲ್ಲಿ ಕಂಡು ಬಂತು. ನನಗೂ ಸಂತೋಷವೆನಿಸಿತು.

ಎಲ್ಲವೂ ಸಿದ್ಧವಾದುದರಿಂದ ಕಾರಿನಲ್ಲಿ ಅವರ ಊರಿಗೆ ಹೊರಟೆವು.

ದೇಸಾಯರ ಮನೆಯಲ್ಲಿ ಅಳಿಯನಂತೆ ನನಗೆ ಉಪಚಾರಾದಿಗಳು ನಡೆದವು. ಯಾವ ಕೊರತೆಯೂ ಇರಲಿಲ್ಲ. ನನ್ನ ದೇಹ ಸ್ಥಿತಿ ಬೇಗ ಸುಧಾರಿಸ ಹತ್ತಿತು. ಆದರೆ ಸರಳೆಯ ಸಹವಾಸ ಮಾತ್ರ ಸಿಗುತ್ತಿರಲಿಲ್ಲ. ಈಗಂತೂ ಓದು ಹೇಳಿಕೊಡುವ ನೆವವಿರಲಿಲ್ಲ. ಅವಳನ್ನೂ ದಿನದಲ್ಲಿ ನಾಲ್ಕೈದು ಸಲ ಮಾತ್ರ ನೋಡುತ್ತಿದ್ದೆ.

ದೇಸಾಯರ ಆರೈಕೆಯಲ್ಲಿ ನಾನು ಸುಖದಿಂದ ಕಾಲಕಳೆದೆ. ಅವರ ಮನೆಗೆ ಬಂದು ಆರು ತಿಂಗಳಾದರೂ ನನ್ನ ಮುಂದಿನ ಮಾರ್ಗದ ಬಗ್ಗೆ ಅವರು ಯಾವ ಮಾತೂ ಎತ್ತಲಿಲ್ಲ. ನಾನೂ ಕೇಳಬೇಕೆಂದು ಒಂದೊಂದು ಸಲ ಸಾಹಸಮಾಡಿದರೂ ಮರುಕ್ಷಣದಲ್ಲೇ ನಾಚಿಕೆಯಿಂದ, ಸುಮ್ಮನಾಗುತ್ತಿದ್ದೆ. ಅವಸರ ಪಡಿಸಿದರೆ ಅವರೇನಾದರೂ ನೊಂದು ಕೊಳ್ಳುವರೇ ಎಂಬ ಯೋಚನೆ ನನ್ನನ್ನು ಸುಮ್ಮನಿರಿಸಿತು.

ಮನಸ್ಸಿಗೆ ನೆಮ್ಮದಿಯೆನಿಸಿದಾಗ, ಎಂ. ಎ. ಕ್ಕೆ ಓದಬೇಕಾದ ಪಾಠಗಳನ್ನು ಓದುವ ಕ್ರಮವಿಟ್ಟು ಕೊಂಡಿದ್ದೆ. ದೇಸಾಯರೊಂದು ದಿನ ನನ್ನನ್ನು ತಮ್ಮ ಮನೆಯಲ್ಲಿಯೇ ಇರಬೇಕೆಂದು ಕಟ್ಟಪ್ಪಣೆ ಮಾಡಿದುದರಿಂದ ಅವರ ಪ್ರೀತಿಯ, ವಿಶ್ವಾಸದ ಬಯಕೆಯಂತೆ ನಡೆಯಲು ಅವಶ್ಯವೆನಿಸಿತು. ನನ್ನ ಕಷ್ಟ ಕಾಲದಲ್ಲಿ ನೆರವಾದ ಈ ಪ್ರಾಣದಾತನ ಮಾತಿನಂತೆ ನಡೆಯುವುದು ನನ್ನ ಕರ್ತವ್ಯವೆನಿಸಿತು. ಮತ್ತೇನು ಮಾಡುವುದು? ಅವರೇ ನನ್ನ ಸಾಕಿದ ತಂದೆಯೆಂದು ಭಾವಿಸಿ ಅವರ ಮನೆಯಲ್ಲಿದ್ದು ಬಿಟ್ಟೆ.

ನನ್ನ ಪರೀಕ್ಷೆ ಮುಗಿಯಿತು. ಸರಳೆ ಎಫ್. ವೈ. ಆರ್ಟ್ಸಿನಲ್ಲಿದ್ದಳು. ಕಾಲೇಜಿನ ಪರೀಕ್ಷೆಯಲ್ಲಿ ಅವಳೂ ಪಾಸಾದಳೆಂದು ತಿಳಿದು ಬಂತು. ನನ್ನ

ವ್ಯಾಸಂಗವೂ ಚೆನ್ನಾಗಿ ಆಗಿದ್ದುದರಿಂದ ನಾನು ಮೊದಲನೇ ವರ್ಗದಲ್ಲಿ ತೇರ್ಗಡೆ ಹೊಂದಿದುದೇನು ಆಶ್ಚರ್ಯವಲ್ಲ ದೇಸಾಯರಿಗೆ ನನ್ನ ಈ ಪರೀಕ್ಷೆಯ ಫಲಿತಾಂಶ ಹೆಚ್ಚಿನ ಸಂತೋಷವನ್ನು ತಂದುಕೊಟ್ಟಿತು. ಇನ್ನೊಂದು ವರ್ಷದ ವರೆಗೆ, ಸರಳೆಯು ಇಂಟರು ಮುಗಿಯುವ ವರೆವಿಗೆ ನಾನು ಅವಳಿಗೆ ಓದು ಹೇಳಬೇಕೆಂದು ದೇಸಾಯರು ಬಲವಂತಮಾಡಿದರು. ಅದೂ ಆಯಿತು. ಸರಳೆ ಮೊದಲೇ ಜಾಣೆ; ಪರೀಕ್ಷೆಯಲ್ಲಿ ಅನಾಯಾಸದಿಂದ ಮೊದಲನೆಯ ಶ್ರೇಣಿಯಲ್ಲಿ ಪಾಸು ಮಾಡಿದಳು.

ಮುಂದೇನು? ಪರೀಕ್ಷೆಯ ಫಲಿತಾಂಶ ತಿಳಿದ ರಾತ್ರಿ ಊಟವಾದ ಅನಂತರ ದೇಸಾಯರ ಮೇಲಟ್ಟದ ವಿಶಾಲವಾದ ಅಂಗಳದಲ್ಲಿ ಹರಟೆಗೆಂದು ಕುಳಿತೆವು. ಬಿಸಿಲುಕಾಲ, ಹುಣ್ಣಿಮೆ; ಹಿಟ್ಟುಚೆಲ್ಲಿದಂತೆ ಬೆಳುದಿಂಗಳು; ಮಂದಮಾರುತ; ಸಂತೋಷದ ಸಮಯ. ದೇಸಾಯರು ಹರಟೆಯಲ್ಲಿ ರಸಿಕರು ಬೇರೆ. ಇನ್ನೇನು? ಎಲ್ಲಾ ವಿಷಯಗಳನ್ನೂ ಚರ್ಚಿಸಿದೆವು. ಈ ಗೊಡ್ಡು ಹರಟೆಯಲ್ಲಿ ನನಗೆ ಹೆಚ್ಚು ಇಷ್ಟವಿರಲಿಲ್ಲ ಮುಂದೆ ನನ್ನ ಜೀವನದ ಮಾರ್ಗವೇನೆಂಬುದನ್ನೂ ಇಂಥ ಸಂತೋಷದ ಸಮಯದಲ್ಲಿ ನಿರ್ಧರಿಸಿ ಬಿಡಲೇಬೇಕೆಂಬ ಹಂಬಲ; ಬಾಯಿಬಿಟ್ಟು ಕೇಳಲು ಅಧೈರ್ಯ. ಸುವಾಸನೆಯ ತಾಂಬೂಲವನ್ನು ಮೆಲ್ಲುತ್ತ ದೇಸಾಯರು "ರಮೇಶರಾಯರೆ, ಅಂತೂ ನಿಮ್ಮ ಭಾರ ಇಳಿಸಿಕೊಂಡಿರಿ" ಎಂದರು.

"ಅಂದರೆ?"

"ಸರಳೆಯನ್ನಂತೂ ಮೊದಲನೆಯ ವರ್ಗದಲ್ಲಿ ಬರುವಂತೆ ಸಾಹಸ ಮಾಡಿದಿರಿ. ಅಲ್ಲದೆ ನೀವೂ ಚಲೋಕ್ಲಾಸ್ ಹೊಡೆದಿರಿ. ಹೆಚ್ಚಿನ ಸಾಹಸ ನಿಮ್ಮದು ಎರಡು ಮೆಚ್ಚುಗೆ; ಎರಡು ಬಹುಮಾನ."

ಹೀಗೆ ಹೇಳುವಾಗ ದೇಸಾಯರು ಮೆಲುನಗೆಯಿಂದ ಹರ್ಷಿತರಾಗಿದ್ದರು. ಈ ಮಾತುಗಳ ಪರಿಣಾಮವೇನೆಂಬುದನ್ನು ತಿಳಿಯಲು ನಮ್ಮಿಬ್ಬರ ಕಡೆ ನೋಡಿದರು ನಾವು ಸುಮ್ಮನಿದ್ದು ಬಿಟ್ಟೆವು. ಅಷ್ಟರೊಳಗೆ ಆಳು ಗ್ರಾಮಫೋನು ತಂದಿಟ್ಟ; ಚಲೋ ರಿಕಾರ್ಡುಗಳ ಗಾಯನ ಕೇಳಿ ಆಯಿತು. ಸರಳೆಯು ಸಂಗೀತದಲ್ಲಿಯೂ ಪ್ರವೀಣಳೆಂದು ಕೇಳಿಬಲ್ಲೆ. ಇಂಥ ಸಮಯದಲ್ಲಿ ಈ ನಮ್ಮ ಸಂತೋಷ ಕೂಟಕ್ಕೆ ಅವಳ ಸಂಗೀತ ಕಳೆತರಬಹುದೆಂದು ನನಗನಿಸಿತು.

"ಸರೂ ನಿನ್ನ ಪಿಟೀಲು ಹೊರಗೆ ತೆಗೆದು ಬಹಳ ದಿನವಾಯಿತು. ಆಗಾಗ್ಗೆ ಅದನ್ನು ಉಪಯೋಗಿಸುತ್ತಿದ್ದರೆ ತಾನೆ ತಂತೀವಾದ್ಯ ಚಲೋ ಇರೋದು. ಎಲ್ಲಿ, ಬಾರಿಸಿ ಅದರೊಂದಿಗೆ ಒಂದೆರಡು ಹೊಸ ಕವಿತೆಗಳನ್ನು ಹಾಡಬಾರದೆ? ಏನೋ ನನಗೂ ಕೇಳೋಣಾಂತ ಅನಿಸಿ, ಕೇಳಿದೆ ನಿನ್ನಿಷ್ಟ."

ಇದೇ ಸಮಯಕ್ಕೆ ಸರಿಯಾಗಿ ಮನೆಯ ಆಳು ಸಿದ್ದಪ್ಪ ಫಿಡಲಿನ ಪೆಟ್ಟಿಗೆಯನ್ನು ತಂದಿರಿಸಿದ. ಅನಾಯಾಸವಾಗಿ ಯಾರೂ ಹೇಳದೆ ಆಳು ಸಹಾ ಸ್ವಯಂಸ್ಫೂರ್ತಿಯಿಂದಲೇ ತಂದೊದಗಿಸಿದ ಈ ಸಾಧನೆಯು ದೈವ ಸಂಕಲ್ಪವೆಂದು ನೆನೆದು ಸರಳೆ ಸ್ವಲ್ಪ ಯೋಚಿಸಿ ಪೆಟ್ಟಿಗೆಯನ್ನು ತೆಗದು ವಾದ್ಯವನ್ನು ಶ್ರುತಿಮಾಡಿಕೊಂಡಳು. ಅಂದು ದೇಸಾಯರು ಬಹಳ ಕುತೂಹಲಿಗಳಾಗಿದ್ದರು. ಅವರಲ್ಲಿ ಕಂಡುಬರುವ ಉತ್ಸಾಹ ಒಂದು ಬಗೆಯ ನಾವೀನ್ಯತೆಯನ್ನು ಹೊಂದಿದ್ದಿತು. ನಾನು ಮೌನದಲ್ಲಿಯೇ ಎಲ್ಲವನ್ನು ನೋಡುತ್ತಿದ್ದೆನು. ದೇಸಾಯರಿಗೆ ಈ ಸಮಾಗಮ ಹಿಂದಿನದೊಂದು ಸನ್ನಿವೇಷವನ್ನು ನೆನಪಿಗೆ ತಂದುಕೊಟ್ಟಿತು. ಅವರ ಕಣ್ಣುಗಳಿಂದ ಎರಡು ಹನಿ ಉದುರಿದವು. ಅವುಗಳನ್ನೊರಸಿಕೊಳ್ಳುವಾಗ ನಾನು ಸರಳೆ—ಇಬ್ಬರೂ ನೋಡಿದೆವು. ನಮ್ಮ ಮೂಕ ನೋಟವೇ ಇದರ ಕಾರಣವೇನೆಂದು ಕೇಳುವಂತೆ ಪ್ರಶ್ನಾರ್ಥಕವಾಗಿತ್ತು. ಇದನ್ನರಿತ ದೇಸಾಯರು.

"ಇಲ್ಲಮ್ಮಾ. ನಿನ್ನ ತಾಯಿಯೊಂದಿಗೆ ನಾನು ಕಳೆದ ಮಹತ್ವದ ದಿನವು ನೆನಪಿಗೆ ಬಂತು. ಈ ಯೋಗದಲ್ಲಿ ಅವಳು ಮೇಲಿಂದಲೇ ನಮ್ಮನ್ನು ನೋಡುತ್ತಿರಬಹುದು . . . . ಇರಲಿ. ಯಾವ ಕವನವನ್ನು ಹೇಳುವಿ"?.

"ಹೊಸ ಕವಿತೆಗಳನ್ನು ಹಾಡಲು ಬರುವುದೆ"? ಎಂದು ನಾನು ಹಿಂದು ಮುಂದು ಯೋಚಿಸದೇ ಕೇಳಿಬಿಟ್ಟೆ. ನನ್ನ ಹುಚ್ಚು ಪ್ರಶ್ನೆಗೆ ನನಗೇ ಆಶ್ಚರ್ಯವೆನಿಸಿತು. ಬೆದರಿದ ಜಿಂಕೆಯ ಕಣ್ಣಿನಂತೆ ಸರಳೆಯ ಅರಳಿದ ಕಣ್ಣಿನ ನೋಟ ನನ್ನ ಕಡೆ . . . . ಏನು ಮಾರ್ಮಿಕವದು?

ಇದರಿಂಗಿತವನ್ನರಿತ ದೇಸಾಯರು "ಸರೂ, ಚಲೋ ಬೆಳದಿಂಗಳದೆ. ಬೇಂದ್ರೆಯವರ 'ಬೆಳದಿಂಗಳ ನೋಡs', ಬೆಟಗೇರಿಯವರ "ಜಯ, ಜಯ ಪಾಲ್ಗುಣ", ಹೂಂ ಇವೆರಡಂತೂ ಹೇಳು. ಆಮ್ಯಾಲೆ ನೆನಪಿಗೆ ತಂದುಕೋತೀನಿ".

'ಸರೂ' ಎಂದು ಕರೆಯುವುದಕ್ಕೆ ಅಧಿಕಾರವಿದೆಯೆ ನನಗೆ? ನನ್ನೊಳಗೇ

ಅಂದುಕೊಂಡೆ. ನಾನೇನೋ ಕಳವು ಮಾಡಿದಂತೆನಿಸಿತು. 'ಟಂವ್' ಎಂದು ಸ್ವರವನ್ನು ಮೇಳವಿಸಿ ಆರಂಭಿಸಿದಳು. ಸರಳೆಯು ಅಂದು ಬಹಳ ಚೆಲುವಾಗಿ ಕಂಡುಬಂದಳು. ಅಮರಕವಿಯಾದ ಬೇಂದ್ರೆಯವರ ಆ ಕವನದ ಸಾಲುಗಳು ಮುಂದುವರಿದಂತೆಲ್ಲ ನನ್ನನ್ನು ನಾನೇ ಮರೆತೆ. ಆ ಕವನವು ನನ್ನನ್ನು ಮುಗ್ಧ ನನ್ನಾಗಿ ಮಾಡಿಬಿಟ್ಟಿತು ಇದರೊಳಗಿನ 'ಮದುಮಗಳ ಕಣ್ಣಿನಾ ಬಗೀ' ಮತ್ತು 'ಹೂ ತsದಾ ಸುಗಂಧೀಜಾಲಿ' ಎಂಬ ಚರಣಗಳನ್ನು ಸರಾಗವಾಗಿ ಕಲ್ಯಾಣಿರಾಗದಲ್ಲಿ ಹಾಡುವಾಗ ಕವನದ ಭಾವಕ್ಕೆ ಅನುಗುಣವಾದ ರಾಗ, ಅದಕ್ಕನುಸರಿಸಿದ ತಾಳ ಲಯ; ಅವಳ ಕೋಮಲ ಕಂಠ ಇವೆಲ್ಲವನ್ನೂ ಮೇಳ ವಿಸಿಕೊಂಡು, ಅವಳ ಹಾವಭಾವದಿಂದ ಹೊರಬೀಳುತ್ತಿದ್ದ ಕವನದ ಸಾಲು ಗಳು ನಮಗೆ 'ಮಾಯಕಾರರ ಬೀಡಾ' ಗಿಸಿದ್ದಿತು; ನಮ್ಮ ಆಗಿನ ಸ್ಥಿತಿ.

ನಡು ನಿದ್ದಿಯೊಳಗೆ ಇದ್ದಾಂಗ
ಕನಸು ಬಿದ್ದಾಂಗ
ಕನಸು ಬಿದ್ದಾಂಗs

ಆಗಿದ್ದು ನಾವು 'ಹಾಲು ಗಡಲಿನsಸೀಮೆ'ಯಲ್ಲಿಂತೆನಿಸಿತು; ಮುಗ್ಧರಾಗಿ ಕುಳಿತುಬಿಟ್ಟೆವು. ಆ ಕವನದ ಕೊನೆಯ ಸಾಲು ಹೇಳಿ ಕವನವನ್ನು ಮುಗಿಯಿಸಿದಾಗ ನಮಗೆಚ್ಚರವೇ ಇರಲಿಲ್ಲ. ಹಾಡುತ್ತ ಹಾಡುತ್ತ ಮೈಮರೆತ ಸರಳೆಯೂ ಸ್ವಲ್ಪ ಹೊತ್ತು ಸಮಾಧಿಯ ಸ್ಥಿತಿಯಲ್ಲಿಯೇ ಇದ್ದಳು.

ದೇಸಾಯರು, "ಸರೂ, ಬಹಳ ಚೆನ್ನಾಗಿ ಹೇಳಿದೀ ತಾಯಿ. ಯಾಕ ಇಷ್ಟು ಚಲೋ ಹಾಡಿದೀವ್ವ, ಇವತ್ತು" ಎಂದು ನನ್ನ ಕಡೆ ಅವರು ನೋಡಿದರು. ಅವಳು ನಾಚಿಕೆಯಿಂದ ನನ್ನನ್ನು ಕದ್ದು ನೋಡುತ್ತಿದ್ದುದು ನಾನು ನೋಡಿದೆ. "ಹೂಂ, ಹಾಡಮ್ಮ ಆ ಹುರುಪಿನ 'ಜಯ, ಜಯ ಫಾಲ್ಗುಣ, ಬೆಟಗೇರಿಯ ವರ ವಿರಹಿಣಿಯಲ್ಲಿಯ ಕವನಗಳನ್ನು ಸ್ವಲ್ಪ ಕಲಿಯಮ್ಮಾ. ಬಹಳ ಚೆನ್ನಾಗಿ ಬರೆದಿದ್ದಾರೆ ನೋಡು."

"ಆಗಲಪ್ಪಾ, ಇನ್ನೆರಡು ವಾರಗಳಲ್ಲಿ ಕಲೀತೀನಿ." ಎಂದು ಅಠಾಣಾ ರಾಗದಲ್ಲಿ ಹಾಡಿದ 'ಜಯ ಜಯ ಫಾಲ್ಗುಣ'ವು ಬಹು ಸ್ಫೂರ್ತಿದಾಯಕ ವಾಗಿತ್ತು.

"ಇಲ್ನೋಡು, ಸರೂ 'ದೋಣಿಸಾಗಲಿ' ಅಂದ ಮ್ಯಾಲೆ ಮಲೆನಾಡನ್ನು ಮರುಳುಗೊಳಿಸಿದ 'ಕುಣಿಯೋಣು ಬಾರs' ಹೇಳಿ ಮುಗಿಸಿ ಬಿಡವ್ವ."

ಸರಳೆ 'ದೋಣಿಸಾಗಲಿ' ಎಂಬ ಕವನವನ್ನು ಶ್ರೀರಾಗದಲ್ಲಿ ಹಾಡುವಾಗ ನಾವು ಚಂದ್ರನ ಬೆಳಕೆಂಬ ನದಿಯಲ್ಲಿ ನಮ್ಮ ನೆರಳೆಂಬ ನಾವೆಯಲ್ಲಿ ನಾವೇ ತೇಲಿ ಹೋಗುವಂತೆನಿಸಿತು ತನ್ಮಯತೆಯಿಂದ ಕುಳಿತು ಬಿಟ್ಟಿದ್ದೆವು. ವಿಶ್ವ ಪ್ರಖ್ಯಾತಿಯಾದ 'ಕುಣಿಯೋಣು ಬಾರs' ಕವನವನ್ನು ಹಾಡಿ ಸುಮ್ಮ ನಾದಳು. ಅಲ್ಲಿಗೆ ರಾತ್ರಿ ಹನ್ನೆರಡೂವರೆ ಆಗಿದ್ದಿತು.

ಮಾಳಿಗೆಯಿಂದ ಕೆಳಗಿಳಿದು ಹೋಗಲು ಎದ್ದು ನಿಂತಾಗ ದೇಸಾಯರು,

"ಆತು ನರು ನಿನ್ನ ಹಡದ ಹೊಟ್ಟಿ ತಣ್ಣಗಿರಲಿ. ಮಲಗಲಿಕ್ಕೆ ಹೋಗೋಣ" ಎಂದು ಅವರು ಕೆಳಗಿಳಿದರು. ಸರಳ ನಡುವೆ, ನಾನು ಕೊನೆಗೆ. ನಮ್ಮ ನಮ್ಮ ಮಲಗುವ ಕೋಣೆಗೆ ಹೋದೆವು.

ಸರಳೆಯು ರಸಿಕಳೆಂಬ ವಿಷಯ ಮೊದಲೇ ತಿಳಿದಿದ್ದರೂ ಮನಸಾರೆ ಕೇಳಿ ಸುಖಪಡುವ ಸಮಯ ಅಂದೊದಗಿದ್ದಿತು ಅಂದು ರಾತ್ರಿ ನನಗೆ ಬೇಗ ನಿದ್ದೆ ಬರಲಿಲ್ಲ. ಯೋಚನಾತರಂಗದಲ್ಲಿ ಮುಳುಗಿ ಬಹಳ ಹೊತ್ತು ಸುಮ್ಮನೆ ಹಾಸಿಗೆಯ ಮೇಲೆ ಉರುಳಾಡಿದೆ. ಯಾವಾಗ ನಿದ್ದೆ ಹತ್ತಿತೋ ತಿಳಿಯದು. ಆದರೆ ನನಗೆ ಎಚ್ಚರವಾದಾಗ ಮಾತ್ರ ಮುಂಜಾನೆ ಎಂಟು ಹೊಡೆದಿದ್ದಿತು. ಅಷ್ಟು ತಡವಾಗಿ ಎದ್ದದು ಅದೇ ಮೊದಲನೆಯ ಸಲ; ಅಂಥ ಸುಖ ನಿದ್ರೆ ಮಾಡಿದ್ದೂ ಮೊದಲನೆಯ ಸಲ.

ಕಾಫಿ ಕುಡಿಯುವಾಗ ಹಿಂದಿನದಿನ ರಾತ್ರಿ ಸರಳೆಯು ತನ್ನ ಕಡೆ ನಾರಿದ ಕಳ್ಳನೋಟದ ಅರ್ಥವೇನು? ದೇಸಾಯರ ಮೇಲೆ ಇದರ ಪರಿಣಾಮವೇನು? ಅವರ ಆಶ್ರಯದಲ್ಲಿದ್ದ ನನ್ನನ್ನೇನಾದರೂ ತಪ್ಪು ತಿಳಿದರೆ ಹೇಗೆ ಎಂಬ ಯೋಚನೆಗಳು ನನ್ನನ್ನು ಬಾಧಿಸಿದವು. ಅದೇ ಗುಂಗಿನಲ್ಲಿದ್ದಾಗ ದೇಸಾಯರು ಟವಲಿನಿಂದ ಮುಖವನ್ನೊರಸಿಕೊಳ್ಳುತ್ತ ಮುಂದಿನ ಚಾವಡಿಗೆ ಹೋಗುವಾಗ ನನ್ನ ಕೋಣೆಯ ಬಾಗಿಲು ತೆರೆದಿದ್ದುದರಿಂದ ಒಳಗೆ ಬಂದರು. ನಾನೆದ್ದು ನಿಂತು ಬರಮಾಡಿಕೊಂಡೆ.

"ಮತ್ತೇನು, ರಮೇಶರಾಯರೇ? ನಿನ್ನೆ ನೀವು ಸಮ್ಮನಿದ್ದು ಬಿಟ್ಟಿರಲ್ಲ? ಸರೂ, ಕವನ ಛಲೋ ಹೇಳುವಳಲ್ಲವೆ? ಹೆಚ್ಚು ಅಭ್ಯಾಸ ತಪ್ಪಿದೆ . . . ."

"ನಿಮ್ಮ ದಯೆಯಿಂದ ನನಗೆ ನಿಮ್ಮ ಮನೆಯಲ್ಲಿ ಇಂಥ ಸುಖದ ಆಶ್ರಯ ಸಿಕ್ಕಿದೆ. ನಾನು ಬಹಳ ಭಾಗ್ಯಶಾಲಿ . . . ."

"ಅದೇನು ನಾಟಕಕಾರರಂತೆ ಹೊಗಳಿಕೆಗೆ ಆರಂಭಿಸಿದಿರಿ ನಿಮ್ಮಲ್ಲಿಯ ಒಳ್ಳೆಯ ನಡತೆಯೆ ಇದಕ್ಕೆಲ್ಲ ಕಾರಣ. ನಾನು ನಿಮಿತ್ತ ಮಾತ್ರ . . . ." ಎಂದು ಹೇಳಿ ಸ್ವಲ್ಪ ಸಮಯ ಸುಮ್ಮನಿದ್ದು "ಅಲ್ಲಾ, ಸರೂನ ನೀವು ಮದುವೆ ಯಾದರೆ ಹೇಗೆ? ನನಗೂ ವಯಸ್ಸಾಯ್ತು. ಇನ್ನೇಕೆ ಹುಡುಕಬೇಕು? ನಿಮ್ಮಿಬ್ಬರಲ್ಲಿ ಸಾಕಷ್ಟು ಪರಿಚಯವಾಗಿದೆ. ಒಬ್ಬರ ಮನಸ್ಸನ್ನೊಬ್ಬರು ಅರಿತುಕೊಳ್ಳಲು ಸಾಕಷ್ಟು ಕಾಲ ಒಂದೇ ಮನೆಯಲ್ಲಿದ್ದುದರಿಂದ ಅದೂ ಸಾಧ್ಯವಾಗಿರಬಹುದು. ನಿನ್ನೆ ನಿಮ್ಮ ಮೌನ, ವಿನಯದ ಕಾರಣ ಅವಳ ಬಗ್ಗೆ ನಿಮಗಿದ್ದ ಆದರ ವಿಶ್ವಾಸವೇ ಕಾರಣವೆಂದು ನನ್ನ ಊಹೆ. ನಿಮಗಭ್ಯಂತರವಿಲ್ಲದಿದ್ದರೆ . . . ."

"ನಾನು ನಿಮ್ಮನ್ನಾಶ್ರಯಿಸಿದವನು. ನಿಮ್ಮ ಸಲಹೆ, ಸೂಚನೆಗಳು ನನ್ನ ಆತ್ಮ ಗೌರವಕ್ಕೆ ಹಾನಿತರದಂಥವುಗಳಾದರೆ, ನೀವೇನು ಮಾಡಿದರೂ ಸಮ್ಮತವೆ. ಬಡವನೆಂದು . . "

"ಛೇ! ಹಾಗುಂಟೆ ರಮೇಶರಾಯರೆ. ಬಡವರು ಶ್ರೀಮಂತರೆಂಬ ಬೇಧ ನನ್ನಲ್ಲಿಲ್ಲ. ನಿಮ್ಮಿಬ್ಬರ ಮದುವೆಯಾದ ನಂತರ ನೀವೇ ಈ ಸಂಪತ್ತಿಗೆಲ್ಲ ಸರ್ವಾಧಿಕಾರಿಗಳು. ನಿಮ್ಮಿಬ್ಬರ ಕಾರ್ಯದಲ್ಲಿ ನಾನಾವ ರೀತಿಯಲ್ಲಿಯೂ ಅಡ್ಡಬರುವುದಿಲ್ಲ. ಮತ್ತೇನು. ಹಾಗೆಯೇ ನಾನು ವಿಲ್ಲಿನಲ್ಲಿ ಕಾಣಿಸಿಡುವೆನು. ನಿಮಗೆ ಸಮ್ಮತಿ ತಾನೆ?

"ಆ ಮಾತಿಗಲ್ಲ, ದೇಸಾಯರ, ನಾನಾವಾಗಲೂ ಸ್ಪಷ್ಟವಾದಿ. ಮನಸ್ಸಿನಲ್ಲೊಂದು ಹೊರಗೊಂದು ನೆನೆಯುವುದು ನನ್ನ ಸ್ವಭಾವವಲ್ಲ. ಬಡವರ ಜೀವನದ ದುಃಖವನ್ನರಿತ ನನಗೆ ಕೆಲವು ಅಭಿಪ್ರಾಯಗಳಿವೆ. ಅವುಗಳನ್ನು ಆಚರಣೆಯಲ್ಲಿ ತರಬೇಕಾದರೆ ನಿಮ್ಮಂಥ ಧನವಂತರಿಂದ ಅಡ್ಡಿಯಾಗಿ ಮನಸ್ಸು ಕೆಡಬಾರದೆಂಬ ಭಾವನೆಯಿಂದ ಹೇಳಿದೆ."

"ನಿಮ್ಮನ್ನು ಬಹಳ ದಿನಗಳಿಂದ ಬಲ್ಲೆ. ಜಗತ್ತು ಯಾವ ಕಡೆ ಓಡು ತ್ತಿದೆಯೆಂಬುವುದನ್ನೂ ಕಾಣುತ್ತಿದ್ದೇನೆ. ಅಂದ ಮೇಲೆ ನನಗೆ ನೀವಿಷು ಒಡೆದು ಹೇಳಬೇಕಾದುದೂ ಅನವಶ್ಯಕವಿತ್ತು. ಹೇಳಿದಿರಿ ಒಳಿತಾಯಿತು. ಮತ್ತೇನು ಹೇಳಬೇಕು. ಮುಂದಿನ . . . ."

"ಆಗಬಹುದು. ನಾನು ನಿಮ್ಮವ." ಎಂದು ಹೇಳುವ ಹೊತ್ತಿಗೆ ಕೋಣೆಯ ಬಾಗಿಲನ್ನು ಸಮೀಪಿಸಿದ ದೇಸಾಯರು ನಗುತ್ತ ಹೋಗಿಬಿಟ್ಟರು.

ಅಂದು ನಡೆದ ವಿಷಯು ಕನಸೇ, ನಿಜವೇ ಎಂಬುವುದು ನಿರ್ಧರಿಸಲು ನನ್ನಲ್ಲಿ ಆಗ ಚೈತನ್ಯವಿರಲಿಲ್ಲ; ಶರೀರದಲ್ಲಿ ಯಾವ ಬಗೆಯು ನಿರ್ಬಲತೆ ಇಲ್ಲ ದಿದ್ದರೂ ಮಾನಸಿಕವಾಗಿ ಹೊಯ್ದಾಟ ಬಹಳ ಆಗಿತ್ತು. ಈ ಗೊಂದಲದಲ್ಲಿ ದೇಸಾಯರೊಂದಿಗೆ ನಾನೇನು ಮಾತನಾಡಿದೆನೆಂಬುವುದರ ಅರಿವು ನನಗಿರಲಿಲ್ಲ. ಮುಖವನ್ನು ನಿಲುವು ಕನ್ನಡಿಯಲ್ಲಿ ನೋಡಿಕೊಂಡೆ. ನನ್ನ ಮುಖದಲ್ಲಿ ಒಂದು ಬಗೆಯು ವಿಕಾಸವು ಒಡೆದು ಕಾಣುತ್ತಿತ್ತು. ದೇಹವು ಒಂದು ಬಗೆಯು ಹಗುರತೆಯನ್ನು ಪಡೆದಂತೆನಿಸಿತು. ಉತ್ಸಾಹವು ಉಕ್ಕೇರಿತು; ಶರೀರಾದ್ಯಂತವೂ ಚೈತನ್ಯ ತಲೆದೋರಿತು.

“ಚಿಗರ್‍ಯಾಗಿ ತಿಗರ್‍ಯಾಗಿ
ನಿದ್ದಿಯು ಭಗರ್‍ಯಾಗಿ
ಗಾಳೀಗು ಹಗರಾಗಿ । ಕುಣಿ . . . .
ಕೈವೈ ಬೀನಾಡಿ
ಇಳಿಗೂದಲೀನಾಡಿ
ಬೆವರ್ಹನಿ ಸೂಸಾಡಿ । ಕುಣಿ . . . .”

ಎಂಬ ಸಾಲುಗಳನ್ನು ಸಣ್ಣ ಧನಿಯುಲ್ಲಿ ಹಾಡುತ್ತಾ ಹುಚ್ಚನಂತೆ ಹಗುರ ಹೆಜ್ಜೆ ಯಲ್ಲಿ ಕುಣಿಯುತೊಡಗಿದೆ. ನನಗಾದ ಆನಂದವು ಈ ರೀತಿ ವ್ಯಕ್ತಗೊಂಡುದು ಸಹಜವೆನಿಸಿತು.

ಮುಂದೆರಡು ವಾರಗಳಲ್ಲಿ ನಮ್ಮ ಮದುವೆ ನಿಶ್ಚಯುವಾಯಿತು. ದೇಸಾ ಯುರ ಮನೆಯಲ್ಲಿ ಮದುವೆಯೆಂದರೆ ಕೇಳಬೇಕೆ? ಬಹಳ ವಿಜೃಂಭಣೆಯಿಂದ ನಡೆಯಿತು. ಅದರಲ್ಲಿ ಹೆಚ್ಚಿನ ವೈಶಿಷ್ಟ್ಯವೆಂದರೆ ಉಪಯೋಗಿಸಿದ ವಸ್ತು ಗಳೆಲ್ಲವೂ ನಮ್ಮದೇಶದ ಸಾಮಾನುಗಳು.

ದೇಸಾಯುರು ಯಾವುದರಲ್ಲಿಯೂ ತಲೆಹಾಕುತ್ತಿರಲಿಲ್ಲ. ನಾವಿಬ್ಬರು ಕಲೆತು ಏನುಮಾಡಿದರೂ ಸುಮ್ಮನಿರುತ್ತಿದ್ದರು. ಆದರೆ ದಿನವೂ ರಾತ್ರಿ ಊಟಮಾಡುವಾಗ, ಆ ದಿನದ ವರದಿಯುನ್ನೊಪ್ಪಿಸಿ ಮುಂದಿನದ್ದನ್ನೂ ಸ್ವಲ್ಪ ದರಲ್ಲಿಯೇ ಸೂಚಿಸುವುದು ನಮ್ಮ ರೂಢಿಯಾಗಿತ್ತು.

ದೇಸಾಯುರ ಹಳ್ಳಿ ಕೃಷ್ಣಾ ತೀರದಲ್ಲಿತ್ತು. ಸ್ವಲ್ಪ ಬಿಸಿಯಾದ ಹವೆ. ಇದು ತಿಳಿದೇ ನಾವು ಒಂದು ಅನಾಥಾಲಯುವನ್ನು, ಎಲ್ಲ ಬಗೆಯು ರೋಗಗಳಿಗೆ

ಚಿಕಿತ್ಸೆ ದೊರೆಯುವ ವೈದ್ಯಶಾಲೆಯನ್ನು ತೆಗೆಯುವ ಯೋಜನೆ ಕೈಕೊಂಡೆವು. ದೇಸಾಯರ ಒಪ್ಪಿಗೆ ಸಿಕ್ಕಿತೆಂದು ಹೇಳಬೇಕಾದದು ಅನವಶ್ಯಕ.

ನಮ್ಮ ಈ ಎರಡು ಯೋಜನೆಗಳು ಪೂರ್ತಿಯಾಗಬೇಕಾದರೆ ಎರಡು ವರ್ಷ ಹಿಡಿಯಿತು. ಹಣದ ತೊಂದರೆಯೇ ಇರಲಿಲ್ಲ. ನಾನು ಮತ್ತು ಸರಳ ನಾಕಷ್ಟು ಅಸಕ್ತಿ ವಹಿಸಿ ಎಲ್ಲದರಲ್ಲಿಯೂ ಉತ್ತಮ ವಸ್ತುಗಳನ್ನೇ ತಂದಿರಿಸಿದೆವು. ವೈದ್ಯಶಾಲೆಗೆ ಬೇಕಾದವುಗಳೆಲ್ಲವನ್ನೂ ಉತ್ತಮ ಇಬ್ಬರು ಡಾಕ್ಟರರ ನೆರವಿನಿಂದ ತರಿಸಲ್ಪಟ್ಟಿತು. ವೈದ್ಯಶಾಲೆ ಮುಂದುವರಿದಂತೆಲ್ಲ ನಾನಾ ರೋಗಗಳಲ್ಲಿ ಪ್ರತ್ಯೇಕ ಪ್ರಶಸ್ತಿ ಪಡೆದ ಡಾಕ್ಟರುಗಳನ್ನೂ ಕೆಲಸಕ್ಕೆ ಸೇರಿಸಿಕೊಂಡುದಾಯಿತು. ಅನಾಥಾಲಯ ಒಂದು ಕಡೆ, ವೈದ್ಯಶಾಲೆ ಒಂದು ಕಡೆ ದಿನೇ ದಿನೇ ಜನರಿಗೆ ಉಪಯೋಗವಾಗಹತ್ತಿದವು. ಊರ ಜನರು, ಹತ್ತಿರದ ಜನರು ತಾವಾಗಿಯೇ ಮುಂದೆ ಬಂದು ಯಾವ ಕಟ್ಟು ಕರಾರುಗಳಿಲ್ಲದೆ ಸಾವಿರಾರು ರೂಪಾಯಿಗಳನ್ನು ದಾನವಾಗಿ ಕೊಟ್ಟು ಇವೆರಡನ್ನೂ ಬೆಳೆಯುವಂತೆ ಮಾಡಿದರು. ಆದರೆ ಮೇಲ್ವಿಚಾರ ನೋಡಿಕೊಳ್ಳುವ ಅಧಿಕಾರ, ಹೊಣೆ ಮಾತ್ರ ನಮ್ಮಿಬ್ಬರ ಮೇಲೆಯೇ ಇತ್ತು.

ಹತ್ತು ವರ್ಷಗಳು ಕಳೆದವು. ಎಂಟು ವರ್ಷದ ಸುರೇಶನು, ನಾಲ್ಕು ವರ್ಷದ ಕುಸುಮ ನನ್ನ ಮನೆಯನ್ನು ಸೂರ್ಯಚಂದ್ರರಂತೆ ಬೆಳಗುತ್ತಿದ್ದರು. ದೇಸಾಯರಂತೂ ನಮ್ಮ ಸುಖ ಸಂಸಾರವನ್ನು ಕಂಡು ಮನದಲ್ಲಿಯೇ ಹಿಗ್ಗುತ್ತಿದ್ದರು.

ಅಂದು ವೈಶಾಖ ಮಾಸ; ಪೂರ್ಣಿಮೆ: ಸಂಜೆ ಸಮಯ, ಸೂರ್ಯನತ್ತ ಮುಳುಗುತ್ತಿರುವನು; ಇತ್ತ ಚಂದ್ರನುದಯಿಸಿರುವನು. ಈ ಸಂಧಿ ಸಮಯದಲ್ಲಿ ನಾನೊಬ್ಬನೇ ನಮ್ಮ ಹೊಸ ಮನೆಯ ಮಾಳಿಗೆಯ ಅಂಗಳದಲ್ಲಿ ಕೂತಿರುವೆನು. ನನ್ನ ದೃಷ್ಟಿ ಉದಯಿಸುವ ಚಂದ್ರನ ಕಡೆ; ಅವನಲ್ಲಿ ಇನ್ನೂ ಪೂರ್ಣ ಪ್ರಭೆ ಬಂದಿರಲಿಲ್ಲ.

ಆಗ ನನ್ನ ಹಿಂದಿನ ಬಡ ಜೀವನದ ನೆನವಾಗ ಹತ್ತಿತು. ಬೀದಿ ಬೀದಿ ಅಲೆದು, ಮದುಕರಿ ವೃತ್ತಿಯಿಂದ ಓದುತ್ತಲಿದ್ದಾ ನನ್ನ ಆ ಕಷ್ಟಜೀವನವಲ್ಲ! ಇಂದು ದೇಸಾಯರ ಅಳಿಯನಾಗಿ, ಏಕೆ ಅವರ ಆಸ್ತಿಯ ಯಜಮಾನನಾಗಿ ಸುಖದಲ್ಲಿರುವುದೆಲ್ಲಿ! ಎಷ್ಟು ಅಂತರ? ನನ್ನ ಇಂದಿನ ಜೀವನದಲ್ಲಿ ಅಹಂಕಾರದ ಕುರುಹು ಕಾಣುವುದೆ? ಮುಂದೆ ಎಂದಿಗಾದರೂ ಸೊಕ್ಕು ತನ್ನನ್ನಾವರಿ

ಸುವುದೇ? ತನ್ನ ಮುಖ್ಯ ಧ್ಯೇಯವಾದ ಬಡವರ ಆರೈಕೆಯಲ್ಲಿ ಅನಾದರಣೆ ತಲೆದೋರುವುದೆ? ಈ ಬಗೆಯ ಯೋಚನೆಗಳಿಂದ ಸುಮ್ಮನೇ ಆಕಾಶದಲ್ಲಿ ನೋಡುತ್ತ ಕುಳಿತಿದ್ದೆ. ಯಾರೋ ಬಂದು ತನ್ನೆರಡು ಕೈಗಳಿಂದ ನನ್ನ ಕಣ್ಮುಚ್ಚಿದರು. ಕೂಡಲೆ ಗ್ರಹಿಸಿದೆ; ಸರಳೆಯಲ್ಲದೆ ಇನ್ನಾರು?

ಬೇಗ ಅವಳು ಮುಂದೆ ಬಂದು ನಿಂತು. "ಅಲ್ಲಾ, ಇದೇನು ಸುಮ್ಮನೇ ಕುಳಿತು ಬಿಟ್ಟಿರಿ? ನಿಮ್ಮ ಮಾತೆಲ್ಲಾ ಹಿಂದೆ ನಿಂತು ಕೇಳಿದೆ. ಈಗ ಅದೆಲ್ಲಾ ನೆನೆದು ಚಿಂತಿಸಿದರೇನು ಪ್ರಯೋಜನ?"

"ಇಲ್ಲ ಸರಳಾ. ನನ್ನ ಯೋಚನೆ ಏಕೋ ಮುಸಕಾಗ ಹತ್ತಿತು. ಏನೇನೋ ಪೇಚಾಡಿಕೊಂಡೆ. ಆದರೆ ನೀನು ಬಂದೆ; ನನಗೆ ಈಗ ಪೂರ್ಣ ಎಚ್ಚರವಾಗಿದೆ ನೋಡು. ನನ್ನ ಯೋಚನಾಲಹರಿ ಮುಂದವಾದಾಗ ನಿನ್ನ ಬರುವಿಕೆಯಿಂದ ಆ ಆಲಸ್ಯ ಹರಿದು ತಿಳಿಯಾದ ಅರಿವು ಉಂಟಾಗುವುದು. ಹಿಂದೆ ಹೀಗೆಷ್ಟೋ ಸಲ ಆಗಿದೆ. ಅದು ನನಗೆ ಮಾತ್ರ ತಿಳಿದಿದೆ ಇರಲಿ, ಸರಳಾ ಅಲ್ಲಿ ನೋಡು, ನಮ್ಮೆದುರಿಗೆ ನಿಂತಿರುವ ಎರಡು ಭವ್ಯ ಮಂದಿರಗಳು; ಜೀವಿತವನ್ನು ಬೆಳಗಲು ದೇವರು ನಮಗೊಂದು ಗಂಡು ಹೆಣ್ಣು ದಯಪಾಲಿಸಿ ರುವನು. ಇದರರ್ಥವೇನು?

"ಸಾಕುಮಾಡಿ, ನಿಮ್ಮ ಒಗಟಿನ ಮಾತುಗಳು. ನೋಡಿ, ಕಾರಿನ ಹಾರ್ನ ಕೇಳಿಸುತ್ತಿದೆ. ನಡೆಯಿರಿ ಸ್ವಲ್ಪ ಹೊರಗೆ ಹೋಗುವ."

"ಬೇಡ ಸರಳಾ. ದೇಸಾಯರು, ಹುಡುಗರು ಮಾತ್ರ ಹೋಗಿ ಬರಲಿ." ಎಂದು ಮಾಳಿಗೆಯ ಅಂಚಿಗೆ ಹೋಗಿ ಕಾರಿನವನಿಗೆ ತಾವು ಬರುವುದಿಲ್ಲವೆಂದು ಹೇಳಿ ಕಳುಹಿಸಿದೆ.

"ಸರಳಾ ಅಲ್ಲಿ ನೋಡು; ಆ ಎರಡು ಭವ್ಯ ಸೇವಾ ಮಂದಿರಗಳು ಬೆಳು ದಿಂಗಳಲ್ಲಿ ಹೇಗೆ ಹೊಳೆಯುತ್ತಿರುವವು. ನಮ್ಮ ಇಬ್ಬರು ಮಕ್ಕಳು ಹೊಳೆ ಯುವ ಪುತ್ಥಳಿಗೊಂಬೆಗಳಲ್ಲವೆ? ಮುಂದೆ. . ."

ಚಂದಿರನು ಮೋಡದ ಹಿಂದೆ ಮರೆಯಾದ.



# ಆಯ್ಕೆ

(ಶ್ರೀಮತಿ "ವಾಣಿ", ಮೈಸೂರು)

ಲಲಿತ ಇನ್ನೂ ಹಾಸಿಗೆಯಿಂದ ಎದ್ದಿರಲಿಲ್ಲ ಆಗಲೇ ಮನೆಯಲ್ಲಿ ಏನೋ ಗಡಿ ಬಿಡಿಗೆ ಮೊದಲಾಗಿತ್ತು. ಕಿಟಿಕಿಯ ಸಂದಿನಿಂದ ಬೆಳಗಿನ ಎಳೆಯ ಸೂರ್ಯನ ಕಿರಣಗಳು ತೂರಿ ಬರಲು ಯತ್ನಿಸುತ್ತಿದ್ದುವು ಕಿಟಿಕಿಯ ಹೊರಗೆ ಹಬ್ಬಿದ್ದ ಗುಲಾಬಿ ಅರ್ಧ ಮಾತ್ರ ಅರಳಿ ಗಾಳಿಯಲ್ಲಿ ತೂಗಾಡುತಿತ್ತು. ಲಲಿತ ಮೆಲ್ಲನೆ ಕಣ್ಣಾರಳಿಸಿ ಒಂದು ಕ್ಷಣ ಆ ಕಡೆ ನೋಡಿ ಪಕ್ಕಕ್ಕೆ ಹೊರಳಿದಳು. ಆದರೆ ಪಕ್ಕದ ಹಾಸಿಗೆ ಆಗಲೇ ಬರಿದಾಗಿತ್ತು. ಲೀಲು ಯಾವಾಗಲೋ ಎದ್ದು ಹೋಗಿದ್ದಳು.

ಲಲಿತ ಆಗಲೂ ಏಳಲಿಲ್ಲ. ಮನೆಯ ಈ ಅಸಾಮಾನ್ಯ ಗಲಾಟೆಗೆ ಕಾರಣವೇನಿರಬಹುದೆಂದು ಯೋಚಿಸುತ್ತಾ ಮಲಗೇ ಇದ್ದಳು ಸಾಮಾನ್ಯವಾಗಿ ಈ ಹೊತ್ತಿನಲ್ಲಿ ಮನೆ, ರಮ್ಯವಾದ ಪ್ರಭಾತದಂತೆ ಶಾಂತವಾಗಿರುತ್ತಿತ್ತು. ದೇವರ ಮನೆಯಿಂದ ಅಸ್ಪಷ್ಟವಾಗಿ ಕೇಳಬರುತ್ತಿದ್ದ ಸಂಧ್ಯಾವಂದನೆಯ ಮಂತ್ರ, ಅಡಿಗೆ ಮನೆಯ ಕಡೆಯಿಂದ ಕಾಫಿ ಲೋಟಗಳ ಸದ್ದು, ಆಗ ತಾನೇ ಎಚ್ಚರಗೊಂಡ ಲೀಲು ಅಕ್ಕ ಏಳುವುದನ್ನೇ ಕಾಯುತ್ತ ಅವಳ ಮೈಮೇಲೆ ಕೈ ಆಡಿಸುತ್ತಿದ್ದಳು. ಈ ದಿನ ಎಲ್ಲಾ ವಿಪರೀತವಾಗಿರುವಂತಿದೆ! ಲೀಲೂ ಕೂಡ ಅಷ್ಟು ಹೊತ್ತಿಗೇ ಹಾಸಿಗೆಯಿಂದ ಪರಾರಿ! ಒಳಗಡೆ ಏನೋ ಓಡಾಟ ನಡೆದಿತ್ತು. ಚಿಕ್ಕಮ್ಮ ದೊಡ್ಡ ದನಿಯಲ್ಲಿ ಆಳಿಗೆ ಏನೋ ಹೇಳುತ್ತಿದ್ದಳು.

ಲೀಲು ಒಂದು ಕೈಲಿ ರೊಟ್ಟಿಯನ್ನು ಹಿಡಿದುಕೊಂಡು ಕಡಿಯುತ್ತ ಬಾಗಿಲಿಗೆ ಬಂದಳು. ಸುದ್ದಿಯನ್ನು ಹೇಳುವ ಆತುರದಿಂದ ಅವಳು ಹಾರಿ ಬಂದಿದ್ದಳು. ಅಕ್ಕ ಎದ್ದಿರುವುದನ್ನು ನೋಡಿ ಅವಳಿಗೆ ಸಂತೋಷವಾಯಿತು. ರೊಟ್ಟಿಯನ್ನು ಅಗಿಯುತ್ತಲೇ ಹೇಳಿದಳು—

"ಅಕ್ಕ . . . . ಈಗ . . . . ಮಾವ . . . . ಬರ್ತಾನಂತೆ!"

ಗಲಾಟೆಗೆ ಕಾರಣ ತಿಳಿದ ಹಾಗಾಯಿತು; ಆದರೆ ಅವನೇನು ಮಹಾ ರಾಜನೆ ಇಷ್ಟು ಸಡಗರ ಪಡುವುದಕ್ಕೆ? ಮನೆಗೆ ಎಷ್ಟೋ ಜನ ನೆಂಟರು

ಬರ್ತಾರೆ . . . . ಆದರೆ . . . . ಚಿಕ್ಕಮ್ಮನ ರಾಜ್ಯದಲ್ಲಿ ಅದನ್ನೆಲ್ಲಾ ಕೇಳುವ ಧೈರ್ಯ ಯಾರಿಗಿದೆ?

ಲಲಿತ ಲೀಲುವನ್ನು ಎಳೆದು ಹತ್ತಿರ ಕೂರಿಸಿಕೊಂಡು ಕೆದರಿದ ಕೂದಲುಗಳನ್ನು ಸರಿಮಾಡುತ್ತ ಕೇಳಿದಳು—

"ಯಾರು ಹೇಳಿದರು?"

ಹುಡುಗಿಯು ರೊಟ್ಟಿ ಮುಗಿಯುತ್ತ ಬಂದಿತ್ತು. ಬಾಯಿಗೆ ತಡೆಯೇನೂ ಇರಲಿಲ್ಲ. ತಂದೆ ತಾಯಿಯರ ಮಾತಿನ ನಡುವೆ ತನಗೆ ಅರ್ಥವಾದುದನ್ನೆಲ್ಲಾ ಒಂದೇ ಉಸಿರಿಗೆ ಒದರಿದಳು

"ಅಮ್ಮ ಹೇಳಿದಳು, ಮಾವ ಇನ್ಮೇಲೆ ಇಲ್ಲೇ ಇರ್ತಾನಂತೆ. ಅದಕ್ಕೇ ಮಹಡೀ ಮೇಲಿನ ರೂಮನ್ನೆಲ್ಲಾ ಖಾಲಿ ಮಾಡ್ಸಿರೋದು ಅವನು ನಂಗೆ ತುಂಬ ತಿಂಡಿ— ಆಟದ ಸಾಮಾನು ಎಲ್ಲಾ ತರ್ತಾನಂತೆ!"

ಲೀಲು ಇನ್ನೂ ಬಡಬಡಿಸುತ್ತಲೇ ಇದಳು. ಆದರೆ ಅದು ಲಲಿತನಿಗೆ ಕೇಳಿಸಿತೋ ಇಲ್ಲವೋ ಅನುಮಾನ. ಅವಳು ಈಗ ಬರುವ ಮಾವ ಹೇಗಿರ ಬಹುದೆಂದು ಯೋಚಿಸುತ್ತಿದ್ದಳು. ಅವಳು ಎಂದೂ ಮಾವನನ್ನು ಕಂಡಿರಲಿಲ್ಲ. ಅವಳಂತೆಯೇ ಅವಳ ತಾಯಿಗೂ ಒಡ ಹುಟ್ಟಿದವರು ಯಾರೂ ಇರಲಿಲ್ಲ. ತಾಯಿ ಇದ್ದಾಗ ಅವಳ ಕಡೆಯವರಾಗಿ ಅವಳ ತಂದೆ ಒಬ್ಬರು ಆಗಾಗ ಬರುತ್ತಿದ್ದರು. ಅವರೆಂದರೆ ಲಲಿತನಿಗೆ ಪ್ರಾಣ ಅವರಿಗೂ ಈ ಪುಟ್ಟ ಮೊಮ್ಮಗಳು ಹುಚ್ಚು ಹಿಡಿಸಿ ಬಿಟ್ಟಿದ್ದಳು. ಆಗಿನ ಉತ್ಸಾಹ ಹೇಳಬೇಕ? ಅವರು ಬರುವರೆಂದು ಕಾಗದ ಬಂದರೆ ಲಲಿತ ಬಾಗಿಲು ಬಿಟ್ಟು ಒಳಗೆ ಬರುತ್ತಿರಲಿಲ್ಲ ಹಿಂದಿನ ದಿನ ನಿದ್ರೆ ಸಹ ಚೆನ್ನಾಗಿ ಬರುತ್ತಿರಲಿಲ್ಲ. ಕನಸಿನಲ್ಲೂ ಅದೇ! ಅವರು ಬಂದರೆ ಹೋಗುವ ವರೆಗೂ ಅವರ ತೊಡೆಯನ್ನು ಬಿಟ್ಟು ಇಳಿಯುತ್ತಿರಲಿಲ್ಲ. ಅವರಿಬ್ಬರ ನಡುವೆ ಬೇರೊಂದು ಪ್ರಪಂಚವೇ ನಿರ್ಮಾಣವಾಗುತ್ತಿತ್ತು. ಈಗ ಅವರೆಲ್ಲಿ? ಈ ದಿನದ ಸಡಗರ ಅವಳಿಗೆ ಹಳೆಯ ನೆನಪನ್ನು ತಂದಿತು. ಆ ತಾಯಿಯೆಲ್ಲಿ?

ಲಲಿತನ ಹೃದಯದಲ್ಲಿ ಯಾವುದೋ ತಂತಿ ಮಿಡಿದಂತಾಯಿತು. ಕಣ್ಣು ತೇವವಾಯಿತು. ಈಗ ಬರುವ ಮಾವನೂ ಅವರಂತೆ ಇರಬಹುದೇ? ತಾನೂ ಅವರನ್ನು ಲೀಲುವಿನಂತೆ ಮಾವ— ಮಾವ, ಎಂದು ಕೂಗಬಹುದೇ? ತನ್ನ ಬಾಳಿನಲ್ಲಿ ಪುನಃ ಸ್ನೇಹವು ಕೊನರ ಬಹುದೇ? ಎಂಬ ಯೋಚನೆಗಳೆಲ್ಲಾ

ಒಂದರ ಹಿಂದೆ ಒಂದು ಬಂದುವು. ಆದರೆ ಅವರೂ ಚಿಕ್ಕಮ್ಮನಂತೇ ಇದ್ದರೆ . . . . ? ಮಿಂಚಿನಂತೆ ಬಂದ ಈ ಯೋಚನೆ ಒಂದೇ ಸಲಕ್ಕೆ ಮೊದಲಿನದನ್ನೆಲ್ಲಾ ಚದುರಿಸಿಬಿಟ್ಟಿತು. ಆಗ ಮನೆಯಲ್ಲಿ ತನ್ನ ಸ್ಥಿತಿ ಇನ್ನೂ ಹೀನವಾಗಬಹುದು! ಛೆ . . . ಇರಲಾರದು—ಎಲ್ಲರೂ ಒಂದೇ ತರಹ ಇರುವರೇ? ಇರಲಾರದು—ಖಂಡಿತ ಇಲ್ಲ!

ಲಲಿತ ಈಗಂತೂ ಪ್ರಯತ್ನ ಪೂರ್ವಕವಾಗಿ ಆ ಯೋಚನೆಯನ್ನು ದೂರ ಮಾಡಿದಳು.

"ಇನ್ನೂ ಲಲಿತ ಎದ್ದಿಲ್ಲವೇನೇ ?" ಒಳಗಿನಿಂದ ಚಿಕ್ಕಮ್ಮ ಗುಡುಗಿದಳು.

ಇನ್ನು ಮುಂದಿನ ಮಾತುಗಳು ಉದುರುವುದಕ್ಕೆ ಅವಕಾಶ ಕೊಡದೆ ಲಲಿತ ಬೇಗ ಎದ್ದು ಒಳಗೆ ಹೋದಳು. ಹಿಂದಿನ ದಿನ ಒಂದು ಸಣ್ಣ ಮಾತಿಗಾಗಿ ಮನೆಯಲ್ಲಿ ರಾದ್ಧಾಂತವಾಗಿತ್ತು. ಅದನ್ನು ಬೆಳೆಸುವುದು ಅವಳಿಗೆ ಬೇಕಾಗಿರಲಿಲ್ಲ.

ಆ ದಿನ ಏನೋ ಹಬ್ಬ. ಊಟ ತಿಂಡಿ ಎಲ್ಲಾ ಆದ ಮೇಲೆ ಲಲಿತ ತಂಗಿಯನ್ನು ಕೂರಿಸಿಕೊಂಡು ಜಡೆ ಹಾಕುತ್ತಿದ್ದಳು. ನಿತ್ಯವೂ ಅದು ಅವಳ ಕೆಲಸ. ಲೀಲುವನ್ನು ಅವಳು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದಳು. ಮಲತಂಗಿ ಎಂಬ ಭಾವನೆ ಎಂದೂ ಅವಳ ಮನಸ್ಸಿಗೆ ಬಂದಿರಲಿಲ್ಲ. ಲೀಲು ಕೂಡ ಅವಳನ್ನು ಅತಿಯಾಗಿ ಹಚ್ಚಿಕೊಂಡು ಇರುತ್ತಿದ್ದಳು. ಮಲಗುವುದು ಕೂಡುವುದು, ತಲೆ ಬಾಚಿಸಿ ಅಲಂಕಾರ ಮಾಡಿಕೊಳ್ಳುವುದು ಎಲ್ಲಾ ಅವಳ ಜೊತೆ. ಅದರಿಂದಲೇ ಅವಳ ತಾಯಿಗೆ ಸಿಟ್ಟು ಇರಬಹುದು.

ಲಲಿತ ಅವಳಿಗೆ ಹೊಸ ಲಂಗ ಹಾಕಿ ಪೆಟ್ಟಿಗೆಯಿಂದ ಕೆಲವು ಒಡವೆಗಳನ್ನು ತೆಗೆದು ಅಲಂಕಾರ ಮಾಡಿದಳು. ಒಡವೆಯೆಲ್ಲಾ ಅವಳದ್ದು; ಅವಳಿಗೆ ಅವಳ ತಾಯಿಯ ಕಡೆಯಿಂದ ಬಂದದ್ದು. ಲಲಿತನ ತಾಯಿ ಅವರ ತಂದೆಗೆ ಒಬ್ಬಳೇ ಮಗಳಾಗಿದ್ದಳಾಗಿ ಅವರ ಸಂಪತ್ತಿಗೆಲ್ಲಾ ಅವಳೇ ಅಧಿಕಾರಿಯಾಗಿದ್ದಳು. ಅವರು ಮಗಳಿಗೆ ಬೇಕಾದ ಹಾಗೆ ಒಡವೆ ವಸ್ತ್ರಗಳನ್ನು ಕೊಟ್ಟಿದ್ದರು. ತಾಯಿ ಹೋದಾಗಿನಿಂದ ಅವೆಲ್ಲಾ ಲಲಿತನ ಬಳಿಯೇ ಇದ್ದುವು.

ಹುಡುಗಿ ಲಕ್ಷಣವಾಗಿ ಅಲಂಕಾರ ಮಾಡಿಕೊಂಡು ಅದರ ಭಾರದಿಂದ ಬಳುಕುತ್ತ ತಾಯಿಗೆ ತೋರಿಸಲು ಹೋದಳು. ಲಲಿತ ಸಂತೋಷದಿಂದ ಅದನ್ನೇ ನೋಡುತ್ತ ಹಿಗ್ಗಿನಲ್ಲಿ ಮೈಮರೆತು ನಿಂತಿದ್ದಳು. ಆ ದಿನ ಚಿಕ್ಕಮ್ಮನಿಗೆ

ಏನು ಕೋಪವಿತ್ತೋ, ದರದರನೆ ಹುಡುಗಿಯ ಕೈ ಹಿಡಿದು ಎಳೆದು ಕೊಂಡು ಬಂದು ಒಡವೆಯನ್ನೆಲ್ಲಾ ಲಲಿತನ ಮುಂದೆ ಎಸೆದು—"ತಗೋ ಮಹಾರಾಣಿ. ನಿನ್ನ ಧರ್ಮ ನನಗೇನೂ ಬೇಡ ತಿರುಕಿಯ ಮಗಳು ತಿರುಕಿಯಂತೆ ಇರಲಿ. ನಿನ್ನ ಜಂಬ ತೋರಿಸಬೇಕಾದರೆ ನೀನೇ ಅವನ್ನೆಲ್ಲಾ ಇಟ್ಟುಕೊಂಡು ಮೆರಿ . . . . " ಎಂದು ಹೇಳಿ ಗುಳುಗುಳುನೆ ಅಳುತ್ತಾ ಒಳಗೆ ಹೋದಳು.

ಲಲಿತ ಬೆಪ್ಪಾಗಿ ಹೋದಳು. ಒಂದು ಕ್ಷಣ ಅವಳಿಗೆ ಏನೂ ತೋರಲಿಲ್ಲ. ತನ್ನ ಸಂಪತ್ತಿನ ಮೇಲೆ ಚಿಕ್ಕಮ್ಮ ಉರಿದು ಬೀಳುತ್ತಿದ್ದುದು ಅವಳಿಗೇನೂ ಹೊಸದಲ್ಲ. ಅದಕ್ಕೇ ಅವಳು ಎಂದೂ ವಿಶೇಷ ಆಡಂಬರವನ್ನು ತೋರಿಸು ತ್ತಿದ್ದಿಲ್ಲ. ತೀರಾ ಸಾಧಾರಣವಾದ ಬಟ್ಟೆಗಳನ್ನು ಉಡುತ್ತಿದ್ದಳು. ಕೈಲಿ ಎರಡೆರಡು ಚಿನ್ನದ ಬಳೆಗಳು - ಕೊರಳಲ್ಲಿ ಒಂದೆಳೆ ಚೈನು—ಇಷ್ಟೇ ಅವಳು ಉಪಯೋಗಿಸುತ್ತಿದ್ದುದು! ಈ ದಿನ ಯಾರ ಗ್ರಹಚಾರವೊ . . . ಮಗುವಿಗೆ ಹಾಕಬೇಕೆಂದು ತೋರಿ ಹಾಕಿದಳು. ಅದೂ ತಪ್ಪಾಗಬಹುದೆಂಬ ಎಣಿಕೆ ಅವಳ ಮನಸ್ಸಿಗೆ ಬಂದಿರಲಿಲ್ಲ.

ಲೀಲು ಒಂದೇ ಸಮ ಅಳುತ್ತಿದ್ದಳು. ತಾಯಿಯ ಏಟು—ಒಡವೆಯ ನ್ನೆಲ್ಲಾ ಬಲವಂತದಿಂದ ಕಿತ್ತದ್ದು ಎರಡೂ ಸೇರಿ ಅದರ ಹೂವಿನ ಹೃದಯ ಹಿಚುಕಿದಂತಾಗಿತ್ತು. ಇದನ್ನೆಲ್ಲಾ ನೋಡುತ್ತ ಒಳಗೆ ಕುಳಿತಿದ್ದ ರಾಯರು ಸರಸರನೆ ಹೊರಗೆ ಬಂದು ಅಳುತ್ತಿದ್ದ ಮಗುವಿಗೆ ತಾವೂ ಒಂದೇಟು ಹಾಕಿದರು. ಲಲಿತನಿಗೆ ಆ ಏಟು ತನ್ನ ಕೆನ್ನೆಗೆ ಬಿದ್ದಂತೆ ತೋರಿತು. ರಾಯರು ಒಡವೆಯನ್ನೆಲ್ಲಾ ತೆಗೆದು ಮಗಳ ಕೈಗೆ ಕೊಟ್ಟು—"ಏನೇ ಲಲಿತಾ —ನಿನ್ನ ಅಧಿಕ ಪ್ರಸಂಗಿತನ? ಯಾರು ನಿನಗೆ ಒಡವೆ ಹಾಕಲು ಹೇಳಿದವರು? ಮನೆಯಲ್ಲಿ ಇರುವ ರಗಳೆ ಸಾಲದೆಂದು ನೀನು ಬೇರೆ ಕೊಳ್ಳಿ ಇಡತೀಯೇನು?" ಎಂದು ಕೂಗಾಡಿದರು

ಲಲಿತ ಏನೂ ಹೇಳಲಿಲ್ಲ. ಮಾತಾಡದೆ ಒಡವೆಯನ್ನು ಎತ್ತಿಕೊಂಡು ಒಂದು ಸಲ ದೈನ್ಯದಿಂದ ಅವರ ಕಡೆ ನೋಡಿ ಒಳಗೆ ಹೋದಳು. ಆ ನೋಟ ಈಟಿಯಂತೆ ಅವರ ಎದೆಯನ್ನು ಇರಿಯಿತು. ತಮ್ಮ ಹೇಡಿತನಕ್ಕಾಗಿ ನಾಚಿ ದರು. ಮಗಳದ್ದು ತಪ್ಪಿಲ್ಲವೆಂದು ಅವರಿಗೆ ಗೊತ್ತಾಗಿತ್ತು. ಬೆಳಗಿನಿಂದಲೂ ಲಲಿತನ ಕೋಣೆಯನ್ನು ತಮ್ಮನಿಗೆ ಬಿಡಿಸಿಕೊಡುವ ಸಲುವಾಗಿ ಯಜಮಾನಿ

ಯೊಡನೆ ಯುದ್ಧಮಾಡಿ ಹಣ್ಣಾಗಿ ಹೋಗಿದ್ದರೂ ರಾಯರು ಈ ಸಲ ಕೊನೆಗೊಮ್ಮೆ ವಿಜಯಿಗಳಾಗಿದ್ದರು. ಆದರೆ ಆ ವಿಜಯದಿಂದ ಅವರಿಗೆ ಹೆಂಡತಿಯ ಉರಿ ಮುಖವನ್ನು ನೋಡುವುದೊಂದೇ ಆಗಿತ್ತು. ಬೇಸರ ಗೊಂಡು ಕುದಿಯುತ್ತಿದ್ದ ರೋಷ ಯಾವುದೋ ರೂಪದಲ್ಲಿ ಹೊರ ಬಂದಿತ್ತು. ಇನ್ನು ಮನೆಯಲ್ಲಿದ್ದರೆ ಹೆಚ್ಚು ಮಾತಿಗೆ ಕಾರಣವಾಗುವುದೆಂದು ರಾಯರು ಕೋಟು ತಗುಲಿಸಿ ಹೊರಗೆ ಹೋದರು. ಲೀಲು ಅಳುತ್ತ ಲಲಿತನ ತೊಡೆಯ ಮೇಲೆ ನಿದ್ದೆಹೋದಳು.

ಲಲಿತ ಅದನ್ನೇ ನೆನೆಯುತ್ತ ಹೆಚ್ಚು ಮಾತು ಬೆಳೆಸದೆ ತನ್ನ ಕೆಲಸದಲ್ಲಿ ಮುಳುಗಿದ್ದಳು. ಲೀಲು ಅದನ್ನು ಪೂರ್ಣವಾಗಿ ಮರೆತು ಮಾವ ಬರುವ ನೆಂದು ಕುಣಿಯುತ್ತಿದ್ದಳು.

'ಮಾವ' ಬಂದ. ಲೀಲು ಹಕ್ಕಿಯಂತೆ ಹಾರಿ ಕುಣಿದಳು. ಲಲಿತ ಕಿಟಿಕಿಯಿಂದ ಬಗ್ಗಿ ನೋಡಿದಳು. ಆದರೆ ಅಲ್ಲಿ ಬಂದವನು ಲಲಿತ ಕಲ್ಪಿಸಿ ಕೊಂಡಿದ್ದ ಚಿತ್ರಕ್ಕೆ ತೀರ ವಿರುದ್ಧವಾಗಿದ್ದ! ಕಚ್ಚೆಯ ಪಂಚೆ—ಕನ್ನಡಕ . . . ಕಲಾವತ್ತಿನ ಪೇಟ—ಚಕ್ಕಿನ ಕೋಟಿನ ಮೇಲೆ ನೇತಾಡುತ್ತಿದ್ದ ಬೆಳ್ಳಿಯ ಗಡಿಯಾರದ ಚೈನು . . . . ಅದರ ಮೇಲೆ ಜೇಬಿನ ತುದಿಯಿಂದ ಇಣಕುವ ಕೊಳೆಯಾದ ಕೈ ವಸ್ತ್ರ . . . ಇವೆಲ್ಲಾ ಅವಳ ಮನಸ್ಸಿನ ಮುಂದೆ ಸುಳಿ ದಿದ್ದುವು. ಅವಳು ಎಂದೋ ಎಲ್ಲೋ ನೋಡಿದ್ದ ಯಾವನಾದರೊಬ್ಬ ಒಳ್ಳೆಯ ಮಧ್ಯವಯಸ್ಸಿನ ಮನುಷ್ಯನ ನೆನಪಾಗಿರಬಹುದು ಅದು! ಲಲಿತ ಹೇಗೋ ಅದಕ್ಕೂ ಮಾವನಿಗೂ ಗಂಟು ಹಾಕಿ ಬಿಟ್ಟಿದ್ದಳು!

ಲೀಲು ರಟ್ಟೆ ಹಿಡಿದು ಎಳೆಯುತ್ತ ಒಳಗೆ ಕರೆತಂದ ಮಾವ ಲಲಿತನಿಗಿಂತ ಐದಾರು ವರ್ಷ ದೊಡ್ಡವನಿರಬಹುದು—ಅಷ್ಟೆ! ದೊಗಳೆ ಚಲ್ಲಣ, ಬಿಳಿಯ ಷರಟು ಧರಿಸಿ ತಿದ್ದಿ ಕ್ರಾಪು ತೀಡಿದ್ದ. ಲಲಿತನ ಊಹೆಯಲ್ಲಿ ಒಂದು ಮಾತ್ರ ನಿಜವಾಯಿತು. ಗುರು ಮೂರ್ತಿ ಮತ್ತು ಚಿಕ್ಕಮ್ಮ ಒಬ್ಬ ತಾಯಿಯ ಮಕ್ಕ ಳಾದರೂ ಅವರಿಬ್ಬರ ಸ್ವಭಾವವೂ ತೀರ ಭಿನ್ನವಾಗಿತ್ತು ಅವನು ತುಮಕೂರಿ ನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಬಿ. ಎ.ಗೆ ಸೇರಲು ಮೈಸೂರಿಗೆ ಬಂದಿದ್ದ.

x x x x

"ಏನಕ್ಕ—ಇದು? ಬೆಳಗ್ಗೆ ಏಳುವ ಹೊತ್ತಿಗೇ ರಾಮಾಯಣ? ಅಷ್ಟು ಹೊತ್ತಿನಿಂದ ಒಂದೇ ಸಮ ಹಾರಾಡ್ತಿದೀಯಲ್ಲ . . . . . ?"

"ಏನೂಂತ ಹೇಳಲಿ ಗುರು . . . . ನನ್ನ ಪ್ರಾರಬ್ಧ ಕರ್ಮ! ಅಪ್ಪ ನನ್ನ ಕಲ್ಲು ಕಟ್ಟಿ ಕೆರೆಗೋ ಭಾವಿಗೋ ಹಾಕಬಾರದಾಗಿತ್ತೆ . . . . ? ಈ ಮನೆಗೆ ಕೊಡೋ ಬದಲು . . . . ."

"ಅಲ್ಲ . . . ಸ್ವಲ್ಪ ತಾಳು; ಅಳಕ್ಕೇ ಮೊದಲು ಮಾಡಿಬಿಟ್ಟೆಯಲ್ಲ . . . ಈಗ ಅಂಥಾದ್ದು ಏನಾಯ್ತು ಹೇಳಬಾರ್ದೆ . . . ?"

"ಅಲ್ಲ ಕಣೋ . . . . ಕಾಫಿಯೆಲ್ಲಾ ಆರಿಹೋಯ್ತು. ಆಗಿನಿಂದ ಕರೀತಿದೇನೆ ಆ ಮಹಾರಾಣೀನ; ಬರಬಾರದೇ? ಲೀಲುಗೆ ಮಡಿ ಉಡಸ್ತಾ ಕೂತಿದಾಳೆ. ಇಷ್ಟು ಹೊತ್ತಿಗೇ ಮಡೀಗೆ ಏನು ಅವಸರ . . . . ?"

"ಅಷ್ಟೇ ತಾನೇ . . . . ಅದಕ್ಯಾಕ ಇಷ್ಟು ಅಬ್ಬರ?"

"ನಿನಗೇನು ತಿಳಿಯುತ್ತೆ ಹೇಳು . . . . ನನ್ನ ಕಷ್ಟ? ಕಾಫಿ ಆರಿ ಹೋದರೆ ದೂರು ಅಪ್ಪನ ವರೆಗೂ ಹೋಗುತ್ತೆ . . . ."

"ಆ ಅಪ್ಪನ ಕೈಲಿ ನಿನ್ಮೇಲೆ ದೂರು ಹೇಳೂದೂ ಈ ಗೋಡೆಗೆ ಹೇಳೋದೂ ಎರಡೂ ಒಂದೇ! ಆ ಮಾತಿರಲೀ . . . . ಕಾಫಿ ಆರಿಹೋಗೋದಿರಲಿ . . . . ನೀನು ಮೂರು ದಿವಸ ಕಾಫಿ ಕೊಡದೇ ಇದ್ದರೂ ಅವಳು ಯಾರ ಹತ್ತಿರವೂ ದೂರಲ್ಲ! ನಿನ್ನ ಕೂಗಾಟದಿಂದ ನೆರೆ ಮನೆಯವರಿಗೆ ತಿಳಿಯುಬಹುದು . . . . !"

"ಹೌದಪ್ಪ . . . ನಾನೇ ಕೆಟ್ಟ ಬಾಯಿನವಳು. ಸಂಬಳ ತಿನ್ನುವ ಆಳುಗಳು ಕೂಡ ಅವಳು ಒಳ್ಳೇಳು — ನಾನು ಕೆಟ್ಟೋಳು ಅಂತ ಹಿಂದೆ ಮುಂದೆ ಪಿಸುಗುಟ್ಟುತ್ತಿದ್ದರು. ನನ್ನ ಸ್ವಂತ ತಮ್ಮ ನೀನೊಬ್ಬ ಬಾಕಿ ಇದ್ದೆ . . "

"ನೋಡಿದೆಯಾ . . . ಸಿಟ್ಟು ಮಾಡ್ಕೋ ಬೇಡ. ನಿನ್ನ ಒಳ್ಳೇಗಕ್ಕೇ ನಾನು ಹೇಳೋದು. ಹಗಲೂ ರಾತ್ರಿ ನೀನು ಅಳೋದು ನೋಡಿ ನನಗೆ ಸಂಕಟವಾಗತ್ತೆ. ನಿನಗೆ ಬಂದಿರು ಕಷ್ಟವೇನು? ದೇವರು ಉಣ್ಣಾಕ್ಕೆ ಉಡಲಿಕ್ಕೆ ಕೊಟ್ಟಿದಾನೆ. ಭಾವ . . . ನೀನು ಇಟ್ಟಗೆರೆ ದಾಟಲ್ಲ. ಇತರರ ಮನೇಲಿ ಮಲ ಮಕ್ಕಳು ಆಡುವುದನ್ನು ನೋಡಿದರೆ . . . ನೀನು ಪುಣ್ಯ ಮಾಡಿದ್ದೆ ಎಂತ ಇಟ್ಟುಕೋ ಬೇಕು . . ."

"ಆಹಾ . . . ಪುಣ್ಯವಲ್ಲವೇ . . . ಮೂರು ಹೊತ್ತೂ ಆ ಮುದ್ದು ಮುಖ ಎದುರಿಗೆ ಕೂರಿಸಿಕೊಂಡು ಇರೋದೇನು ಸ್ವಲ್ಪ ಪುಣ್ಯವೇ . . . !"

"ಅಲ್ಲ . . . ಕಣೇ . . . ನಾನೂ ಅದೇ ಹೇಳ್ತಿರೋದು. ಓದು ಹುಡುಗೀನ ಶಾಲೆ ಬಿಡಿಸಿ ಮುಂದೇಕೆ ಕೂರಿಸಿ ಕೊಂಡಿದ್ದೀ? ಅವಳು ಮನೇಲಿದ್ದು ನಿನಗೇನು ಮಾಡ್ಬೇಕು. ಭಾವನ ಮನಸ್ಸಿನಲ್ಲಿ ಓದಿಸಬೇಕಂತ ಇದೆ. ಅತ್ತಲಾಗೆ ದಬ್ಬಬಾರದೇ . . . ನಿನಗೂ ಕಷ್ಟ ಕಡಿಮೆಯಾಗುತ್ತೆ . . .!"

"ಹೋಗಲಿ . . . ಮಹಾರಾಯ . . ನಾನೇಕೆ ಬೇಡಾ ಅನ್ನಲಿ . . .? ಅವಳಿದ್ದು ನನಗೇನು ಉದ್ಧಾರ? ಲೀಲುವಾದರೂ ಅವಳ ಸಹವಾಸ ತಪ್ಪಿ ಒಳ್ಳೆಯದಾರಿಗೆ ಬರಲಿ . . . !"

x x x x

"ಲಲಿತು. . . ಯಾಕೆ ಪೆಚ್ಚಾಗಿದ್ದೀ . . . ಸ್ಕೂಲು ಬೇಜಾರಾಯಿತೆ . . .?"

"ಇಲ್ಲ . . . ಬೇಜಾರಿಲ್ಲ . . . ಯಾಕೋ ನನಗೆ ಸರಿಯಾಗಿ ಅರ್ಥವಾಗ ಲಿಲ್ಲ. ಪಾಠವೆಲ್ಲಾ ಮರೆತಂತೆ ಆಗಿದೆ."

"ಒಂದು ವರ್ಷದಿಂದ ಬಿಟ್ಟು ಹೋಗಿತ್ತು. ಅದರಿಂದ ಹಾಗಾಗಿರ ಬಹುದು. ಅಲ್ಲದೆ ಹೈಸ್ಕೂಲು ಪಾಠ ಮೊದಮೊದಲು ಕಷ್ಟವಾಗೇ ಕಾಣಿ ಸುತ್ತೆ. ಅಷ್ಟಕ್ಕೇ ಹೆದರ ಬಾರದು. ಪುಸ್ತಕ ತೆಗೆದುಕೊಂಡು ಬಾ. ನಿನಗೆ ತಿಳೀದೇ ಇದ್ದದ್ದು ನಾನು ಹೇಳಿ ಕೊಡ್ತೇನೆ. ಲೀಲೂ. . . ನೀನೂ ಬಾ . . . ಸ್ಲೇಟು ತಗೊಂಡು . . . ಅಕ್ಷರ ಬರಿಸ್ತೇನೆ . . ."

"ಲೋ . . . ಗುರು ಮೂರ್ತಿ . . . ಇನ್ನು ಇವರಿಗೆ ಹೇಳಿಕೊಡು ಅವಾಂತರದಲ್ಲಿ ನಿನ್ನ ಪಾಠಕ್ಕೆ ತೊಂದರೆ ಮಾಡಿಕೋ ಬೇಡಪ್ಪ . .!"

"ಇಲ್ಲಮ್ಮ . . . ಆ ಯೋಚ್ನೆ ನನಗಿರಲಿ!"

"ಇದೇನು ಬಂತಕ್ಕ ಪುನಃ? ಮನೆಗೆ ಬರೋ ಹೊತ್ತಿಗೆ ಒಳ್ಳೆ ಧೂಮ ಕೇತುವಿನ ಹಾಗೆ ಆಗಿದ್ದೀಯಲ್ಲ! ಏನು ಸಂದರ್ಭ?"

"ಹೋಗಪ್ಪ ನಿನ್ನ ಪಾಡಿಗೆ. ನನ್ನ ಕಷ್ಟವ್ಯಸನ ಇದ್ದೇ ಇದೆ. ಅದನ್ನು ತಗೊಂಡು ನೀನೇನು ಮಾಡ್ತೀ . . .?"

"ನೋಡು . . . ಇದೆಲ್ಲಾ ಚೆನ್ನಾಗಿಲ್ಲ. ಭಾವಯ್ಯ ಎಲ್ಲೋ ಧರ್ಮದ ಗೊಡ್ಡು. ಅದರಿಂದ ನೀನಾಡಿದ ಆಟಾನೆಲ್ಲ ಸಹಿಸಿಕೊಂಡ. ಸುಮ್ಮನಿದಾರೆ. ನಾನಾಗಿದ್ದರೆ . . . ಮಾತ್ರ . . . ನೋಡು ಅದನ್ನೇ ಹೇಳಬೇಕೆಂದು ಬಂದೆ. ನನಗೆ ಇಲ್ಲಿರಲು ಸಾಧ್ಯವಿಲ್ಲ. ಒಂದು ರೂಮು ನೋಡಿದೇನೆ . . ನಾಳೆ

ನಾಡಿದ್ದರಲ್ಲಿ ನನ್ನ ಸಾಮಾನು ತೆಗೆದುಕೊಂಡು ಅಲ್ಲಿಗೇ ಹೋಗುತ್ತೇನೆ. ವಾರವಾಡಿಕೊಂಡು ಊಟ ಮಾಡಿದರೂ ಚಿಂತೆಯಿಲ್ಲ . . ."

"ಯಾಕೋ . . ನಿನಗೆ ಇಲ್ಲೇನು ಕಡಿಮೆಯಾಗಿದೆ . . . ?"

"ನೋಡು . . . ನಿನ್ನ ಮನೆಯಲ್ಲಿ ಊಟ ತಿಂಡಿಗೆ ಕಡಿಮೆಯಿಲ್ಲ. ನಮ್ಮ ಮನೆಗಿಂತಲೂ ಆ ವಿಚಾರದಲ್ಲಿ ಹೆಚ್ಚು ಅನುಕೂಲವಾಗಿದೆ. ನೀನು ದಯ ಮಾಡಿ ಎರಡು ಬಟ್ಟೆಯನ್ನೂ ಹೊಲಿಸಿ ಕೊಟ್ಟಿದ್ದೀ . . . ಅದನ್ನೆಲ್ಲಾ ನಾನು ಇಲ್ಲವೆನ್ನುವುದಿಲ್ಲ. ಆದರೆ ಯಾರೂ ಈ ಮನೆಯಲ್ಲಿ ತಮ್ಮ ವ್ಯಕ್ತಿತ್ವವನ್ನು ಉಳಿಸಿಕೊಂಡು ಇರಲು ಸಾಧ್ಯವಿಲ್ಲ. ನೀನು ಹಾಕಿದ್ದನ್ನು ತಿಂದು ನಿರ್ಜೀವ ಬೊಂಬೆಗಳಂತೆ ಬೇಕಾದರೆ ಇರಬಹುದು: ನಿನ್ನ ಗಂಡ ನಿನ್ನ ಮಕ್ಕಳು ಅವರಿಗಂತೂ ಯತ್ನವಿಲ್ಲ . . . ನನಗೇನು ಹಣೇಬರಹವೇ? ಇಲ್ಲಿಗೆ ಬಂದಾಗಿನಿಂದ ಈ ರಗಳೆ ಕೇಳಿ ತಲೆ ಚಿಟ್ಟು ಹಿಡಿದು ಹೋಗಿದೆ . . ."

"ಗುರು . . . ಸುಮ್ಮನೆ ಕೋಪ ಮಾಡಬೇಡಪ್ಪ. ನನಗೇನು ಸಂತೋಷವಾಗಿರಲು ಆಸೆಯಿಲ್ಲವೆ? ನಾನೂ ಹೀಗೇ ಇರಬೇಕೆಂತ ಎಷ್ಟೋ ಸಾಹಸ ಮಾಡ್ತೇನೆ. ಅಷ್ಟರಲ್ಲಿ ಏನಾದರೂ ರಗಳೆ ತೆಗೆದು ಬಿಡ್ತಾಳೆ . . ."

"ಚಿಕ್ಕಮ್ಮ . . . ನಾನು ನಿನಗೆ . . ."

"ಸಾಕು ಸುಮ್ಮನಿರೆ . . ."

"ಏನಾಯ್ತಕ್ಕ . . . ಲಲಿತು ಏನು ಮಾಡಿದಳು . . . ?

"ನೋಡು . . . ಅವರಮ್ಮನ ಸೀರೆನೆಲ್ಲಾ ನನಗೆ ಕೊಡಕ್ಕೆ ಬರ್ತಾಳಲ್ಲ . . . ಎಷ್ಟು ಅಹಂಕಾರ . . . ?"

"ಚಿಕ್ಕಮ್ಮ . . ಅವೆಲ್ಲಾ ಹದಿನೆಂಟು ಮೊಳದ್ದು ನನಗೆ ಆಗಲ್ಲ. ಅದರಿಂದ ಹೇಳಿದೆ. ನೀನು ಅದನ್ನು ತಪ್ಪಾಗಿ ಎಣಿಸುವೆಯೆಂದು ತಿಳೀಲಿಲ್ಲ . . . ?

"ಇಷ್ಟೇನೆ . . . ! ಅದರಲ್ಲಿ ನನಗೆ ತಪ್ಪೇನೂ ಕಾಣಿಸಲಿಲ್ಲ. ಎಲ್ಲಾ ಹೊಸಸೀರೆ; ಒಳಗೇ ಇದ್ದರೆ ನುಶಿ ಹಿಡಿದು ಹೋಗುತ್ತೆ! ಸುಮ್ಮನೆ ಉಟ್ಟುಕೋ . . . ನೋಡುವುದಕ್ಕೂ ಚೆನ್ನಾಗಿರುತ್ತೆ."

"ಏನೋಪ್ಪ . . . ನಿನಗೆ ಅವಳು ಮಾಡೋದೆಲ್ಲಾ ಸರಿ! ನೋಡು . . . ಆಗಲೇ ಲೀಲೂನು ಕರಕೊಂಡು ತಿರುಗಕ್ಕೆ ಹೊರಟಳಲ್ಲ . . . ಅದೂ

ಸರಿಯೇ . . . ? ಹಾಳು ಹುಡುಗಿ ಅದನ್ನೇ ಅಭ್ಯಾಸಮಾಡಿಕೊಂಡು ನಿತ್ಯವೂ ಸಂಜೆಯಾಗುತ್ತಲೇ ಹೋಗೋಣಾಂತ ಹಟ ಮಾಡ್ತಾಳೆ . . . ! "

" ಅಲ್ಲ . . . ಅನುಕೂಲಸ್ಥರ ಮನೇಲಿ ಮಕ್ಕಳನ್ನು ಸಂಜೆ ತಿರುಗಿಸಕ್ಕೇ ಅದೇ ಕೆಲ್ಸವಾಗಿ ಆಳುಗಳನ್ನು ಇಡ್ತಾರೆ. ಅಂಥಾದ್ದರಲ್ಲಿ ಲಲಿತು ತಾನೇ ಮಗುಗೆ ಬಟ್ಟೆಬರೆ ಹಾಕಿ ತಿರುಗಿಸಕ್ಕೆ ಕರೆದುಕೊಂಡು ಹೋದರೆ ನಿನಗೇ ಕೆಲ್ಸ ಕಡಿಮೆಯಾಯ್ತು. ಎಲ್ಲಿ ತಾನೇ ಹೋಗ್ತಾರೆ . . . ? ಇಲ್ಲೇ ಮನೆ ಹಿಂದುಗಡೆ ಪಾರ್ಕಿನಲ್ಲಿ ಒಂದು ಗಳಿಗೆ ಕೂತಿದ್ದು ಬರ್ತಾರೆ! ಸ್ಕೂಲಿನಿಂದ ಬಂದ ಹುಡುಗಿ ಬೇಜಾರುಪಡದೆ ಕರದುಕೊಂಡು ಹೋಗ್ತಾಳಲ್ಲ . . . ನೀನು ನ್ಯಾಯವಾಗಿ ಸಂತೋಷ ಪಡ್ಬೇಕು . . . "

x x x x

" ಗುರುಮೂರ್ತಿ . . . . ಗುರೂ . . . ಸ್ವಲ್ಪ . . "

" ಏನಮ್ಮಾ . . . . ಈಗ ತಾನೆ ಮೇಲೆ ಬಂದಿದೇನೆ. ಏನಾಗ್ಬೇಕು . . ? ".

" ಯಾರೋ ನಿಮ್ಮ ಭಾವನವರ ಸ್ನೇಹಿತರು ಬಂದಿದಾರೆ . . . ಈ ಕಾಫಿ ಸ್ವಲ್ಪ ಕೊಟ್ಟು ಬಾ ನಮ್ಮಪ್ಪ! ಪುನಃ ಕೂಗಲ್ಲ . . . ".

" ಲಕ್ಷಣವಾಯ್ತು . . . ! ಅದಕ್ಕೂ ನಾನೇ ಮಹಡಿ ಇಳಿದು ಬರಬೇಕೆ . . . ? ಯಾಕೆ . . . ಕೆಳಗೆ ಲಲಿತ ಇದಾಳಲ್ಲ . . . ಅವಳ ಕೈಲಿ ಕಳಿಸಬಾರದೆ . . . ? "

" ಎಲ್ಲಾದರೂ ಉಂಟೇನೋ . . . . ಗಂಡಸರಿಗೆಲ್ಲಾ . . . "

" ಅವರ ತಂದೆ ಸ್ನೇಹಿತರಿಗೆ ಕಾಫಿ ಕೊಟ್ಟರೆ ತಪ್ಪೆ . . ? ನಾಳೆಯಿಂದ ಅವಳಿಗೆ ಘೋಷಾ ಹಾಕಿ ಮನೆಯಲ್ಲಿ ಕೂರಿಸು . . . ! ".

x x x x

ಕ್ಲಬ್ಬಿನ ವಾರ್ಷಿಕೋತ್ಸವ. ಮೂರು ದಿವಸಗಳಿಂದ ವಿವಿಧ ಸಂಸ್ಥೆಗಳು ಅಲ್ಲಿ ನಡೆಯುತ್ತಿದ್ದ ಮೇಲಾಟಗಳಲ್ಲಿ ಭಾಗವಹಿಸುತ್ತಿದ್ದುವು. ಟೆನ್ನಿಸ್ ಆಟ ನಡೆಯುತ್ತಿತ್ತು. ಪಕ್ಕದಲ್ಲಿ ಹಾಕಿದ್ದ ಬೆಂಚಿನಮೇಲೆ ಲಲಿತ ಕುಳಿತಿದ್ದಳು. ಪಕ್ಕದಲ್ಲಿ ರಾಯರು. ಆ ದಿನದ ಆಟದಲ್ಲಿ ಕಾಲೇಜಿನ ಪರವಾಗಿ ಆಡಿ ಲಲಿತ ಮತ್ತು ಅವಳ ಗೆಳತಿ ಗೆದ್ದಿದ್ದರು. ಮುಂದಿನ ಆಟ ನಡೆಯುತ್ತಿತ್ತು.

ಇವರೆಲ್ಲಾ ಒಳಗೆಹೋಗಿ ಕಾಫಿ ತೆಗೆದುಕೊಂಡರು. ಉತ್ಸಾಹ ತುಂಬಿತ್ತು. ಎಲ್ಲರೂ ಅವಳನ್ನು ಅಭಿನಂದಿಸುವವರೇ . . . ! ರಾಯರು ಹೆಮ್ಮೆಯಿಂದ ತಲೆ ಎತ್ತಿ ಕುಳಿತಿದ್ದರು. ಆದರೆ ಲಲಿತ ಮಾತ್ರ ಮೌನವಾಗಿ ಕುಳಿತಿದ್ದಳು. ಆ ಸುಖದ ಸಮಯದಲ್ಲೂ ಅವಳ ಮನಸ್ಸು ಬೇರೆ ಏನನ್ನೋ ನೆನಸುತ್ತಿತ್ತು. ಅವಳ ಮೊದಲಿನ ಬಾಳಿಗೂ ಈಗಿನ ಸ್ಥಿತಿಗೂ ಎಷ್ಟು ಅಂತರ . . ? ಯಾವುದೋ ಕಾಣದ ಕೈ ಅವಳ ಮನೆಯಲ್ಲೂ, ಅವಳ ಬಾಳಿನಲ್ಲೂ ಅಸಾಧ್ಯವಾದ ಬದಲಾವಣೆಯನ್ನು ಮಾಡಿದೆ! ಪಂಜರದಲ್ಲಿದ್ದ ಹಕ್ಕಿಯನ್ನು ಬಾಗಿಲು ತೆಗೆದು ಹೊರಗೆ ಬಿಟ್ಟಂತಾಗಿತ್ತು. ಆ ಹೊತ್ತಿನಲ್ಲಿ—ಕ್ರಮ ಕ್ರಮವಾಗಿ ಯಾರಿಗೂ ತಟಕ್ಕನೆ ತಿಳಿಯದಂತೆ ನಡೆದ ಬದಲಾವಣೆಯನ್ನೆಲ್ಲಾ ನೆನಯದೆ ಇರಲು ಸಾಧ್ಯವಾಗಲಿಲ್ಲ.

ತನ್ನ ತಂದೆ ತನಗೆ ಮನೆಯಲ್ಲಿ ಕಲ್ಪಿಸಿಕೊಡಲಾಗದೇ ಇದ್ದ ಸ್ಥಾನವನ್ನು ಗುರುಮೂರ್ತಿ ತಂದುಕೊಟ್ಟಿದ್ದಾನೆ. ಕೈಲಾಗದೆ ಕಣ್ಣೀರು ಸುರಿಸುತ್ತ ಮನೆಯಲ್ಲಿದ್ದವಳನ್ನು ಬೆಳಕಿಗೆ ತಂದು ಕಾಲೇಜಿಗೆ ಹತ್ತಿಸಿದ್ದಾನೆ! ಅದನ್ನು ಅವಳು ಮರೆಯುವುದೆಂತು? ಅವನು ಓದುವುದಕ್ಕೆ ಬಂದು ಅವರ ಮನೆಯನ್ನು ಪ್ರವೇಶಿಸಿದ ದಿನ ಅವಳ ಬಾಳಿನಲ್ಲಿ ಹೊಸ ಯುಗ! ಅಂದಿನ ಒಂದೊಂದು ವಿಷಯವೂ ಪುನಃ ಅವಳ ಮನಸ್ಸಿನ ಎದುರಿಗೆ ಬಂತು. ಆ ಹೊತ್ತಿನಲ್ಲಿ ಅವಳ ದೇಹದ ಪ್ರತಿಯೊಂದು ಕಣವೂ ಅವನ ವಿಷಯವಾಗಿ ಕೃತಜ್ಞತೆಯಿಂದ ತುಂಬಿತ್ತು. ಗುರುಮೂರ್ತಿ ತನ್ನ ಆಟವನ್ನು ಮುಗಿಸಿಕೊಂಡು ಬಂದು "Congratulations . . . . ಲಲಿತ" ಎಂದ. ಅವನಿಗೆ ತಾನು ಗೆದ್ದುದಕ್ಕಿಂತ ಹೆಚ್ಚು ಸಂತೋಷವಾಗಿತ್ತು

"ನನಗೆ ಮೊದಲೇ ಗೊತ್ತಿತ್ತು . . . . !" ಗುರು ಮೂರ್ತಿ ಅವಳ ಆಟದ ವಿಚಾರದಲ್ಲಿ ತನಗಿದ್ದ ನಂಬಿಕೆಯನ್ನು ಸೂಚಿಸಿದ.

ಲಲಿತ ಏನೋ ಗೊಣಗಿದಳು. ಅದು ಅವನಿಗೆ ಕೇಳಿಸಿತೋ ಇಲ್ಲವೋ . . . . ? ಆದರೂ ಹತ್ತು ಮಾತುಗಳು ಹೇಳಲಾಗದ್ದನ್ನು ಅವಳ ಒಂದು ನೋಟ ನುಡಿದಿತ್ತು.

"ಇನ್ನೂ . . . ಫೈನಲ್ಸ್ ಇದೆಯಲ್ಲ!" ರಾಯರು ಬಾಯಿಹಾಕಿದರು.

x x x x

ಫೈನಲ್ಸ್ ಆಯಿತು; ಗುರುಮೂರ್ತಿ ನುಡಿದಿದ್ದಂತೆ ಆ ದಿನವು ವಿಜಯ ಮಾಲಿಕೆ ಲಲಿತನ ಕೊರಳಿಗೇ ಬಿತ್ತು. ಅದರ ಜೊತೆಯಲ್ಲೇ ಅನಿರೀಕ್ಷಿತವಾಗಿ ಒಂದು ಹೊಸ ಗೆಳೆತನವು ಗಂಟು ಬಿತ್ತು. ಶ್ರೀನಿವಾಸಮೂರ್ತಿ ಆಟಕ್ಕಾಗಿ ಬೆಂಗಳೂರಿನಿಂದ ಬಂದಿದ್ದ. ಅವಳ ಆಟದ ಬೆಡಗನ್ನು ನೋಡಿ ಬೆರಗಾದವರಲ್ಲಿ ಅವನೂ ಒಬ್ಬ. ಅವಳನ್ನು ಅಭಿನಂದಿಸುವುದಕ್ಕೆ ಬಂದವನು ಮಾತಾಡುತ್ತ ಅಲ್ಲೇ ಕುಳಿತ. ರಾಯರಿಗೂ ಆ ದಿನ ಮಾತಾಡುವ ಹುರುಪಿತ್ತು. ಮಾತಿನ ಸಂದರ್ಭದಲ್ಲಿ ಶ್ರೀನಿವಾಸಮೂರ್ತಿಯ ತಂದೆ ತಮ್ಮ ಹಳೆಯ ಗೆಳೆಯರೆಂಬುದು ಗೊತ್ತಾದ ಮೇಲಂತೂ ಪರಿಚಯ ಗೆಳೆತನಕ್ಕೆ ತಿರುಗಿತು. ರಾಯರು ಪ್ರೀತಿಯಿಂದ ತಮ್ಮ ಮಿತ್ರನ ಮಗನಿಗೆ ಮನೆಗೆ ಬರಲು ಆಹ್ವಾನಕೊಟ್ಟರು.

ಆಟ ಮುಗಿದರೂ ಶ್ರೀನಿವಾಸ ಮೂರ್ತಿ ಬೆಂಗಳೂರಿಗೆ ಹೋಗುವುದನ್ನು ಮರೆತಂತೆ ಕಾಣುತ್ತಿತ್ತು. ಸಾಮಾನ್ಯವಾಗಿ ನಿತ್ಯವೂ ರಾಯರ ಮನೆಯಲ್ಲಿ ಅವನ ಹಾಜರಿ ಬೀಳುತ್ತಿತ್ತು. ಅವನ ಭವ್ಯವಾದ ಆಕಾರ, ತಡೆಯಿಲ್ಲದ ಮಾತು—ಯಾವ ವಿಷಯವನ್ನೇ ಆಗಲಿ ಪೂರ್ಣ ತಿಳುವಳಿಕೆಯಿಂದ ಅವನು ಪ್ರತಿಪಾದಿಸುತ್ತಿದ್ದ ರೀತಿ ಇವೆಲ್ಲಾ ರಾಯರನ್ನು ಬೆರಗುಗೊಳಿಸಿತ್ತು. ಅವನು ಬರುವಾಗಲೇ ಉತ್ಸಾಹದ ತೆರೆ ಮನೆಯೊಳಗೆ ಬರುತಿತ್ತು. ಮಾತಿಗೆ ಕೂತರೆ ಹೊತ್ತು ಹೋಗದ್ದೇ ಗೊತ್ತಾಗುತ್ತಿರಲಿಲ್ಲ. ಕಾಫಿ ಕೊಡಲು ಬಂದರೆ ಲಲಿತ ಎಷ್ಟೋ ಹೊತ್ತು ಅದನ್ನೇ ಕೇಳುತ್ತ ಮುಗ್ಧಳಂತೆ ನಿಂತು ಬಿಡುತ್ತಿದ್ದಳು. ರಾಯರ ಮನೆಯ ವಿಚಾರವನ್ನೆಲ್ಲಾ ಸೂಕ್ಷ್ಮವಾಗಿ ಅರಿತು ಅವರ ವಿಚಾರದಲ್ಲಿ ಬಹಳ ಶ್ರದ್ಧಾಭಕ್ತಿಗಳನ್ನು ತೋರಿಸುತ್ತಿದ್ದ. ಅವರ ವಿಜಯವಾದ ಹೊಗಳಿಕೆಯಂತೂ ಯಾವಾಗಲೂ ನಾಲಗೆಯ ತುದಿಯಲ್ಲಿ ಸಿದ್ಧವಾಗೇ ಇರುತ್ತಿತ್ತು.

ದಿನಗಳು ಉರುಳುತ್ತಿದ್ದುವು. ಲಲಿತ ಪ್ರವಾಹಕ್ಕೆ ಸಿಕ್ಕಿದ ತರಗೆಲೆಯಂತೆ ಯಾವುದೊ ಅವ್ಯಕ್ತ ಶಕ್ತಿಯ ಹಿಡಿತಕ್ಕೆ ಸಿಕ್ಕಿ ಅದರೊಡನೆ ಸಾಗಿದ್ದಳು. ಶಾಂತವಾಗಿ ನಡೆದಿದ್ದ ಅವಳ ಬಾಳಿನಲ್ಲಿ ಬಿರುಗಾಳಿಯೆದ್ದಿತ್ತು. ಕಣ್ಣು ಕೋರೈಸುವಂತೆ ಮೇಲೆದ್ದು ಕಾಣುತ್ತಿದ್ದ ಹೊಸ ಗೆಳೆಯನ ಎದುರು ಗುರುಮೂರ್ತಿಯ ಶಾಂತ ಸೌಮ್ಯ ಮೂರ್ತಿ ಎಲ್ಲೋ ಅಡಗಿ ಕುಳಿತಿತ್ತು. ಅವನೂ ಇವರ ಗುಂಪಿಗೆ ಸೇರದೆ ಹೊರಗೇ ಇರುತ್ತಿದ್ದ. ಕನಸಿನಲ್ಲಿರುವಂತೆ ಲಲಿತ ಹೇಗೋ ದಿನದ ಕೆಲಸಗಳನ್ನು ಮಾಡುತ್ತಿದ್ದಳು.

ಆದರೆ ಚಿಕ್ಕಮ್ಮನ ಉರಿಮುಖ ಕನಸನ್ನು ಮುರಿದು ಅವಳನ್ನು

ಎಚ್ಚರಿಸಿತು. ಅವಳೂ ಗುರುಮೂರ್ತಿಯೂ ಒಟ್ಟಿಗೆ ಕುಳಿತು ಯಾವುದಾದರೂ ಪುಸ್ತಕವನ್ನು ಓದುತ್ತ ನಗುತ್ತಲೋ ಅಥವಾ ಚರ್ಚಿಸುತ್ತಲೋ ಇದ್ದರೆ—ಅದನ್ನು ನೋಡಿ ತಾನೂ ನಗುವ ಮಟ್ಟಿಗೆ ಸಹಾನುಭೂತಿಯನ್ನು ಅಭ್ಯಾಸ ಮಾಡಿದ್ದ ಚಿಕ್ಕಮ್ಮ ಪುನಃ ಮೊದಲಿನಂತೇ ಆಗಿಬಿಟ್ಟಳು. ಯಾವುದೋ ದೂರದ ಆಸೆಯಿಂದ ಮಲಮಗಳ ಮೇಲೆ ಸ್ನೇಹದ ಮುಖವಾಡವನ್ನು ಮುಚ್ಚಿದ್ದಳು. ಈಗ ಬರಲಿರುವ ಯಾವುದೋ ಅಪಾಯದ ವಾಸನೆಯನ್ನು ಗ್ರಹಿಸಿ ಅದು ತಾನಾಗೇ ಕಳಚಿ ಬಿದ್ದು ಹೋಗಿತ್ತು.

ಲಲಿತ ಈಗ ನಿಜವಾಗಿಯೂ ಗಾಬರಿಯಾಗಿದ್ದಳು. ತಂದೆಯಿಂದ ಅವಳು ಯಾವ ಸಹಾಯವನ್ನೂ ನಿರೀಕ್ಷಿಸುವಂತಿರಲಿಲ್ಲ. ಅಭ್ಯಾಸದಿಂದ ಗುರುಮೂರ್ತಿಯ ಕಡೆ ನೋಟವನ್ನು ತಿರುಗಿಸಿದರೂ ಅಲ್ಲಿ ಈ ಸಮಯದಲ್ಲಿ ಯಾವ ಸಹಾಯವೂ ದೊರೆಯದೆಂದು ಅಂತರ್ವಾಣಿಯೊಂದು ಹೇಳುತ್ತಿತ್ತು!

x x x x

ಶ್ರೀನಿವಾಸಮೂರ್ತಿ ನಿಜವಾಗಿ ಬಹಳ ಸುಖವಾಗಿದ್ದ. ಇದುವರೆಗೆ ಎಲ್ಲವೂ ಅವನ ಇಷ್ಟದಂತೆ ನಡೆಯುತ್ತ ಬಂದಿತ್ತು. ಅವನು ಸ್ವತಂತ್ರವಾಗಿ ಸ್ಥಾಪಿಸಬೇಕೆಂದಿದ್ದ ಬಣ್ಣದ ಕಾರ್ಖಾನೆ ಅವನ ಬಾಳಿನ ಗುರಿಯಾಗಿತ್ತು. ಅದರ ವಿಷಯವಾಗಿ ಎಲ್ಲಾ ಏರ್ಪಾಡೂ ಮುಗಿದಿತ್ತು. ಬಂಡವಾಳ ಸಾಲದೇ ಬಂದು ಅದು ಇನ್ನೂ ಕನಸಾಗೇ ಉಳಿದಿತ್ತು. ಅವನು ಊರಿನಿಂದ ಆಟಕ್ಕೆಂದು ಹೊರಟಾಗ ಆ ಸಮಸ್ಯೆ ಇಲ್ಲಿ ಬಗೆಹರಿಯಬಹುದೆಂಬ ಯೋಚನೆ ಕೂಡ ಇರಲಿಲ್ಲ. ಲಲಿತನ ಪರಿಚಯ, ಸ್ನೇಹಕ್ಕೆ ತಿರುಗಿದ್ದರೂ ಅವಳಿಂದ ದುಡ್ಡು ಬರುವುದೆಂದು ತಿಳಿದ ಮೇಲೆ ಅವನ ಮನಸ್ಸು ಅರಳಿತು. ಅವನ ಆಸೆ ಮತ್ತೆ ಗರಿಗೆದರಿತು. ಅದಕ್ಕೆ ಎಲ್ಲಾ ರೀತಿಯ ತಯಾರಿಯನ್ನೂ ನಡೆಸಿದ್ದ. ಬುದ್ಧಿವಂತನಾದ ಅವನು ಈ ಅವಕಾಶವನ್ನು ಬಿಡುವನೆ? ಅವನು ರಾಯರ ಎದುರಿಗೆ ತನ್ನ ಭವ್ಯ ಭವಿಷ್ಯವನ್ನು ಮನಮುಟ್ಟುವಂತೆ ವರ್ಣಿಸಿದ. ಅವನೂ ರಾಯರೂ ಜೊತೆಯಲ್ಲಿ ಕುಳಿತು ಕಾರ್ಖಾನೆಯಲ್ಲಿ ಬರಬಹುದಾದ ಆದಾಯವನ್ನು ಗಂಟೆಗಟ್ಟಲೆ ಚರ್ಚಿಸುತ್ತಿದ್ದರು.

ರಾಯರೂ ಈಗ ಒಂದು ವಿಧದಲ್ಲಿ ಸುಖವಾಗಿಯೇ ಇದ್ದರು. ಮನೆಯಲ್ಲಿ ಶಾಂತಿ, ಸಮಾಧಾನ ನೆಲೆಸುತ್ತ ಬಂದಿತ್ತು. ದಿನವೂ ಮಗಳ ಕಣ್ಣೀರು ತುಂಬಿದ ಮುಖವನ್ನು ನೋಡುವುದು ತಪ್ಪಿತ್ತು. ಅವರ ಮನಸ್ಸಿನಲ್ಲಿ ಅಷ್ಟು

ಗುರುಮೂರ್ತಿಯ ದೆಸೆಯಿಂದ ಎಂದು ಅರಿತಿದ್ದರೂ, ಅವನನ್ನು ಅನುಮಾನ ದಿಂದ ನೋಡದೆ ಇರಲಿಲ್ಲ. ಅವರಿಗೆ ಸದ್ಯದಲ್ಲಿ ಇದ್ದ ದೊಡ್ಡ ಯೋಚನೆ ಯೆಂದರೆ—ಮಗಳ ಮದುವೆ. ತಾಯಿ ಇಲ್ಲದ ಹುಡುಗಿಯನ್ನು ಸರಿಯಾದ ಪಾತ್ರನ ಕೈಲಿಟ್ಟು ಮುಂದಾದರೂ ಅವಳು ಸುಖವಾಗಿರುವಂತೆ ಮಾಡುವುದು!

ಶ್ರೀನಿವಾಸಮೂರ್ತಿ ಎಲ್ಲಾ ಭಾಗದಲ್ಲೂ ಸರಿಯಾದ ವರ. ಮಗಳೂ ಒಪ್ಪಿರುವಂತಿದೆ. ತಾವು ಒಂದು ಮಾತು ಹೇಳಿದರೆ ಸಾಕು—ಅವನು ಮದು ವೆಗೆ ಸಿದ್ಧನೆಂದು ರಾಯರಿಗೆ ಗೊತ್ತಿತ್ತು. ಅವನು ಅದನ್ನು ಅನೇಕ ವೇಳೆ ತನ್ನ ಮಾತಿನಲ್ಲಿ ವ್ಯಕ್ತಪಡಿಸಿದ್ದ. ಆದರೂ . . . ಆದರೂ . . . ರಾಯರ ನಚ್ಚಿನ ಸ್ವಭಾವ ಅಲ್ಲೂ ಟೊಳ್ಳು ಸದ್ದನ್ನೇ ಆಲಿಸುತ್ತಿತ್ತು. ಬೆಳ್ಳಗಿರುವು ದೆಲ್ಲ ಹಾಲಲ್ಲ!

x x x x

ಶ್ರೀನಿವಾಸಮೂರ್ತಿ ಬಂದಾಗ ಬಾಂಬು ಆಸ್ಫೋಟನೆಯಾಗಿದ್ದಂತೆ ಮನೆಯೆಲ್ಲಾ ಅಲ್ಲೋಲಕಲ್ಲೋಲವಾಗಿತ್ತು. ಅವನಿಗೆ ಬಾಗಲಿನಲ್ಲೇ ಎದೆ ಹಾರಿತು. ಧೈರ್ಯಮಾಡಿ ಒಳಹೊಕ್ಕ. ರಾಯರು ಏನೋ ಮುಳುಗಿ ಹೋದಂತೆ ತಲೆಯ ಮೇಲೆ ಕೈ ಹೊತ್ತು ಕುಳಿತಿದ್ದರು. ಅವರು ಮಗಳ ಹೆಸರಿನಲ್ಲಿ ತಮ್ಮ ಹೆಂಡತಿಯ ಆಸ್ತಿಯನ್ನೆಲ್ಲಾ ಇಟ್ಟಿದ್ದ ಬ್ಯಾಂಕು ದಿವಾಳಿಯಾ ಗಿತ್ತು! ರಾಯರು ಮಕ್ಕಳಂತೆ ಕೈಕಾಲು ಕೆಟ್ಟಿದ್ದರು. ಆ ತಬ್ಬಲಿ ಹುಡು ಗಿಯ ವಿಚಾರದಲ್ಲಿ ಅವರಿಗೆ ಇದ್ದುದು ಅದೊಂದೇ ಆಸೆ. ಅವಳ ಮುಂದಿನ ಸುಖಕ್ಕೆ ಅದು ಅಡಿಗಲ್ಲಾಗ ಬಹುದೆಂದು ಭಾವಿಸಿದ್ದರು; ಅದೂ ಇಂದು ಹುಡಿಯಾಗಿತ್ತು. ಅವರ ಸ್ಥಿತಿ ಕನಿಕರ ಪಡುವಂತೆ ಇತ್ತು.

ಶ್ರೀನಿವಾಸಮೂರ್ತಿ ಅವರನ್ನು ವಿಧವಿಧವಾಗಿ ಸಂತೈಸಿದ. ಲಲಿತ ಹೊರಗೇ ಬರಲಿಲ್ಲ. ಅವಳು ಇದ್ದಾಗ ಆ ಹಣದ ವಿಷಯವಾಗಿ ಅಭಿಮಾನ ಪಡದಿದ್ದರೂ ಅದರ ಅಭಾವದಿಂದ ತಾನು ಕಟ್ಟಿದ್ದ ಸುಂದರ ಸೌಧ ಕುಸಿದು ಬೀಳಬಹುದೆಂದು ತಿಳಿದಿದ್ದಳು. ಈ ಅವಾಂತರದಲ್ಲಿ ಚಿಕ್ಕಮ್ಮನ ಸಿಟ್ಟು ಸಹ ಅವಳಿಗೆ ಕಾಣಿಸುತ್ತಿರಲಿಲ್ಲ.

ಮೂರು ನಾಲ್ಕುದಿನ ಹೇಗೋ ಕಳೆಯಿತು. ಪರಿಸ್ಥಿತಿಗೆ ಮನಸ್ಸು ಒಗ್ಗಿದ ಮೇಲೆ ಮೊದಲು ಅವರ ಗಮನಕ್ಕೆ ಬಂದದ್ದು ಶ್ರೀನಿವಾಸಮೂರ್ತಿ. ಆ ದಿನದಿಂದ ಪುನಃ ಈ ಕಡೆ ಬಂದಿಲ್ಲವೆಂಬುದು! ಎರಡನೆಯದು—

ಒಂದೂವರೆ ದಿನದಿಂದ ಗುರುಮೂರ್ತಿ ಮನೆಗೆ ಬಂದಿಲ್ಲವೆಂಬುದು! ಶ್ರೀನಿವಾಸ ಮೂರ್ತಿಯೇನೋ ಬೆಂಗಳೂರಿಗೆ ಹೋಗಿರಬಹುದು; ಆದರೆ ಗುರುಮೂರ್ತಿ . . ? ಯಾರಿಗೂ ಹೇಳದೆ ಎಲ್ಲಿ ಹೋದ? ಅದೇ ಸಮಸ್ಯೆ!

ರಾಯರು ತಮ್ಮ ದುಃಖವನ್ನು ಕೊಡವಿ ಎದ್ದು ನಿಂತು ಅವನ ಶೋಧನೆಗೆ ಹೊರಟರು. ಲಲಿತ ಕಣ್ಣೊರಸಿಕೊಂಡು ಅವನ ರೂಮಿನಲ್ಲಿ ಏನಾದರೂ ಸುಳು ಸಿಕ್ಕಬಹುದೆಂದು ಅಲ್ಲೆಲ್ಲಾ ಹುಡುಕಿದಳು. ಅಲ್ಲೇನಿದೆ . . . ? ಕೆದರಿದ ಪುಸ್ತಕದ ರಾಶಿ ಅವನ ಶೂನ್ಯವಾದ ಹೃದಯವನ್ನು ಪ್ರತಿಬಿಂಬಿಸುವಂತೆ ಬಿದ್ದಿತ್ತು ಲಲಿತನ ಕಣ್ಣಿನಲ್ಲಿ ಪುನಃ ನೀರು ಸುರಿಯಿತು. ತಾನು ಆ ರೂಮಿಗೆ ಬಂದು ಎಷ್ಟೋ ವರ್ಷಗಳಾದಂತೆ ತೋರಿತು!

ಇಡೀ ಮೂರು ದಿವಸ ಗುರುಮೂರ್ತಿ ಆ ತೆರದ ಪುಸ್ತಕವನ್ನೇ ದಿಟ್ಟಿಸುತ್ತ ಶೂನ್ಯ ಹೃದಯದಿಂದ ಕೂತಿದ್ದ. ಬಹುಶಃ ಆ ದಿನಗಳಲ್ಲಿ ಅವನು ಮನೆಯಲ್ಲಿದ್ದುದೇ ಲಲಿತನಿಗೆ ನೆನಪಾಗಿರಲಾರದು. ಆದರೆ ತನ್ನ ಸ್ವಂತ ಸ ಖದುಃಖಗಳಲ್ಲಿ ಮೈಮರೆತು ಕೂರುವ ಕಾಲವೇ ಅದು . . . . . ? ಹೊರಗಡೆ ಸತ್ಯಾಗ್ರಹದ ದಳ್ಳುರಿ ಉರಿಯುತ್ತಿದೆ– ಜವಾಬ್ದಾರಿ ಸರ್ಕಾರಕ್ಕಾಗಿ ಸತ್ಯಾಗ್ರಹ ಹೂಡಿ ನಾಯಕರೆಲ್ಲಾ ಸೆರೆಯಾಗಿದ್ದಾರೆ ಶಾಲಾ ಕಾಲೇಜುಗಳೆಲ್ಲಾ ಮುಚ್ಚಿವೆ ಹಾಗೆಂದು ವಿದ್ಯಾರ್ಥಿಗಳು . . . . . ಮುಂದಿನ ರಾಷ್ಟ್ರದ ಉಸಿರಾದ ಯುವಕರು ಸುಮ್ಮನಿರಲಾದೀತೆ . . . . ? ಗುರುಮೂರ್ತಿ ಹಿಂದೆ ಮುಂದೆ ನೋಡದೆ ಆ ಪ್ರವಾಹದೊಡನೆ ನುಗ್ಗಿದ.

X X X X

ಕತ್ತಲು ಕವಿಯುತ್ತ ಬಂದಿತ್ತು ಸ್ನೇಹಿತನ ಹೆಗಲ ಮೇಲೆ ಒರಗಿಕೊಂಡು ಕುಂಟುತ್ತ ಗುರುಮೂರ್ತಿ ಮನೆಗೆ ಬಂದ. ಮೈದಾನದಲ್ಲಿ ಹುಡುಗರು ಸಭೆ ನಡೆಸಿದ್ದರು ಅವರಲ್ಲಿದ್ದ ಆಯುಧವೆಂದರೆ—ವಾಗ್ಬಾಣವೊಂದೇ! ಅದನ್ನೇ ಧಾರಾಳವಾಗಿ ಉಪಯೋಗಿಸುತ್ತಿದ್ದರು. ಗುಂಪು ಚದರಿಸಲು ಬಂದ ಪೋಲಿಸರು ಕೈಗೆ ಸಿಕ್ಕಿದವರನ್ನು ಬಡಿದು ಮುಂದೆ ಸಿಕ್ಕಿದವರನ್ನು ಠಾಣೆಗೆ ಒಯ್ದರು. ಅಲ್ಲಿ ಒಂದು ರಾತ್ರಿಯನ್ನು ಕಳೆದು ಲಾರಿಯ ರುಚಿನೋಡಿ ಅವರು ಬಿಟ್ಟಮೇಲೆ ಮನೆಯ ಹಾದಿಯನ್ನು ಹಿಡಿದಿದ್ದ.

ಚಿಕ್ಕಮ್ಮ ತಮ್ಮನನ್ನು ತಬ್ಬಿಕೊಂಡು ಅತ್ತು ತಮ್ಮ ಪ್ರೀತಿಯನ್ನು ತೋರಿಸಿ ಅವನಿಗೆ ಪೆಟ್ಟುಕೊಟ್ಟ ಪೋಲಿಸರನ್ನು ಬಾಯ್ತುಂಬ ಹರಸಿದರು. ರಾಯರು —, "ಇವತ್ತು ಇಲ್ಲೇ ಕೆಳಗೆ ಮಲಗಿಕೋ . . . . ಕಾಲುನೋವಿನಲ್ಲಿ

ಮುಹಡಿ ಹತ್ತಬೇಡ . . . . . . ಇನ್ನು ಮೇಲೆ ಈ ಹುಡುಗತನಕ್ಕೆಲ್ಲ ಹೋಗ್ಬೇಡ . . . . . ನಿನಗೇನಾದರೂ ಆದರೆ ನಮಗೆ ತಾನೇ ಕೆಟ್ಟ ಹೆಸರು? ಲೇ . . . . ಲಲಿತ ನೀನು ಲೀಲು ಹೊರಗೆ ಮಲಗಿಕೊಂಡು ಗುರುಮೂರ್ತಿಗೆ ನಿನ್ನ ರೂಮು ಬಿಟ್ಟುಕೊಡು . . . . . " ಎಂದರು.

ಗುರುಮೂರ್ತಿ ಹಾಸಿಗೆಯ ಮೇಲೆ ಕಣ್ಣು ಮುಚ್ಚಿ ಸುಮ್ಮನೆ ಮಲಗಿದ್ದ. ಚಿಕ್ಕಮ್ಮ ಲಲಿತನ್ನ ಅವನ ಬಳಿ ಕಾವಲು ಕೂರಿಸಿ ಕಾಲಿಗೆ ಶಾಖಕೊಡಲು ನೀರು ಕಾಯಿಸಲು ಹೋದರು.

"ಲಲಿತು . . . . ನಿನ್ನ ಹಣವೆಲ್ಲಾ ಹೋಯಿತೆಂದು ಕೇಳಿದೆ . . . ಎಂತಹ ದುರದೃಷ್ಟ! ಭಾವಯ್ಯನಂತೂ ಭೂಮಿಗೆ ಇಳಿದುಹೋಗಿದಾರೆ . . . "

ಗುರುಮೂರ್ತಿಗೆ ಭಾವನ ವ್ಯಕ್ತಿತ್ವದ ವಿಷಯದಲ್ಲಿ ಎಳ್ಳಷ್ಟೂ ಗೌರವ ವಿರದಿದ್ದರೂ, ಅವರ ಆಶ್ರಯದಲ್ಲಿದ್ದ ಅವನು ಯಜಮಾನರಿಗೆ ತೋರುವ ಗೌರವ ಕೊಡುವುದನ್ನು ಮಾತ್ರ ಮರೆಯುತ್ತಿರಲಿಲ್ಲ. ಅದು ಲಲಿತನಿಗೂ ಗೊತ್ತಿತ್ತು. ಅವನ ಮಾತುಗಳಲ್ಲಿ ಸಹಾನುಭೂತಿಗಿಂತ ಉಪಚಾರದ ಭಾಗವೇ ಹೆಚ್ಚಾಗಿರುವಂತೆ ತೋರಿತು. ಅದಕ್ಕೆ ಅದರ ಕಡೆಗೆ ವಿಶೇಷ ಗಮನ ಕೊಡದೆ—, "ಗುರು . . . ಪೆಟ್ಟು ಬಹಳವಾಗಿದೆಯೋ?" ಎಂದು ಕೇಳಿದಳು.

"ಬಹಳವೇನಿಲ್ಲಿ . . . ಆದರೂ ಅದು ಒಳಿತೇ ಅನ್ನು . . . . . ಇಲ್ಲ ದಿದ್ದರೆ ನೀನು ಹೀಗೆ ನನ್ನ ಬಳಿ ಕುಳಿತು ಉಪಚಾರ ಮಾಡುತ್ತಿದ್ದಿಯಾ . . . ? ಅದೇನು ಸ್ವಲ್ಪ ಭಾಗ್ಯವೇ . . . ?"

"ಬಿಡು . . . . ನಿನಗೆ ಎಲ್ಲಾ ತಮಾಷೆಯೋ?"

"ಹಾಸ್ಯವಲ್ಲ . . . . ಲಲಿತು ನಿಜವಾಗಿ ಹೇಳ್ತೀನೆ . . . . ಅಲ್ಲ ಹಣ ಹೋದುದಕ್ಕೆ ಬಹಳ ವ್ಯಸನವಾಗಿದೆಯೆ ನಿನಗೆ . . . ?"

"ವ್ಯಸನವೇಕೆ . . . . ? ನಮ್ಮದಾಗಿರಲಿಲ್ಲ ಹೋಯಿತು! ನಿನಗೇನು ಅಷ್ಟು ಕುತೂಹಲ . . . . ಅದರಿಂದ ನಿನಗೇನೂ ನಷ್ಟವಿಲ್ಲವಲ್ಲ . . . . ?"

"ನಷ್ಟವೇ . . . . ಇಲ್ಲ. ನನಗೆ ನಿಜವಾಗಿ ಅದರಿಂದ ಲಾಭವಾಗಿದೆ. ನಮ್ಮಿಬ್ಬರ ನಡುವೆ ಬಂಡೆಯಂತೆ ಕುಳಿತಿದ್ದ ಅದು ಕರಗಿರುವುದರಿಂದ ನನಗೆ ಸಂತೋಷವಾಗಿದೆ . . . . !"

ಲಲಿತ ಮಾತಾಡಲಿಲ್ಲ. ಅಚ್ಚರಿಯಿಂದ ಅವನ ಮುಖವನ್ನೇ ನೋಡು ತಿದ್ದಳು.

x x x x

"ಲಲಿತು . . . . ನಿನ್ನ ಹಣ ಎಲ್ಲೂ ಹೋಗಿಲ್ಲ ಅದರ ಜಾಗದಲ್ಲಿ ಭದ್ರವಾಗಿದೆ. ಅದರ ಸಹಾಯದಿಂದ ಜಳ್ಳನ್ನು ಗಟ್ಟಿಯಿಂದ ಬೇರ್ಪಡಿಸಲು ಸಾಧ್ಯವಾಯಿತು . . . . ಅಷ್ಟೆ! ಅದನ್ನು ನಿನ್ನ ಮದುವೆಯಲ್ಲಿ ಬಳುವಳಿಯಾಗಿ ಕೊಡುತ್ತೇನೆ."

ಲಲಿತ ನಕ್ಕು ಹೇಳಿದಳು—

"ಅಪ್ಪ—ನಿಜವಾಗಿ ಹಣಹೋಗಿದ್ದರೂ ವ್ಯಸನವಿಲ್ಲ . . . ಆದರೆ . . .

"ಆದರೆ . . . . . . ?"

"ನೀವು ಯಾವಾಗಲಾದರೂ ನಾಟಕದಲ್ಲಿ ಪಾತ್ರವಹಿಸಿದ್ದಿರೇನು . . ?"

"ಯಾವಾಗಲೂ ಇಲ್ಲ . . . . !"

"ಇದೇ ಮೊದಲ ಪ್ರಯತ್ನವಾದರೂ ನಿಮ್ಮ ಅಭಿನಯ ಅದ್ಭುತವಾ ಗಿತ್ತು! ನನಗೂ ಅನುಮಾನ ಬರಲಿಲ್ಲ . . . . ಪಾಪ . . . . ಅವನಿಗೆ ಹೇಗೆ ಗೊತ್ತಾಗಬೇಕು? ಅಷ್ಟಕ್ಕೇ ಹೆದರಿ ಓಡಿದ . . . . !"

ಈ ಸಲ ತಂದೆ ಮಗಳು ಇಬ್ಬರೂ ನಕ್ಕರು.



# ವಿಜಯನಗರ

(ಪ್ರೊ. ಕೆ. ಎಸ್. ಸವಣೂರ, ಎಮ್. ಎಸ್ಸಿ., ಕರ್ನಾಟಕ ಕಾಲೇಜ, ಧಾರವಾಡ)

## (೧)

ಶಾಸ್ತ್ರಿಗಳೇ — ನಮ್ಮ ಕಳೆದು ಹೋದ ಎಮ್ಮೆಯು ಎಂದು ಸಿಗಬಹುದು?
ನಮ್ಮ ಸೊಸೆಯು ಎಂದು ಗರ್ಭಿಣಿಯಾಗುವ ಯೋಗವಿದೆ?
ನನಗೆ ನೌಕರಿಯಲ್ಲಿ ಬಡತಿಯ ಯೋಗವು ಯಾವಾಗ ಬರಬಹುದು?
ನಮ್ಮ ಖಟ್ಲೆಯಲ್ಲಿ ನಮಗೆ ಯಶಸ್ಸೇ ಅಥವಾ ಅಪಯಶಸ್ಸೇ?
ಈ ಶರ್ಯತ್ತಿನಲ್ಲಿ ಯಾವ ಕುದುರೆಗೆ ಯಶಸ್ಸು?
ಆಗಸ್ಟ ೧೫ರಂದು ಸ್ವತಂತ್ರವಾದ ಹಿಂದುಸ್ಥಾನದ ಯೋಗವು ಹೇಗಿದೆ?
ಹಿಂದುಸ್ಥಾನ ಹಾಗು ಪಾಕಿಸ್ತಾನಗಳು ಒಂದುಗೂಡಿ ಅಖಂಡ ಹಿಂದುಸ್ಥಾನವಾಗುವ ಯೋಗವಿದೆಯೇ?

ಈ ತೆರದ ಪ್ರಶ್ನೆಗಳನ್ನು ಕೇಳುವ ಅನೇಕರಿಂದ ಶಾಸ್ತ್ರಿಗಳ ಮುಂಬಯಿಯಲ್ಲಿಯ ಮಲಬಾರಹಿಲ್ಲದೊಳಗಿನ ಮನೆಯು ಯಾವಾಗಲೂ ತುಂಬಿರುತ್ತಿತ್ತು. ರಾಮಶಾಸ್ತ್ರಿಗಳಾದರೂ ತಮ್ಮ ಕೆಲಸದಲ್ಲಿ ಒಳ್ಳೆ ಗಟ್ಟಿಗರೆಂದು ಹೆಸರು ಪಡೆದವರು. ಅವರ ಮನೆತನದಲ್ಲಿ ಜ್ಯೋತಿಷವು ಪರಂಪರಾಗತವಾಗಿ ಬಂದುದಿದ್ದು, ಅವರ ಪೂರ್ವಜರು ವಿಜಯನಗರದ ರಾಜರಲ್ಲಿ ಆಸ್ಥಾನ ಜ್ಯೋತಿಷಿಗಳಾಗಿದ್ದರೆಂಬ ಸಂಗತಿಯು, ಆತ್ಮಶ್ಲಾಘನೆಯನ್ನು ಮಾಡಿಕೊಳ್ಳುತ್ತಿರುವ ಶಾಸ್ತ್ರಿಗಳ ಬಾಯಿಯಿಂದ, ಯಾರಾದರೂ ಪದೇ ಪದೇ ಕೇಳುವ ವಿಷಯಗಳಲ್ಲಿ ಒಂದಾಗಿತ್ತು. ನಿರುದ್ಯೋಗಿಗಳಿಗೆ ಶಾಸ್ತ್ರಿಗಳು ಆಧಾರಪ್ರಾಯರಾಗಿದ್ದರು. ಅವರು 'ಕರ್ಮಣ್ಯೇವಾಧಿಕಾರಸ್ತೇ' ಎಂಬ ಗೀತಾ ವಚನವನ್ನು ಅನ್ನುವ ರೂಢಿಯನ್ನು ಇಟ್ಟುಕೊಂಡಿದ್ದರೂ, ಇವರ ಜ್ಯೋತಿಷವನ್ನು ಕೇಳಿದ ಅನೇಕರು ಕರ್ಮಶೂನ್ಯರಾಗಿ ಫಲದಲ್ಲಿಯೆ ಧ್ಯಾನರತರಾಗುತ್ತಿದ್ದರು. ಸ್ವಲ್ಪದರಲ್ಲಿಯೆ ಇವರ ಕಾರ್ಯಕ್ಷೇತ್ರವನ್ನು ವಿವೇಚಿಸುವದಾದರೆ, ಇವರು ಕರ್ಮ

ಶೂನ್ಯತೆಯನ್ನು ಪ್ರತಿಪಾದಿಸಿ ಆಲಸ್ಯಕ್ಕೆ ಪ್ರಾಬಲ್ಯವನ್ನು ತಂದುಕೊಟ್ಟಿರುವವರಲ್ಲಿ ಹಿರಿಯರೇ ಆಗಿದ್ದರು. ಕಾಳಪೇಟೆಯ ವ್ಯವಸ್ಥಾಪಕರೂ, ಅಧಿಕಾರ ವರ್ಗದವರೂ ಮೇಲಿಂದ ಮೇಲೆ ಶಾಸ್ತ್ರಿಗಳ ಸಲಹೆಯನ್ನು ಪಡೆಯಲು ಬರುತ್ತಿದ್ದರಾದ್ದರಿಂದ, ಇತ್ತೀಚೆಗಂತೂ ಶಾಸ್ತ್ರಿಗಳಿಗೆ ವೇಳೆಯ ಕೊರತೆಯು ಅತೀವವೆನಿಸುತ್ತಿತ್ತು. ಸಾಲಿಗ್ರಾಮವನ್ನು ತೊಳೆಯಲು ಕೂಡ ಅನೇಕ ಸಲ ವೇಳೆಯು ಸಿಗುತ್ತಿರಲಿಲ್ಲ. ಮೇಲಾಗಿ ಗ್ರಹಗಳ ಶಾಂತಿ ನಿಮಿತ್ತವಾಗಿ ಇವರು ಎಲ್ಲರಿಗೂ ಪ್ರಾಣದೇವರ ಅಭಿಷೇಕವನ್ನು ಮಾಡಿಸಲು ಹೇಳುತ್ತಿದ್ದರಾದ ಕಾರಣ, ಇವರ ಕಳ್ಳಸಂತೆಯು ಪೂಜಾರಿಯ ಮುಖಾಂತರ ನಡೆಯುತ್ತಿರುವದೆಂದು ಅನೇಕರು ಆಡಿಕೊಳ್ಳುತ್ತಿದ್ದರು ಸಹ. ಮೇಲಾಗಿ ಮುಂಬಯಿ ಹಾಗು ಪುಣೆಯ ರೇಸಕೋರ್ಸಿಗೆ ಹೋಗುವ ಜನರಲ್ಲಿ ಶಾಸ್ತ್ರಿಗಳ ಸಲಹೆಯನ್ನು ಒಮ್ಮೆಯಾದರೂ ಕೇಳದವರೇ ವಿರಳರೆಂದು ಹೇಳಬಹುದು.

ಶಾಸ್ತ್ರಿಗಳ ವಯಸ್ಸು ಅರವತ್ತನ್ನು ಸಮೀಪಿಸುವದರಲ್ಲಿತ್ತು. ಕಾಣಲು ಮಾತ್ರ ಐವತ್ತನ್ನು ಮೀರಿದೆ ಎಂದು ಹೇಳುವದು ಸಾಧ್ಯವೆ ಇರಲಿಲ್ಲ. ಇದಕ್ಕೆ ಕಾರಣವೆಂದರೆ, ಇಂದಿನ ಕಾಲದಲ್ಲಿ ಸರ್ವಚಿಂತೆಗಳಿಗೂ ಮೂಲವಾದ ಧನದ ಕೊರತೆಯು, ಶಾಸ್ತ್ರಿಗಳನ್ನು ಸಮೀಪಿಸಿರಲಿಲ್ಲ ಕೂಡ. ಅವರಿಗೆ ಸುಗುಣಿಯಾದ ಹಾಗು ಪತಿಯೆ ದೇವರೆಂಬ ಭಾವನೆಯುಳ್ಳ ಪತ್ನಿಯೂ ಮತ್ತು ಅರವಿಂದನೆಂಬ ಒಬ್ಬನೇ ಮಗನೂ ಇರುವರು. ಪರಂಪರಾಗತವಾದ ಜ್ಯೋತಿಷವಿದ್ಯೆಯು ಈತನಿಗೆ ಅವಗತವಾದುದಲ್ಲದೆ, ಇವರ ಮನೆತನದಲ್ಲಿ ಯಾರಿಗೂ ನೋಂಕದ ಪಾಶ್ಚಿಮಾತ್ಯ ವಿದ್ಯಾಪದ್ಧತಿಯು ಇವನಿಂದಲೆ ಮನೆಯಲ್ಲಿ ಅಡಿಯಿಟ್ಟಿತು.

ಅರವಿಂದನು ಭೌತಿಕ ಶಾಸ್ತ್ರದಲ್ಲಿ ಅದ್ವಿತೀಯ ಪಾಂಡಿತ್ಯವನ್ನು ದೊರಕಿಸಿದ್ದಾನೆ. ಮುಂಬಯಿ ವಿಶ್ವವಿದ್ಯಾಲಯದ ಬಿ. ಎಸ್. ಸಿ, ಪರೀಕ್ಷೆಯಲ್ಲಿ ತೇರ್ಗಡೆಯಾದೊಡನೆಯೆ, ಬೆಂಗಳೂರಿನ ಟಾಟಾ ವಿಜ್ಞಾನ ಮಂದಿರದಲ್ಲಿ ನೇರವಾಗಿ ರಾಮನ್ನರ ಕೆಳಗೇ ಕೆಲಸಮಾಡುವ ಸುಯೋಗವು ಈತನಿಗೆ ದೊರೆಯಿತು. ಕುಶಲನಾದ ಅರವಿಂದನು ಇಂತಹ ಸುಸಂಧಿಯನ್ನು ಹೋಗಗೊಡದೆ ತನ್ನ ಸಂಶೋಧನೆಯ ಕಾರ್ಯವನ್ನು ಮುಂದುವರಿಸಿ, ಭೌತಿಕ ಶಾಸ್ತ್ರದಲ್ಲಿ ಪಿ. ಎಚ್. ಡಿ. ಪದವಿಯನ್ನು ದೊರಕಿಸಿದನು. ದಿಲ್ಲಿಯಲ್ಲಿ ಇದೇ ಪ್ರಾರಂಭವಾಗಲಿರುವ ನ್ಯಾಶನಲ್ ಫಿಜಿಕಲ್ ಪ್ರಯೋಗ ಶಾಲೆಯಲ್ಲಿ ಈತನನ್ನು ನಿಯಮಿಸಿರುವರು ಮತ್ತು ಇವನಾದರೂ ತನ್ನ ಸಂಶೋಧನೆಯ ಕಾರ್ಯವನ್ನು ಅಲ್ಲಿಯೆ ಮುಂದುವರಿಸುವವನಿದ್ದಾನೆ.

ಅರವಿಂದನು ದಿಲ್ಲಿಗೆ ಹೋಗಲು ಇನ್ನೂ ಎರಡು ತಿಂಗಳುಗಳ ಅವಧಿಯುಂಟು. ಶಾಸ್ತ್ರಿಗಳು ಪುತ್ರವಾತ್ಸಲ್ಯದಿಂದ ಅವನಿಗೆ ಸದ್ಯಕ್ಕೆ ಮನೆಯಲ್ಲಿಯೆ ಇರಲು ಹೇಳಿದ್ದಾರೆ. ಇವನಾದರೂ ತಂದೆ ತಾಯಿಗಳ ಮಾತನ್ನು ಮೀರಲಾರದೆ ಇದಕ್ಕೆ ಒಪ್ಪಿ ಇಲ್ಲಿಯೆ ಇದ್ದಾನೆ. ಆದರೂ ಇವನ ಅಭ್ಯಾಸವು ಮಾತ್ರ ಎಂದಿನಂತೆ ಸಾಗಿದೆ. ಯಾವಾಗಲೂ ಯಾವುದೊಂದು ವಿಚಾರದಲ್ಲಿಯೆ ಇರುವನು. ತನ್ನ ಸಂಶೋಧನ, ನಿಸರ್ಗ ಪರೀಕ್ಷೆ ಇತ್ಯಾದಿಗಳನ್ನು ಹೊರತುಪಡಿಸಿ ಬೇರಾವ ವಿಷಯಗಳು ಇವನಿಗೆ ರುಚಿಸವು. ಬೇರೆ ವಿಷಯಗಳ ನಿಮಿತ್ತವಾಗಿ ತನ್ನ ಮನಸ್ಸು ಪರಾವೃತ್ತವಾಗದಿರಲು ಮತ್ತು ಜಗತ್ತಿನಲ್ಲಿಯ ವಿಭೂತಿವ್ಯಕ್ತಿಗಳ ನೆನಪು ತನಗೆ ಸದಾ ಇರಲೆಂಬ ಉದ್ದೇಶದಿಂದ, ತನ್ನ ಕೋಣೆಯನ್ನೆಲ್ಲ ಈ ಜನರ ಛಾಯಾಚಿತ್ರಗಳಿಂದ ಅಲಂಕರಿಸಿದ್ದಾನೆ. ಈತನಿಗೆ ಇವರ ಚರಿತ್ರೆಗಳಲ್ಲಿಯ ಮುಖ್ಯ ಅಂಶಗಳೆಲ್ಲವೂ ಗೊತ್ತುಂಟು ಮತ್ತು ಅವುಗಳನ್ನು ನೆನೆಯುವದರಲ್ಲಿ ಇವನಿಗೆ ಸಂತೋಷ ಹಾಗು ಅತಿಯಾದ ಉತ್ಸಾಹ ಇವೆರಡೂ ಒಮ್ಮೆಲೆ ಉಂಟಾಗುವುವು.

ಕಳೆದ ಒಂದು ತಿಂಗಳಿಂದ ತನ್ನ ಹಿರಿಯರಲ್ಲಿ ಬರುವ ಜನತೆ ಹಾಗು ಅವರ ಉದ್ದೇಶ ಇತ್ಯಾದಿಗಳನ್ನು ಲಕ್ಷ್ಯಪೂರ್ವಕವಾಗಿ ಕಂಡ ಅರವಿಂದನಿಗೆ ತನ್ನ ತಂದೆಯ ವಿಷಯವಾಗಿ ಕನಿಕರವೂ ಹಾಗು ಜಿಗುಪ್ಸೆಯೂ ಏಕಕಾಲದಲ್ಲಿಯೆ ಉದ್ಭವಿಸಿದವು ಜ್ಯೋತಿಷದಂತಹ ಉಚ್ಚಶಾಸ್ತ್ರವನ್ನು ಇಂತಹ ಹೀನಾಯ ಸ್ಥಿತಿಗೆ ಇಳಿಸಲು ಕಾರಣರಾದ ತನ್ನ ತಂದೆಯನ್ನು ಮನಸ್ಸಿನಲ್ಲಿಯೆ ನಿಂದಿಸತೊಡಗಿದನು. ಜ್ಯೋತಿಷದಲ್ಲಿಯೂ ಪಾರಂಗತನಾದ ಅರವಿಂದನಿಗೆ ತಂದೆಯ ಅನುಕೂಲ ಜ್ಯೋತಿಷವು ಮನಸ್ಸನ್ನು ಹಿಡಿಯದಾಯಿತು. ಎಷ್ಟೋ ಸಲ ಅವನಿಗೆ ಮನೆಯನ್ನು ಬಿಟ್ಟು ಹೋಗಲೇ ಎನ್ನುವಷ್ಟು ವ್ಯಥೆಯಾಗತೊಡಗಿತು. ಜನತೆಯನ್ನು ಕರ್ತವ್ಯಚ್ಯುತರಾಗುವಂತೆ ಮಾಡಲು ಕಾರಣೀಭೂತನಾದ ತನ್ನ ತಂದೆಯ ಬಗ್ಗೆ ಆದರವು ಕಡಿಮೆಯಾಗತೊಡಗಿತಲ್ಲದೆ, ಜ್ಯೋತಿಷದ ದುರುಪಯೋಗವು ರಾಷ್ಟ್ರದ ಅವನತಿಗೆ ಹೇಗೆ ಕಾರಣವಾಗತೊಡಗಿದೆ ಇತ್ಯಾದಿ ವಿಚಾರಗಳು ಅವನನ್ನು ಮುತ್ತತೊಡಗಿದವು. ಈ ವಿಚಾರತಂದ್ರಿಯಲ್ಲಿರುವಾಗಲೆ, ತನ್ನ ತಂದೆಯನ್ನು ಕುರಿತು ಒಬ್ಬರು ಕೇಳಿದ 'ಆಗಸ್ಟ ಹದಿನೈದರಂದು ಸ್ವತಂತ್ರವಾದ ಹಿಂದುಸ್ಥಾನದ ಯೋಗವು ಹೇಗಿದೆ' ಎಂಬ ಪ್ರಶ್ನೆಯು, ಇವನ ತಲೆಯಲ್ಲಿ ಅನೇಕ ವಿಚಾರಗಳ ಪ್ರವಾಹಗಳನ್ನೇ ಹರಿಯಿಸಲು ಕಾರಣವಾಯಿತು.

ಈ ವಿಚಾರಗಳ ತಾಕಲಾಟದಲ್ಲಿಯೆ ಅರವಿಂದನು ತನ್ನ ಕೋಣೆಯೆಡೆಗೆ ನಡೆದನು. ವಿಚಾರಗಳ ಭಾರವು ಅವನನ್ನು ಹಾಸಿಗೆಯೆಡೆಗೆ ಒಯ್ಯಿತು. ಮಲಗಿದುದೆ ತಡ, ಅವನ ತಲೆಯಲ್ಲಿ—ಸ್ವತಂತ್ರ ಹಿಂದುಸ್ಥಾನ, ಆಗಸ್ಟ ಹದಿನೈದು, ಅದರ ಭವಿತವ್ಯ—ಇವುಗಳೇ ಆಡತೊಡಗಿದವು ರಾಷ್ಟ್ರದ ಭವಿಷ್ಯವು ಉದಯಿಸುವದೆಲ್ಲಿ—ನಮ್ಮ ತಂದೆಯಂತಹ ಜ್ಯೋತಿಷಿಯ ತಲೆಯಲ್ಲಿಯೆ? ಇಂದು ಸತ್ಯಸೃಷ್ಟಿಯಲ್ಲಿ ಇಳಿದಿರುವ ಹಾಗು ಉದಯವಾಗಲಿರುವ ಭವಿಷ್ಯದ ಬೀಜಗಳನ್ನು ಬಿತ್ತಿದುದು, ಜಗತ್ತಿನಲ್ಲಿಯ ಪ್ರಯೋಗಶಾಲೆಗಳಲ್ಲಿಯೆ ಅಲ್ಲವೆ? ಈ ಬೀಜಗಳು ಕಾರಖಾನೆಗಳ ರೂಪದಲ್ಲಿ ಫಲಕಾರಿಯಾಗಿ, ಜನತೆಯ ಹಿತಕ್ಕೆ ಕಾರಣವಾಗಿಲ್ಲವೆ? ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಬಿತ್ತಲ್ಪಟ್ಟ ಶೋಧಗಳು ನಮ್ಮ ಜೀವನವನ್ನು ಬದಲು ಮಾಡಲು ಕಾರಣವಾದಂತೆ, ಇಂದಿನ ಶೋಧಗಳು ನಮ್ಮ ಮುಂದಿನವರ ಜೀವನವನ್ನು ನಿಶ್ಚಯವಾಗಿಯೂ ಬದಲು ಮಾಡಿಯೇ ತೀರುವವು. ಹಿಂದಿನ ಜನರು ವಿಲಾಸ ವಸ್ತುಗಳೆಂದು ಗ್ರಹಿಸಿದ ಅನೇಕ ಸಾಧನಗಳು, ಇಂದು ಅಗತ್ಯದ ವಸ್ತುಗಳಾಗಿವೆ. ಹಿಂದಿನ ಕಾಲದ ರಾಜರು ಅನುಭವಿಸಲು ಸಾಧ್ಯವಿಲ್ಲದ ವಸ್ತುಗಳನ್ನು ಇಂದು ವಿಜ್ಞಾನವು ಜನಸಾಮಾನ್ಯನಿಗೆ ಒದಗಿಸಿದೆ; **ಅದು** ದೂರದ ಕಲ್ಪನೆಯನ್ನೇ ತೆಗೆದು ಹಾಕುವದರಲ್ಲಿದೆ ಜಗತ್ತಿನಲ್ಲಿಯ ನಾವೆಲ್ಲರೂ ಅಣ್ಣ ತಮ್ಮಂದಿರಂತೆ ಇರುವ ವಾತಾವರಣವನ್ನು ಕಲ್ಪಿಸಬೇಕೆಂದಿದೆ. ಜಗತ್ತಿನ ಜನಸಂಖ್ಯೆಯನ್ನು ಕಳೆದ ನೂರು ವರುಷಗಳಲ್ಲಿ ಇಮ್ಮಡಿಯಾಗಿಸಿದೆಯಲ್ಲದೆ, ಸದುಪಯೋಗವನ್ನು ಮಾಡಿದಲ್ಲಿ ಎಲ್ಲರಿಗೂ ಎಲ್ಲ ವಿಷಯಗಳಲ್ಲಿಯೂ ಸಮೃದ್ಧಿಯನ್ನು ಕಲ್ಪಿಸಬೇಕೆಂದಿದೆ. ಇನ್ನು ಸ್ವಾತಂತ್ರ್ಯವೆಂದರೇನು—ಅದನ್ನು ಉಪಭೋಗಿಸುವದೆಂದರೇನು? ಹಾ!! ನೆಹರೂರವರು ಹೇಳಿದ 'ಅಜ್ಞಾನ, ದಾರಿದ್ರ್ಯ ಮತ್ತು ರೋಗ' ಇವುಗಳ ನಿರ್ಮೂಲನವೆ ಸ್ವಾತಂತ್ರ್ಯದ ಹಿನ್ನೆಲೆಯಲ್ಲವೆ? ಇಂತಹ ಸ್ವಾತಂತ್ರ್ಯವನ್ನು— ಬರಗಾಲ, ಸಾಂಕ್ರಾಮಿಕ ರೋಗಗಳು, ಜಾತೀಯ ಕಲಹಗಳು, ಅಜ್ಞಾನ, ದಾರಿದ್ರ್ಯ ಇವುಗಳಲ್ಲಿ ಮುಳುಮುಳುಗಿ ಏಳುತ್ತಿರುವ ಹಿಂದುಸ್ಥಾನದಲ್ಲಿ ಎಂತು ಸಾಧಿಸುವದು? ನನ್ನ ಅಪ್ಪನ ಭವಿಷ್ಯವು ಇದನ್ನು ಸಾಧಿಸುವದೇ?

ಹೀಗೆ ವಿಚಾರತಂದ್ರಿಯಲ್ಲಿರುವ ಅರವಿಂದನಿಗೆ ಯಾರೋ ತನ್ನ ಬಾಗಿಲನ್ನು ತಟ್ಟಿದಂತಾಯಿತು. ಸಪ್ಪಳದೆಡೆಗೆ ತನ್ನ ಲಕ್ಷ್ಯವನ್ನು ಪೂರಯಿಸಿ ಬಾಗಿಲನ್ನು ತೆರೆಯಬೇಕೆನ್ನುವದರೊಳಗೆಯೇ, ಬಾಗಿಲವು ತನ್ನಿಂದ ತಾನೆ

ತೆರೆಯಿತು. ಅವನು ಮಲಗಿದ ಕೋಣೆಯು ವಿಶಾಲವಾಗತೊಡಗಿತು. ಅವನು ಬಾಗಿಲೆಡೆಗೆ ನೋಡುತ್ತಾನೆ; ಅನೇಕ ಜನರು ಒಳಗೆ ಪ್ರವೇಶಿಸುವದ ರಲ್ಲಿದ್ದಾರೆ ಹಾಗು ಇವನೆಡೆಗೆ ಬರತೊಡಗಿದ್ದಾರೆ. ಆ ಜನರ ಉಡುಪಿನಿಂದ ಅರವಿಂದನಿಗೆ, ಆ ಜನರು ಕೇವಲ ಒಂದೇ ರಾಷ್ಟ್ರದವರಿರದೆ ಬೇರೆ ಬೇರೆ ರಾಷ್ಟ್ರದ ವರೆಂಬ ಕಲ್ಪನೆಯು, ಒಮ್ಮೆಲೇ ಹೊಳೆಯಿತು ಮೇಲಾಗಿ ಅವರಲ್ಲಿ ಎಲ್ಲರೂ ಪುರುಷರೇ ಇರುವರೆಂದಲ್ಲ, ಅವರ ಜೊತೆಗೆ ಒಬ್ಬ ಹೆಣ್ಣು ಮಗಳೂ ಇದ್ದಾಳೆ. ಇದನ್ನೆಲ್ಲ ಎವೆಯಿಕ್ಕದೆ ಕುತೂಹಲದಿಂದ ನೋಡಲಿರುವ ಅರವಿಂದನಿಗೆ ದಿಗ್ಭ್ರಮೆ ಯಾಯಿತು. ಆ ಜನರೆಲ್ಲರೂ ಅರವಿಂದನೆಡೆಗೆ ಸಾಗತೊಡಗಿದರು. ಅವರು ಸಮೀಪಕ್ಕೆ ಬಂದೊಡನೆಯೆ, ಅರವಿಂದನಿಗೆ ಆ ಜನರೆಲ್ಲರನ್ನೂ ತತ್ಪೂರ್ವದಲ್ಲಿ ಎಲ್ಲಿಯೊ ನೋಡಿದಂತೆ ಭಾವನೆಯಾಗತೊಡಗಿತು. ಅವರೆಲ್ಲರೂ ತಮ್ಮ ಬರುವಿಕೆಯಿಂದ ತಮ್ಮದೆ ಆದ ಒಂದು ವಾತಾವರಣವನ್ನೇ ನಿರ್ಮಿಸಿದ್ದರು. ಅರವಿಂದನ ಮೈಯಲ್ಲಿ ವಿದ್ಯುತ್ಸಂಚಾರವಾದಂತೆ, ಏನೋ ಒಂದು ಹುಮ್ಮಸವೆ ತಲೆದೋರಿತು. "ಇದೇನು ಎಂತಹ ಪ್ರತಿಭಾಸಂಪನ್ನರಿವರು? ತಮ್ಮ ಮೋರೆಯ ಮೇಲೆಯೇ ತಮ್ಮ ಅಂತರಂಗವನ್ನು ಮೂಡಿಸಿರುವ ಮಹನೀಯರಿವರಾರು? ಇವರೆಲ್ಲರೂ ಜಗತ್ತಿನೊಳಗಿನ ಜ್ಞಾನವನ್ನು ಗುರುತಿಸಿ – ಅದರ ಬಲ ದಿಂದ ಜನತೆಗೆ ಸುಖಸೌಹಾರ್ದವನ್ನು ಉಂಟುಮಾಡಲು ಟೊಂಕಕಟ್ಟಿ ದಂತಿದೆ. ಇದೇನು, ಈ ಜನರಿಗೆ ಸ್ವಾರ್ಥದ ಕಲ್ಪನೆಯೇ ಹಿಂದುಬಿದ್ದಿದೆಯೆ"?

ಇದೆಲ್ಲವನ್ನೂ ನೋಡಿ ತನ್ನ ಮನಸ್ಸನ್ನು ಸ್ತಿಮಿತದಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಿರುವ ಅರವಿಂದನು, ಈಗ ಆ ಜನರೆಲ್ಲರನ್ನೂ ಗುರುತಿಸಿದನು. ಗ್ಯಾಲಿಲಿಯೋನಿಂದ ಆದಿಯಾಗಿ ಮಾಯಕೆಲ್ ಫೆರಡೆ, ಜಾರ್ಜ ಸ್ಟಿವ್ಹೆನ್ಸನ್, ಮಾರ್ಕೊನಿ, ಮಾಡೆಮ್ ಕ್ಯೂರಿ, ಪಿ. ಸಿ. ರೇ, ಜಗದೀಶಚಂದ್ರ ಬೋಸ್ ಮುಂತಾದವರೆಲ್ಲರೂ ಆ ಗುಂಪಿನಲ್ಲಿ ಇರುವರೆಂದು ತಿಳಿಯಿತು. ಅವನ ಆನಂದಕ್ಕೆ ಪಾರವೇ ಇಲ್ಲದಾಯಿತು. ವೃದ್ಧಾಪ್ಯದಿಂದ ಹಾಗೂ ಅನೇಕ ವರುಷಗಳ ಕಾರಾಗ್ರಹವಾಸದಿಂದ ಬಳಲಿದ ಗ್ಯಾಲಿಲಿಯೋನನ್ನು ಕಂಡೊಡ ನೆಯೆ, ಅವನ ಚರಿತ್ರೆಯಲ್ಲಿಯ ಮುಖ್ಯ ಅಂಶಗಳೆಲ್ಲವೂ ಅವನ ಸ್ಮೃತಿಪಟಲದ ಮೇಲೆ ಒಂದೊಂದಾಗಿ ಹಾಯತೊಡಗಿ, ಅವನ ಕಣ್ಣುಗಳೆಲ್ಲವೂ ನೀರಿನಿಂದ ತುಂಬಿಬಂದವು. ಅರವಿಂದನಿಗೆ ತಡೆಯದಾಯಿತು. ಗ್ಯಾಲಿಲಿಯೋನನ್ನು ಕುರಿತು 'ಜ್ಞಾನಪಿಪಾಸೆಯ ಇಚ್ಛೆಯೆದುರು ದೇಹದ ಕಷ್ಟವನ್ನೇ ಮರೆತ ಮಹಾನುಭಾವಾ, ಎಂತಹ ಕಷ್ಟಗಳನ್ನು ಜೀವಮಾನದಲ್ಲಿ ಅನುಭವಿಸಿದೆ?

ಜನರು ನಿನ್ನನ್ನಲ್ಲವೆ ಪ್ರಯೋಗ ವಿಜ್ಞಾನದ ಜನಕನೆಂದು ಸಂಬೋಧಿಸುವದು? ರವಿಯು ವಿಶ್ವಕೇಂದ್ರತತ್ವವನ್ನು ಪ್ರತಿಪಾದಿಸಿದ ಮೂಲಕ, ಜೀವನದ ಉತ್ತರ ಭಾಗವನ್ನು ಕಾರಾಗ್ರಹದಲ್ಲಿ ಸವೆಯಿಸಿದಿಯಲ್ಲದೆ ವೇದನಾಯಂತ್ರದಲ್ಲಿ ಸಿಕ್ಕಿಸಲ್ಪಟ್ಟ ನಿನ್ನ ಸ್ಮಾರಕವನ್ನು ನಿನ್ನವರು ಮಾಡದಿದ್ದರೂ, ನಿನ್ನ ವಿಚಾರಗಳ ಸ್ಮಾರಕವನ್ನು ಜಗದ್ವಿಖ್ಯಾತ ನ್ಯೂಟನ್‌ನು ಮಾಡಲಿಲ್ಲವೇ?

ಇಷ್ಟರಲ್ಲಿಯೆ ಅರವಿಂದನು ಬದಿಗೆ ನೋಡುತ್ತಾನೆ—ಇದೇನು, ಮಾಯ ಕೆಲ್ ಫೆರಡೆ! ಅವನನ್ನು ಕಂಡ ಅರವಿಂದನು 'ವಿದ್ಯಾಸಂಪನ್ನನಾದ ವಿನಯಮೂರ್ತಿಯೆ, ನಿನ್ನ ಸಂಬಂಧವಾಗಿ ನಿನ್ನ ಗುರುವು ಪಟ್ಟ ಅಭಿಪ್ರಾಯವು ನನಗೆ ಗೊತ್ತಿದೆ. ತನ್ನ ಶೋಧಗಳಲ್ಲಿ ಅತಿ ದೊಡ್ಡ ಶೋಧವು ನೀನೆ ಎಂದು ನಿನ್ನ ಗುರುವಾದ ಡೇವ್ಹಿ ಅಂದುದನ್ನು ನಾನು ಬಲ್ಲೆ. ವಿದ್ಯುತ್ತಿನಿಂದ ನಡೆಯಲಿರುವ ಯಾವುದೆ ಯಂತ್ರದ ಜೀವವಾದ ಡಾಯನಾವೋವನ್ನು ಶೋಧಿಸಿದವನು ನೀನಲ್ಲವೆ? ನಿನ್ನ ಶೋಧದಿಂದ ಎಷ್ಟು ಜನರಿಗೆ ಅನ್ನ ಹಾಗು ವಿಶ್ರಾಂತಿಯನ್ನು ಕಲ್ಪಿಸಿಕೊಟ್ಟಿ ಎಂಬುದು ಇಂದು ನೀನು ಬದುಕಿದ್ದರೆ ನಿನಗೆ ಗೊತ್ತಾಗುತಿತ್ತು. ನಿನ್ನ ಶೋಧದ ಬಲದಿಂದ ಆ ಧನಿಕ ಗಿರಣಿಗಳ ಒಡೆಯರು ಕೆಲಸಗಾರರನ್ನು ವಂಚಿಸಿ ತಮ್ಮ ಬೊಕ್ಕಸವನ್ನು ದಿನೇ ದಿನೇ ಬೆಳೆಯಿಸುತ್ತಿದ್ದರೆ, ಹೀಗಾದುದು ನಿನ್ನ ತಪ್ಪೇ? ನೀನು ಸಹಸ್ರಾರು ಪ್ರಯೋಗಗಳನ್ನು ಮಾಡದೆ, ಇದೊಂದೆ ಶೋಧವನ್ನು ಮಾಡಿದ್ದರೂ ಇಷ್ಟೇ ಜಗದ್ವಿಖ್ಯಾತನಾಗುತ್ತಿದ್ದೆ. ನಿನ್ನ ಡಾಯನಾಮೋದ ಶೋಧವನ್ನು ಕುರಿತು ಒಬ್ಬ ಹೆಣ್ಣುಮಗಳು—ಈ ಶೋಧದ ಉಪಯೋಗವೇನೆಂದು ಕೇಳಿದಾಗ, ಇದೇ ಜನಿಸಿದ ಕೂಸಿನ ಉಪಯೋಗವೇನೆಂಬುದನ್ನು ಹೇಳಬಲ್ಲಿರಾ—ಎಂದು ಕೇಳಿದುದು, ಎಷ್ಟು ಮಾರ್ಮಿಕವಾಗಿದೆ. ಇಂದು ಈ ಕೂಸು ಪ್ರಪಂಚವನ್ನೇ ಆಳತೊಡಗಿಲ್ಲವೆ! ಇದೇ ತರದ ಪ್ರಶ್ನೆಯನ್ನು ಗ್ಲ್ಯಾಡ್‌ಸ್ಟನ್‌ರವರು ಕೇಳಿದಾಗ ನೀನು ನುಡಿದ ಭವಿಷ್ಯವು—ನೀವು ಮುಂದೆ ಈ ಶೋಧದ ಮೇಲೆ ನಿಸ್ಸಂದೇಹವಾಗಿ ಸುಂಕವನ್ನು ಕೂಡಿಸಬಲ್ಲಿರಿ—ಎಂಬುದು ಎತ್ತ ಮತ್ತು ನನ್ನ ತಂದೆಯು ಭವಿಷ್ಯವೆತ್ತ?"

ಉಳಿದವರಲ್ಲಿಯ ಅನೇಕರನ್ನು ಗುರುತಿಸಿ ಅರವಿಂದನು—"ಹೃದಯದಿಂದ ಪೂರೈಸಲ್ಪಟ್ಟ ರಕ್ತವನ್ನು ದೇಹದ ಅನೇಕ ಭಾಗಗಳಿಗೆ ಮುಟ್ಟಿಸುವ ರಕ್ತನಾಳಗಳಂತೆ, ಪೃಥ್ವಿಯ ಮೇಲಿನ ಮುಖ್ಯ ಮುಖ್ಯ ಕೇಂದ್ರಗಳನ್ನು ಜೋಡಿಸಲಿರುವ ಉಗಿಬಂಡಿಗಳಿಗೆ ಕಾರಣನಾದ ಈತನು ಜಾರ್ಜ ಸ್ಟಿವ್ಹೆನ್ಸನ್‌ನು ಸಮುದ್ರದಲ್ಲಿ ಸಂಚರಿಸುವ ಅನೇಕ ಹಡಗಗಳನ್ನು ದುರಂತದಿಂದ ತಪ್ಪಿಸಲು ಹಾಗು ಇಂದಿನ ಜಗತ್ತಿನಲ್ಲಿಯ ಅನೇಕ ಸೌಕರ್ಯಗಳಿಗೆ ಕಾರಣವಾದ

ಬಾನುಲಿಯ ಸಂಶೋಧಕನಾದ ಮಾರ್ಕೋನಿಯಲ್ಲವೆ ಈತನು? ಕ್ಯಾನ್ಸರ
ರೋಗದಿಂದ ಜನತೆಗೆ ಒದಗಿದ ಗಂಡಾಂತರವನ್ನು ತಪ್ಪಿಸಲು ಕಾರಣವಾದ
ಶೋಧವನ್ನು ನಡೆಯಿಸಿ, ತನ್ನ ಜೀವನವನ್ನೇ ಕಡೆಗಣಿಸಿದ ಸಾಧ್ವೀಮಣಿ
ಮ್ಯಾಡೆಮ್ ಕ್ಯೂರಿಯಲ್ಲವೆ ಈಕೆಯು? ಇದೇನು, ಜನತೆಯನ್ನು ಮಲೇರಿಯಾ,
ವಿಷಮಜ್ವರ, ಕ್ಷಯ ಇತ್ಯಾದಿ ರೋಗಗಳಿಂದ ಮುಕ್ತಮಾಡಲು ಕಾರಣೀ
ಭೂತರಾದ ಮಹನೀಯರೆಲ್ಲರೂ ಇಲ್ಲಿ ಬಂದಿದ್ದಾರೆ. ನಮ್ಮವರಾದ ಆಚಾ
ರ್ಯರೇ, ಜಗದೀಶಚಂದ್ರಬೋಸ್, ರಾಮನ್, ಮೇಘನಾದ ಸಹಾ, ಭಾಭಾ
ಇವರೂ ಸಹ ಬಂದಿದ್ದಾರೆ." ಇವರೆಲ್ಲರನ್ನೂ ಕಂಡ ಅರವಿಂದನು ನಮ್ರ
ಪೂರ್ವಕವಾಗಿ ಕೈಜೋಡಿಸಿ 'ರಾಷ್ಟ್ರದ ಉನ್ನತಿಗೆ ಕಾರಣೀಭೂತವಾದ
ಅಪೂರ್ವ ಶೋಧಗಳನ್ನು ನಡೆಯಿಸಿದ ಮಹನೀಯರೇ—ನೋಡಿರಿ, ಕಣ್ತೆರೆದು
ಲಕ್ಷ್ಯಪೂರ್ವಕವಾಗಿ ನೋಡಿರಿ—ದುರ್ದಶೆಯ ಹೊಸ್ತಿಲದ ಮೇಲೆ ನಿಂತ
ಭಾರತವನ್ನು ನೋಡಿರಿ. ಸ್ವತಂತ್ರ ರಾಷ್ಟ್ರವೆಂದು ಕರೆಯಿಸಿಕೊಳ್ಳುವ
ಯೋಗ್ಯತೆಯು ನಮ್ಮಲ್ಲಿ ಬರಲಾರದೇ? ಕರ್ತವ್ಯಮೂಢರಾಗಿ ಆಲಸ್ಯ
ವನ್ನೇ ಆರಾಧಿಸಲಿರುವ ಹಾಗು ಸ್ವಾರ್ಥವನ್ನೇ ಧ್ಯೇಯವಾಗಿರಿಸಿದ ಜನರು
ನಮ್ಮಲ್ಲಿ ಅನೇಕರಿರುವರೆಂದು ನಾನು ತಮಗೆ ಹೇಗೆ ಹೇಳಲಿ? ರಾಷ್ಟ್ರದ
ಭವಿತವ್ಯವನ್ನು ನಿರ್ಮಿಸಲಿರುವವರು ತಮ್ಮಂತಹ ಕಾರ್ಯಕರ್ತರೇ ಎಂಬು
ವದನ್ನು, ಭಾರತೀಯರೆಲ್ಲರಿಗೂ ಹೇಗೆ ಮನಗಾಣಿಸಿಕೊಡಲಿ? ನಮ್ಮ ತಂದೆ
ಯಂತಹ ಅನೇಕ ಭವಿಷ್ಯವರ್ತಕರು ಹೇಗೆ ಸುಧಾರಿಸಬಹುದು? ತಮ್ಮಂತಹ
ವಿಭೂತಿವ್ಯಕ್ತಿಗಳು ಭಾರತದಲ್ಲಿ ಇನ್ನೂ ಹೆಚ್ಚೆಚ್ಚಾಗಿ ಉದಯಿಸಲಾರರೇ?
ನೆಹರೂರವರ ಸ್ವಾತಂತ್ರ್ಯಸಂದೇಶವನ್ನು ಪ್ರತಿನಿತ್ಯವೂ ರಾಮನಾಮದಂತೆ
ನೆನೆದು ಸ್ಫೂರ್ತಿಯನ್ನು ಪಡೆಯಿರೆಂದು ಹೇಳಲ್ಯಾ? ಜಗತ್ತಿನಲ್ಲಿಯ ಸ್ವತಂತ್ರ
ರಾಷ್ಟ್ರಗಳು ಅನುಸರಿಸಲಿರುವ ಮಾರ್ಗವನ್ನು, ಭಾರತವು ಅದೆಂತು ಸಾಧಿಸ
ಬಹುದು? ತಮ್ಮಲ್ಲಿಯ ಅನೇಕರು ಭಾರತದಲ್ಲಿ ಉದಯಿಸಿ, ಸ್ವಾತಂತ್ರ್ಯ ಸಾಧ
ನೆಯ ಕಾರ್ಯವು ಮುಂದಾದರೂ ಸುಗಮವಾಗಿ ಸಾಗುವಂತಾಗಲಿ ಎಂದು,
ಭಾರತಾಂಬೆಯನ್ನು ಪ್ರಾರ್ಥಿಸಲ್ಯಾ?" ಹೀಗೆ ಪರಿತಪಿಸುವ ಅರವಿಂದನನ್ನು
ಕಂಡು ಅವರೆಲ್ಲರೂ ಏಕಕಂಠದಿಂದ 'ತಸ್ಮಾತ್ ಯುದ್ಧ್ಯಸ್ವಭಾರತ, ಕರ್ಮಣ್ಯೇ
ವಾಧಿಕಾರಸ್ತೇ, ಉತ್ತಿಷ್ಠತ ಜಾಗ್ರತ' ಎಂಬ ಈ ಮೂರು ವಚನಗಳನ್ನು
ಅಂದಂತೆ ಅವನಿಗೆ ಭಾಸವಾಯಿತು. ಅಷ್ಟರಲ್ಲಿಯೇ ತಂದೆಯ 'ಉತ್ತಿಷ್ಠೋತ್ತಿಷ್ಟ
ಗೋವಿಂದ...' ಎಂಬ ಪ್ರಾತಃಸ್ಮರಣೆಯಿಂದ ಅರವಿಂದನಿಗೆ ಎಚ್ಚರವಾಯಿತು.

'ತ್ರೈಲೋಕ್ಯಂ ಮಂಗಳಂಕುರು' ಎಂದು ತಂದೆಯು ಪ್ರಾತಃಸ್ಮರಣೆಯು ಕಿವಿಗೆ ಬಿದ್ದೊಡನೆಯೆ ಅರವಿಂದನಿಗೆ ಹೊಟ್ಟೆಯಲ್ಲಿ ಕಸಿವಿಸಿಯಾದಂತಾಯಿತು. ತಂದೆಯು ಆಚರಣೆಗೂ ಮೇಲಿನ ಅರ್ಥಪೂರ್ಣಮಾತಿಗೂ ಸಂಬಂಧವಿಲ್ಲದುದೇ ಇದರ ಕಾರಣವು. 'ನನ್ನ ತಂದೆಯು ದಿನಾಲು ಎಬ್ಬಿಸುವ ಗೋವಿಂದನಾರು? ಇವನಲ್ಲವೆ ಶಾಸ್ತ್ರಜ್ಞರು ವಿಜ್ಞಾನ ಇಲ್ಲವೆ ನಿಸರ್ಗವೆಂದು ಸಂಬೋಧಿಸುವ ಮತ್ತು ಪಂಚಭೂತಗಳ ವಿವಿಧ ವ್ಯಾಪಾರವನ್ನು ನಿಯಂತ್ರಿಸುವವನು? ಇಂತಹ ಅರ್ಥ ಪೂರ್ಣ ಸ್ಮರಣೆಯನ್ನು ಕಳೆದ ಅನೇಕ ವರ್ಷಗಳಿಂದ ಗಿಳಿಯಂತೆ ಮಾತ್ರ ಪಠಿಸುತ್ತಿದ್ದಾನೆ. ಇದೇ ನನಗೆ ದರ್ಶನವಿತ್ತು ಮಾರ್ಗಪ್ರದರ್ಶನವನ್ನು ಮಾಡಿ, ನನ್ನ ಕರ್ತವ್ಯವನ್ನೂ ಹಾಗು ನಾನು ನೆರವೇರಿಸಬೇಕಾದ ಕಾರ್ಯಗಳ ವಿವರ ಗಳನ್ನೂ ತಿಳುಹಿಸಿದ ರಾಷ್ಟ್ರನಿರ್ಮಾತೃಗಳು ನನ್ನ ತಂದೆಗೆ ದರ್ಶನವೀಯ ಬೇಕಾಗಿತ್ತು. ಬುದ್ಧಿಪುರಸ್ಸರವಾಗಿ ಅಜ್ಞಾನದ ಹಾದಿಯನ್ನು ತುಳಿಯುತ್ತಿರುವ ಅವನಿಗೆ ಭೆಟ್ಟಿಯಾಗಿದ್ದರೂ ಸಹ ಏನೂ ಸಾಧಿಸುತ್ತಿರಲಿಲ್ಲ. ಕಾರಣ ಇಂತಹ ಮಹನೀಯರಿಂದ ಉತ್ತೇಜಿತನಾದ ನನ್ನ ಕಾರ್ಯಕ್ಷೇತ್ರವು ಮೊದಲನೆಯ ದಾಗಿ ನನ್ನ ಮನೆಯೇ ಆಗಬೇಕು' ಇಷ್ಟು ಸಂಕಲ್ಪ ಮಾತ್ರದಿಂದ ಅವನಿಗೆ ಉಂಟಾದ ಮನಸ್ತಾಪವು ಶಾಂತವಾಯಿತಲ್ಲದೆ, ಏನೊ ಒಂದು ನಿರ್ಧಾರ ದಿಂದಲೆ ಹಾಸಿಗೆಯಿಂದ ಎದ್ದನು

## (೨)

ಅರವಿಂದನು ಇನ್ನೂ ಚಿಕ್ಕವನು. ಅವನ ವಯಸ್ಸು ಇಪ್ಪತ್ತೈದನ್ನು ಕೂಡ ಮಿಕ್ಕಿರಲಿಲ್ಲ. ವಿದ್ಯಾ, ವಿನಯ ಹಾಗು ಸುಖಜೀವನವನ್ನು ಉಪ ಭೋಗಿಸುತ್ತಿದ್ದ ಅರವಿಂದನ ಮುಖವು ಒಂದು ವಿಶಿಷ್ಟಕಳೆಯಿಂದ ಶೋಭಿ ಸುತ್ತಿತ್ತು. ಅವನು ವಿಚಾರವಂತನಿದ್ದ ಮೂಲಕ ಪರರ ಸುಖದಲ್ಲಿ, ಹೆಚ್ಚಿನ ಸುಖವನ್ನು ಕಂಡುಕೊಳ್ಳುವ ಅವನ ಗುಣವು ಎದ್ದು ಕಾಣುತ್ತಿತ್ತು. ಯಾವ ವಿಚಾರವನ್ನಾದರೂ ಆಚಾರದ ಒರೆಗಲ್ಲಿಗೆ ತಿಕ್ಕಿನೋಡದೆ ಗ್ರಹಿಸುವದು ಅವನ ಸ್ವಭಾವದಲ್ಲಿರಲಿಲ್ಲ. ತನ್ನ ವಿಷಯವನ್ನಲ್ಲದೆ, ದೇಶದೊಳಗಿನ ರಾಜಕೀಯ ಹಾಗು ಸಾಮಾಜಿಕ ಆಗುಹೋಗುಗಳನ್ನು ಕುರಿತು ತಕ್ಕಮಟ್ಟಿಗೆ ಅಭ್ಯಾಸ ಮಾಡಿದ್ದಾನೆ. ಮನುಷ್ಯನು ವಿಜ್ಞಾನದ ಸೌಕರ್ಯಗಳನ್ನು ಉಪಭೋಗಿಸ ಬೇಕೆಂದು ಇಚ್ಛಿಸಿದರೂ, ಇಂತಹ ಇಚ್ಛೆ ಹಾಗು ಹಕ್ಕು ಎಲ್ಲರಿಗೂ ಇರಬಹು ದೆಂಬುದನ್ನು ಗ್ರಹಿಸುವಷ್ಟು, ರಾಜಕಾರಣಿಗಳು ಬುದ್ಧಿವಂತರಾಗಿಲ್ಲವೆಂದು

ಇವನ ಅಭಿಪ್ರಾಯ. ಇಂದು ನಡೆದ ವಿಜ್ಞಾನದ ದುರುಪಯೋಗವನ್ನು ನಿವಾರಿಸಲು, ವಿಜ್ಞಾನದ ಹೆಚ್ಚು ಹೆಚ್ಚು ಉಪಯೋಗದಿಂದ ಜನರಿಗೆ ಎಲ್ಲ ವಿಷಯಗಳಲ್ಲಿ ಸಮೃದ್ಧಿಯನ್ನು ಕಲ್ಪಿಸುವದರಿಂದಲೇ ಸಾಧ್ಯವೆಂದೂ ಹಾಗು ವಿಜ್ಞಾನವನ್ನು ತ್ಯಜಿಸಿ ಮೂಲಸ್ಥಿತಿಗೆ ತಿರುಗುವದು ಮೂರ್ಖತನದ್ದೆಂದೂ ಈತನ ವಾದ. ಅದರಂತೆಯೇ ಸಾರ್ವತ್ರಿಕ ಸಂಪು ಇತ್ಯಾದಿಗಳಿಂದ, ರಾಷ್ಟ್ರಕ್ಕೆ ಹೇಗೆ ಹಾನಿ ತಟ್ಟುವದು ಇತ್ಯಾದಿ ವಿಷಯಗಳನ್ನು, ಇವನು ಅನೇಕರೊಡನೆ ಚರ್ಚಿಸಿದ್ದಾನೆ; ಮತ್ತು ತನ್ನ ಕೈಯ್ಯಲ್ಲಿ ಅಧಿಕಾರವು ಬಂದುದಾದರೆ, ಮೊದಲನೆಯದಾಗಿ ಜನತೆಗೆ ತನ್ನ ನಾಗರಿಕತೆಯ ಹಕ್ಕುಗಳನ್ನು ತಿಳುಹಿಸಲು ಅವರ ಅಜ್ಞಾನ ನಿವಾರಣೆಯ ಕಾರ್ಯವನ್ನು ಕೈಕೊಳ್ಳುವದಾಗಿಯೂ, ಮತ್ತು ಎರಡನೆಯದಾಗಿ ಎಲ್ಲರಿಗೂ ಉದ್ಯೋಗವನ್ನು ಕಲ್ಪಿಸಿ ರಾಷ್ಟ್ರಘಾತಕವಾದ ಆಲಸ್ಯದ ಬೇರನ್ನೇ ಕಡಿಯಬೇಕೆಂದಿದ್ದಾನೆ. ಇಂದು ಹಾಸಿಗೆಯಿಂದ ಎದ್ದೊಡನೆಯೆ ಮಾಡಿದ ನಿರ್ಧಾರವೆಂದರೆ — ಈ ಪ್ರಯೋಗವನ್ನು ಮೊದಲನೆಯದಾಗಿ ತನ್ನ ಮನೆಯಲ್ಲಿಯೆ ಪ್ರಾರಂಭಿಸಬೇಕೆಂದುದು.

ತಂದೆಯೆದುರು ಎಂದೂ ಹೆಚ್ಚು ಮಾತನಾಡದ ಅರವಿಂದನು ಇಂದು ಅವನೊಡನೆ ವಾದಿಸಿ ಅನನನ್ನು ತನ್ನ ವಿಚಾರಸರಣಿಗೆ ಎಳೆಯಬೇಕೆಂದಿದ್ದಾನೆ. ರಾವ ಶಾಸ್ತ್ರಿಗಳಾದರೂ - ಹಣದ ವಿಷಯವನ್ನೊಂದು ಹೊರತುಪಡಿಸಿದಲ್ಲಿ ಎಲ್ಲ ವಿಷಯಗಳಲ್ಲಿಯೂ ಚಿಕ್ಕವರ ಪುರೋಗಾಮಿ ವಿಚಾರಗಳನ್ನು (ಅವುಗಳು ನಿಜವಾಗಿಯೂ ಪುರೋಗಾಮಿ ಎಂದು ಕರೆಯಿಸಿಕೊಳ್ಳಲು ಯೋಗ್ಯವಿದ್ದಲ್ಲಿ) ಒಪ್ಪುವ ಸ್ವಭಾವದವರು. ಹಣದ ನಿಮಿತ್ತವಾಗಿ ಜ್ಯೋತಿಷವನ್ನು ಅನುಕೂಲ ಜ್ಯೋತಿಷವಾಗಿ ಮಾರ್ಪಡಿಸಿದ್ದರೂ, ತಮ್ಮ ವಿಷಯವನ್ನು ಪೂರ್ಣ ಬಲ್ಲವರು. ಮೇಲಾಗಿ ಯಾವುದೇ ಸಂದರ್ಭದಲ್ಲಿಯೂ, ಒಂದು ವಿಷಯವಾಗಿ ಮನಸ್ಸಿಗೆ ಖಾತ್ರಿಯಾಯಿತೆಂದರೆ ತೀರಿತು, ಎಂದೂ ಅದರಿಂದ ಪರಾವೃತ್ತರಾಗುವವರಲ್ಲ. ಹೀಗಾಗಿ ಈ ಎಲ್ಲ ವಿಷಯಗಳನ್ನು ಬಲ್ಲ ಅರವಿಂದನು, ತನ್ನ ಕಾರ್ಯದ ರೂಪರೇಷೆಯನ್ನು ಮನದಲ್ಲಿಯೇ ಗುಣಿಸುತ್ತ, ತಂದೆಯೆಡೆಗೆ ಸಾಗಿದನು.

ತುಲಸೀಮೃತ್ತಿಕೆಯನ್ನು ಲೇಪನಮಾಡಿಕೊಳ್ಳುತ್ತಿದ್ದ ಶಾಸ್ತ್ರಿಗಳಿಗೆ ತಮ್ಮೆಡೆಗೆಯೆ ಬರುತ್ತಿರುವ ಮಗನನ್ನು ಕಂಡೊಡನೆ, ಪಿತೃವಾತ್ಸಲ್ಯಕ್ಕೆ ತಕ್ಕಂತೆ, ಅರವಿಂದನ ಭವಿತವ್ಯವನ್ನು ಕುರಿತು ಅಭಿಮಾನವೆನಿಸತೊಡಗಿತು. ತಮ್ಮ ಮಗನು ಮುಂದೆ ದೊಡ್ಡ ಮನುಷ್ಯನಾಗುವವ, ದೊಡ್ಡ ಸಂಶೋಧಕನಾಗಿ ರಾಮನ್

ಇತ್ಯಾದಿ ವಿಜ್ಞಾನಿಗಳ ಪಂಕ್ತಿಯಲ್ಲಿ ನಿಲ್ಲುವ ಮುಂತಾದ ವಿಷಯಗಳು, ಅವರ ಅಭಿಮಾನವನ್ನು ಇನ್ನೂ ಹೆಚ್ಚಿಸಿದವು. ಕೆಳಗೆ ಮೋರೆಯನ್ನು ಹಾಕಿಕೊಂಡು ವಿನಯದಿಂದ ತಮ್ಮೆಡೆಗೆ ಬರುವ ಅರವಿಂದನನ್ನು ಕಂಡೊಡನೆಯೆ, ಚಾಣಾಕ್ಷರಾದ ಶಾಸ್ತ್ರಿಗಳು ತಮ್ಮ ಮಗನಿಗೆ ತಮ್ಮೊಡನೆ ಏನೊ ಮಾತನಾಡುವದಿದ್ದು ಅವನು ಸಂಕೋಚಪಡುತ್ತಿರುವನೆಂದು ಊಹಿಸಿದರು. ಈ ಸಂಕೋಚವನ್ನು ದೂರಮಾಡಲೆಂದೊ ಏನೋ ಅವರು ಮಗನನ್ನು ತಾವೆ ವಾತ್ಸಲ್ಯದಿಂದ ಹತ್ತರ ಕರೆದು ಅವನೊಡನೆ ಮಾತನ್ನು ಪ್ರಾರಂಭಿಸಬೇಕೆಂದರು.

ಈಗ ಮಾತ್ರ ಅರವಿಂದನಿಗೆ ಪೇಚಿಗಿಟ್ಟುಕೊಂಡಿತು. ತಂದೆಯೊಡನೆ ವಾದಮಾಡಬೇಕೆಂಬ ಸಂಕಲ್ಪದಿಂದ ಬಂದ ಅರವಿಂದನಿಗೆ ತಂದೆಯ ವಾತ್ಸಲ್ಯದೆದುರು ನಮ್ರನಾಗಬೇಕಾಯಿತು ತಂದೆಯನ್ನು ಪ್ರೀತಿಯಿಂದ ಗೆಲಿಯಬೇಕೆಂದು ತನ್ನ ಸಂಕಲ್ಪವನ್ನು ಬದಲಿಸಿದನು. ಅವನು ತಂದೆಯ ಹತ್ತರ ಹೋಗುವದೆ ತಡ, ಕಣ್ಣುಗಳಿಂದ ನೀರು ಧಾರಿಧಾರಿಯಾಗಿ ಹರಿಯತೊಡಗಿತು. ಇದನ್ನು ಕಂಡ ಶಾಸ್ತ್ರಿಗಳಿಗೆ ಏನೂ ತೋಚದಾಯಿತು. ಅವರು ಅರವಿಂದನನ್ನು ಸಂತೈಸುವದು ಹೆಚ್ಚಿದಂತೆ, ಇವನ ದುಃಖವೂ ಹೆಚ್ಚಾಗತೊಡಗಿತು. ಅರವಿಂದನಿಗೆ ಹೀಗಾಗಲು ಕಾರಣವಿರಲಿಲ್ಲವೆಂದಲ್ಲ ಮೊದಲನೆಯದಾಗಿ ತಂದೆಯ ವಾತ್ಸಲ್ಯದೆದುರು ತನ್ನ ಸಂಕಲ್ಪವು ಕರಗುವದೆಂಬ ಭಯ ಮತ್ತು ಹೀಗೆ ಕರಗಿದಲ್ಲಿ ಎರಡನೆಯದಾಗಿ ತನ್ನ ಧ್ಯೇಯವು ವಿಚಾರದಿಂದ ಆಚಾರಕ್ಕೆ ಸರಿಯುವದೆ ಕಠಿಣವಾಗುವದೆಂಬ ದುಃಖ. ಆದರೆ ಈ ವೇಳೆಯಲ್ಲಿ ಅರವಿಂದನು ತನಗೆ ಕನಸಿನಲ್ಲಿ ದರ್ಶನವಿತ್ತು, ತನ್ನಲ್ಲಿ ಉದಾತ್ತ ಧ್ಯೇಯಗಳನ್ನು ಮೂಡಿಸಲು ಕಾರಣರಾದ ಎಲ್ಲರನ್ನೂ ನೆನೆದು ಧೈರ್ಯವನ್ನು ಕಲೆಹಾಕಿ, ತಂದೆಯೆದುರು ಎಲ್ಲವನ್ನೂ ಬಿಚ್ಚಿಯೇ ತೀರಬೇಕೆಂಬ ಸಂಕಲ್ಪವನ್ನು ಇನ್ನೂ ಹೆಚ್ಚು ದೃಢವಡಿಸಿದನು. ಹಿಂದುಸ್ಥಾನವು ಸ್ವತಂತ್ರವಾದರೂ ಅಜ್ಞಾನದ ಮೂಲಕ ತಮಗೆ ದೊರೆಯಲಿರುವ ಹಕ್ಕುಗಳ ಕಲ್ಪನೆಯೆ ಇಲ್ಲದ ಹಾಗು ರೋಗರುಜಿನಗಳು ಹಸಿವೆ ದಾರಿದ್ರ್ಯ ಇತ್ಯಾದಿಗಳಿಂದ ಬಳಲುವ ಜನತೆಯನ್ನು ನೆನೆದು, ಇವೆಲ್ಲವುಗಳ ನಿವಾರಣೆಗೆ ತನ್ನ ಕೈಲಾದ ನೆರವನ್ನು ನೀಡುವದೇ ತನ್ನ ಆದ್ಯಕರ್ತವ್ಯವೆಂದು ತಿಳಿದು, ಹಿಂದಿನ ದಿನ ತಂದೆಯೆಡೆಗೆ ಹಿಂದುಸ್ಥಾನದ ಭವಿಷ್ಯವನ್ನು ಕೇಳಲು ಬಂದ ವ್ಯಕ್ತಿಯ ಸಂದರ್ಭದಿಂದ ಪ್ರಾರಂಭಿಸಿ ತನ್ನಲ್ಲಿ ಈ ವರೆಗೆ ನಡೆದ ಮನೋವ್ಯಾಪಾರವನ್ನೂ ಹಾಗು ತನಗೆ ಸ್ವಪ್ನದಲ್ಲಿ ದರ್ಶನವಿತ್ತ ಎಲ್ಲ ಮಹನೀಯರ ಚರಿತ್ರೆಗಳನ್ನೂ, ವಿಸ್ತಾರಪೂರ್ವಕವಾಗಿ ತಂದೆಗೆ

ವಿವರಿಸಿದನು. ಇದೇ ವೇಳೆಯಲ್ಲಿ, ತನ್ನ ತಂದೆಯು ಜ್ಯೋತಿಷ್ಯ ನಿಮಿತ್ತವಾಗಿ ಮೊದಲೆ ತಿಳುವಳಿಕೆಯಿಲ್ಲದ ಜನತೆಯನ್ನು ಹೆಚ್ಚುಚ್ಚು ಅಜ್ಞಾನದೆಡೆಗೆ ಒಯ್ಯುವ ಕಾರ್ಯಕ್ರಮವನ್ನು ನಿಂದಿಸಲು ಕೂಡ ಹಿಂಜರಿಯಲಿಲ್ಲ. ಇದೆಲ್ಲವನ್ನು ಲಕ್ಷ್ಯ ಪೂರ್ವಕವಾಗಿ ಕೇಳಲಿರುವ ಶಾಸ್ತ್ರಿಗಳಿಗೆ ತಮ್ಮ ತಪ್ಪು ತಿಳಿಯಿತು. ಮತ್ತು ಕೇವಲ ಹಣದ ನಿಮಿತ್ತವಾಗಿ ತಮ್ಮಿಂದ ಎಂತಹ ಹೀನಾಯ ಕೃತ್ಯಗಳಾಗಿವೆ ಎಂಬುದು ನೆನಪಿಗೆ ಬಂದೊಡನೆ ಅವರಿಗಾದರೂ ಅತಿಯಾದ ವೇದನೆಯಾಯಿತಲ್ಲದೆ, ತಮ್ಮ ಕೃತ್ಯಕ್ಕಾಗಿ ಪಶ್ಚಾತ್ತಾಪವೆನಿಸತೊಡಗಿತು ಅವರು ಮಗನನ್ನು ಕರೆದು "ಮಗೂ ನಿನ್ನ ಎಲ್ಲ ಮಾತುಗಳನ್ನು ಕೇಳಿದ್ದೇನೆ. ನೀನು ನನ್ನ ಕೃತ್ಯಗಳನ್ನು ನಿಂದಿಸಿದಿಯೆಂದು ನಾನೇನು ಸಿಟ್ಟಾಗಿಲ್ಲ. ನಾನು ನಿನಗೆ ಜನ್ಮಕೊಟ್ಟಿರುವ ನೇನೋ ನಿಜ ಆದರೆ ಚಿಕ್ಕವನಾದ ನಿನ್ನಿಂದ ಎಂತಹ ಮಾತುಗಳನ್ನು ಕೇಳಿದೆ? ನಿನ್ನವು ಎಂತಹ ಉದಾತ್ತ ವಿಚಾರಗಳು? ಕೇವಲ ವಿಚಾರಗಳೆನ್ನಬೇಕೇ—ಅಲ್ಲ—ಅವುಗಳನ್ನು ಆಚಾರದಲ್ಲಿ ಇಳಿಸಬೇಕೆಂಬ ಹಂಬಲ ಕೂಡ ಇದೆ. ನಮ್ಮ ಜನರ ಅಜ್ಞಾನಕ್ಕೆ ನಾವು ಬೇರೆಯವರನ್ನು ನಿಂದಿಸುವದಕ್ಕಿಂತ ನಮ್ಮಲ್ಲಿಯ ಹಲವು—ಅಂದರೆ ನನ್ನಂತಹ ತಿಳುವಳಿಕೆಯಿದ್ದ ಹಾಗು ತಮ್ಮ ಹಿತದಗೋಸುಗ ಬುದ್ಧಿಪುರಸ್ಸರವಾಗಿ ಈ ಜನರನ್ನು ಅಜ್ಞಾನದಲ್ಲಿಯೇ ಕೊಳೆಯಲು ಬಿಟ್ಟಿರುವ ಜನತೆಯನ್ನು ಬೈಯ್ಯುವದೇ ಮೇಲು. ಮಗೂ ನೀನು ಕಂಡ ಬೆಳಕು ನನಗೂ ಕಾಣತೊಡಗಿದ ನನಗೆ ನನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪವಾಗಿದೆಯಲ್ಲದೆ, ನನಗೆ ವಯಸ್ಸಾದರೂ ಚಿಕ್ಕವನಾದ ನಿನ್ನ ಕಾರ್ಯದಲ್ಲಿ ಸಹಾಯಮಾಡಬೇಕೆಂದಿದೆ. ಇಂತಹ ಉದಾತ್ತ ಹಾಗು ರಾಷ್ಟ್ರಕ್ಷೇಮಕರವಾದ ವಿಚಾರಮಾಡುವ ನಿನ್ನ ಕಾರ್ಯದಲ್ಲಿ ಸಹಾಯಮಾಡುವದ ನಾನು ಮಾಡಲಿರುವ ರಾಷ್ಟ್ರಸೇವೆಯು".

ತನ್ನ ತಂದೆಯ ಪಶ್ಚಾತ್ತಾಪಪೂರಿತ ಮಾತುಗಳನ್ನು ಕೇಳಿದ ಅರವಿಂದನಿಗೆ ಬಹಳೇ ಸಂತೋಷವಾಯಿತು. ಎಂತಹ ಸುದಿನವೆಂದು, ಆ ದಿವಸವನ್ನೇ ಕೊಂಡಾಡತೊಡಗಿದನು. ನನ್ನ ತಂದೆಯಂತೆ ಭಾರತದೊಳಗಿನ ಎಲ್ಲ ಹಿರಿಯರಿಗೂ ಈ ತೆರದ ಬೆಳಕು ಕಾಣಬಹುದೇ ಎಂದು, ಭವಿಷ್ಯದೆಡೆಗೆ ಮನಸ್ಸಿನಲ್ಲಿಯೆ ನೋಡತೊಡಗಿದನು. ಅಷ್ಟರಲ್ಲಿಯೆ ಶಾಸ್ತ್ರಿಗಳು ಮಗನನ್ನು ಕುರಿತು 'ಮಗೂ ನಾನು ಸಹ ನಿನ್ನಂತೆಯೆ ಧ್ಯೇಯವಾದಿಯು. ನನಗೆ ಯಾವುದೊಂದು ವಿಷಯವು ಮನವರಿಕೆಯಾಗುವದೆ ಕಠಿಣ. ಈಗಿನಂತೆ ಆಯಿತೆಂದರೆ ತೀರಿಯೇ ಹೋಯಿತು. ಈಗ ನಾನೊಂದು ಕೆಲಸವನ್ನು ಮಾಡಬೇಕೆಂದಿದ್ದೇನೆ. ಅದನ್ನು

ನೀನು ಲಕ್ಷ್ಯಗೊಟ್ಟು ಕೇಳು ಹಾಗು ನಿನಗೆ ಎಲ್ಲ ಒಪ್ಪಿತವಾಗುವದಿಲ್ಲವೊ ಅದನ್ನು ಹೇಳಲು ಸಂಕೋಚಪಡಬೇಡ. ಇಂದಿನಿಂದ ನಾನು ಭವಿಷ್ಯವನ್ನು ಉಪಯೋಗಿಸುವದು ಏತಕ್ಕೆಂಬುದನ್ನು ಬಲ್ಲೆಯಾ? ಬರುವ ಕಷ್ಟಗಳನ್ನು ಎದುರಿಸಲೆಂದೆ ನಾನು ಜ್ಯೋತಿಷ್ಯವನ್ನು ಉಪಯೋಗಿಸುವವನಿದ್ದೇನೆ ಜನರನ್ನು ಕರ್ತವ್ಯದೆಡೆಗೆ ಕರೆದೊಯ್ಯುವ ಪವಿತ್ರಕಾರ್ಯದಲ್ಲಿಯೆ ನನ್ನ ಶೇಷಾಯುಷ್ಯವನ್ನು ಸವೆಯಿಸುವೆ. ನೀನು ದಿಲ್ಲಿಗೆ ಹೋಗಿ ನಿನ್ನ ಕಾರ್ಯದಲ್ಲಿ ಪಾರಂಗತನಾಗಿ ಬಾ. ನನ್ನಲ್ಲಿ ಹೇರಳವಾದ ಹಣವುಂಟು. ನನ್ನ ಆಸ್ತಿಯು ೨೦ ಲಕ್ಷಕ್ಕೆ ಕಡಿಮೆಯೇನಿಲ್ಲ. ನಮ್ಮ ನಾಡಿನಲ್ಲಿಯೆ ಯಾವ ಕಾರಖಾನೆಯನ್ನು ಪ್ರಾರಂಭಿಸಲು ಬರುವದೆಂಬುದನ್ನು ನೀನು ತಿಳಿದುಕೋ. ನಿನಗೆ ಎಷ್ಟು ಬೇಕೋ ಅಷ್ಟು ಹಣವನ್ನು ಉಪಯೋಗಿಸಿ ಯಂತ್ರಸಾಮಾಗ್ರಿಗಳನ್ನು ಒದಗಿಸು. ನೀನೇ ಅದರ ವ್ಯವಸ್ಥಾಪಕನಾಗು. ನೀನು ಇಂದಿನ ಹಣವಂತ ಹಾಗು ಕೂಲಿಕಾರರ ರಕ್ತವನ್ನು ಶೋಷಿಸಿ ಹಣವನ್ನು ಹೆಚ್ಚಿಸುವ ವ್ಯವಸ್ಥಾಪಕರ ಜಾತಿಗೆ ಸೇರುವವನಾಗುವದಿಲ್ಲವೆಂಬುದು ನನಗೆ ಮನವರಿಕೆಯುಂಟು. ನಮ್ಮ ಪೂರ್ವಜರು ವಿಜಯನಗರದ ರಾಜರಲ್ಲಿ ಇದ್ದುದು ನಿನಗೆ ಗೊತ್ತುಂಟು. ನೀನು ಕಾರಖಾನೆಯನ್ನೇನು ಪ್ರಾರಂಭಿಸುವಿಯಲ್ಲ, ಆ ಭಾಗಕ್ಕೆ ನಾವು ವಿಜಯನಗರವೆಂದು ಹೆಸರಿಸೋಣ. ನಿನ್ನ ವಿಜಯ ನಗರದ ಕಾರಖಾನೆಯಲ್ಲಿ ಬಡವರು ತಮ್ಮ ದಾರಿದ್ರ್ಯವನ್ನು ಹಿಂಗಿಸುವ ಹಾದಿಯನ್ನು ಕಂಡುಕೊಳ್ಳಲಿ. ಮತ್ತು ನಾನು ಅವರಲ್ಲಿಯ ಅಜ್ಞಾನವನ್ನು ದೂರಮಾಡಲು ಪ್ರತಿದಿವಸ ಸಾಯಂಕಾಲ ಅವರಿಗೆ ತಕ್ಕಮಟ್ಟಿಗೆ ಓದುಬರಹಗಳನ್ನು ಕಲಿಸುವ. ಅವರ ಮಕ್ಕಳು ಬುದ್ಧಿವಂತರಾಗುವಂತೆ ನಮ್ಮ ಕೈಲಾದಮಟ್ಟಿಗೆ ಅನುಕೂಲತೆಗಳನ್ನು ಒದಗಿಸೋಣ. ನಾನೇನೋ ನನ್ನ ಹಣದಲ್ಲಿಯ ಹಲವು ಭಾಗವನ್ನು ದಾನಕೊಡಬೇಕೆಂದಿದ್ದೆ. ಆದರೆ ಈಗ ನಾನು ಕಂಡ ಬೆಳಕು— ಬಡವರಿಗೆ ಹೊಟ್ಟೆಗೆ ಉದ್ಯೋಗವನ್ನು ಕಲ್ಪಿಸಲು ಉಪಯೋಗಿಸುವದಕ್ಕಿಂತ ಹೆಚ್ಚಿನ ದಾನವೇ ಇಲ್ಲವೆಂದು— ಹೇಳುತ್ತದೆ".

ತಂದೆಯ ಮಾತುಗಳನ್ನು ಕೇಳಿದ ಅರವಿಂದನು 'ಅಪ್ಪಾ, ಭಾರತದಲ್ಲಿಯ ಅನೇಕ ಹಣವಂತರು ನಿನ್ನಂತೆಯೆ ವಿಜಯನಗರಗಳನ್ನು ನಿರ್ಮಾಣಮಾಡುವದರಲ್ಲಿ ಉದ್ಯುಕ್ತರಾದರೆ, ಇನ್ನು ಸ್ವಲ್ಪೇ ವರುಷಗಳಲ್ಲಿ, ಭಾರತವು ತನ್ನ ಹಿಂದಿನ ಘನತೆಗೇರುವದರಲ್ಲಿ ಏನೂ ಸಂದೇಹವಿಲ್ಲ. ನೀನು ಕಟ್ಟಬೇಕೆಂದಿರುವ ವಿಜಯನಗರವನ್ನು ಸರ್ವಾಂಗ ಸುಂದರವಾಗಿ ಮಾಡಲು ಹೆಣಗುತ್ತೇನೆ, ನಿನ್ನ ಆಶೀರ್ವಾದವೊಂದಿದ್ದರೆ ಸಾಕು' ಹೀಗೆಂದು ಅರವಿಂದನು ತಂದೆಗೆ ನಮಸ್ಕರಿಸಿದನು.

# ಮಾತೃ - ಹೃದಯ

(ಶ್ರೀ ವೀ. ಚ ಹಿತ್ತಲಮನೆ, ಒಕ್ಕಲುತನದ ಕಾಲೇಜು, ಪುಣೆ)

## (೧)

"ಮಾ,"

. . . . . . . . .

"ಮಾ! . . . . . ಮಾ! . . . . . . . ಮಾ"

. . . . . . . . . . . .

"ಮಾ! ಈ ಸ್ಥಿತಿಯಲ್ಲಿ ನಿನ್ನನ್ನು ಹೇಗೆ ನೋಡಲಿ?"

. . . . . . . . . . .

"ಮಾತನಾಡುವದಿಲ್ಲವೆ?"

. . . . . . . . . . . . . . .

"ಅಳಬೇಡಮ್ಮಾ; ಮೂರು ದಿವಸವಾಯಿತು; ಒಂದು ತುತ್ತು ಅನ್ನ ಬಾಯಲ್ಲಿ ಹಾಕಿಕೊಂಡಿಲ್ಲ; ಒಂದು ಗುಟುಕು ನೀರು ಕುಡಿದಿಲ್ಲ; ತುಂಬಾ ಆಯಾಸವಾದಂತಿದೆ; ಇಂಥದರಲ್ಲಿ . . . . . ."

". . . . . . . . . ."

"ಮಾ! ನಿನ್ನನ್ನು ಈ ಸ್ಥಿತಿಯಲ್ಲಿ ನೋಡಿ ನಾನು ಹೇಗೆ ಸಹಿಸಿಕೊಳ್ಳಲಿ? ನಿನಗೇನು ವಯಸ್ಸೆ? ಎಪ್ಪತ್ತು ಮಿಕ್ಕಿದೆ; ಮೊದಲೇ ದಿನಗಳೆದ ನಿತ್ರಾಣ; ಮೇಲೆ ಮನಸ್ಸಿನಲ್ಲಿ ಈ ರೀತಿಯಾಗಿ ಏನನ್ನೋ ನಿರ್ಧರಿಸಿ, ಅನ್ನ ನೀರು ಬಿಟ್ಟು ಬಿಟ್ಟರೆ ಹೇಗೆ? ಅಮ್ಮಾ, ನಿನ್ನನ್ನು ನೋಡಿದರೆ ನನ್ನ ಕರುಳೇ ಹಿಂಡಿಹೋಗುತ್ತದೆ; ನಿನ್ನ ದೇಹದಲ್ಲಿ ಏನು ಉಳಿದಿದೆ? . . . . . . . ."

ಬಿಕ್ಕಿ ಬಿಕ್ಕಿ ಅತ್ತುಬಿಟ್ಟನು ರಹಿಮ. ತಾಯಿಯು ಹಾಸಿಗೆಯಲ್ಲಿ ಮಲಗಿದ್ದಳು. ಅಲುಗಾಡಲಿಲ್ಲ; ಕಣ್ಣುಗಳಿಂದ ನೀರು ಧಾರೆ ಧಾರೆಯಾಗಿ ಸುರಿಯುತ್ತಲಿದ್ದುವು. ಮೂಲೆಯಲ್ಲಿ ಹಾಕಿದ ಹೊರಸಿನ ಮೇಲೆ ಮಲಗಿದ್ದಳಾಕೆ; ಹಾಸಿಗೆಯೆಲ್ಲ ಅಸ್ತವ್ಯಸ್ತವಾಗಿ ಬಿಟ್ಟಿತ್ತು; ಮೈಮೇಲಿನ ಬಟ್ಟೆಗಳೆಲ್ಲ ಮಲಿನ

ವಾಗಿದ್ದವು; ಬೆಳಕಿಗಿಂತ ಕತ್ತಲೆಯ ಅಂಶ ಆ ಕೋಣೆಯಲ್ಲಿ ಹೆಚ್ಚಿತ್ತು; ಸಮೀಪದ ಕಿರುಕಿಡಕಿಯೊಳಗಿಂದ ಆಕೆ ಬೀದಿಯನ್ನೇ ದಿಟ್ಟಿಸುತ್ತಿದ್ದಳು; ಮುಖದ ಮೇಲೆ ಮುದಿತನದ ಗೆರೆಗಳೊಂದಿಗೆ ಕಳವಳದ ಗುರುತುಗಳೂ ಮೂಡಿದ್ದವು; ನೀಳವಾದ ಗೌರವರ್ಣದ ಮುಖದಲ್ಲಿ ನಿರಿಗೆಗಳು ಬಿದ್ದು, ಹಿರಿಯತನದ ಗಂಭೀರತೆಯನ್ನೂ ಜೊತೆಗೆ ಸಾರುತ್ತಿದ್ದವು; ಕೆಂದು ಬಣ್ಣದ ತಲೆಗೂದಲುಗಳು ಎಣ್ಣೆಕಾಣದೆ ಹಿಕ್ಕುಗಟ್ಟಿದ್ದವು; ಅವುಗಳಲ್ಲಿಯೇ ಹಲಕೆಲವು ಆಗಾಗ ಸಾಹಸಮಾಡಿ ಆ ಕೋಣೆಯನ್ನು ನುಗ್ಗಿ ಬರುತ್ತಿದ್ದ ಗಾಳಿಗೆ ಮೇಲೆಕ್ಕೆದ್ದು ಏನನ್ನೋ ದಿಟ್ಟಿಸಿ, ಆಕೆಯ ಮನಸ್ಸಿನಂತೆ ಮರುಚಣದಲ್ಲಿ ನಿರಾಶೆಯುವಾಗಿ ಮತ್ತೆ ಕೆಳಗೆ ಬಿದ್ದುಬಿಡುತ್ತಿದ್ದವು; ಆ ನೀಲ ಕಂಗಳಲ್ಲಿ ಅದಾವುದೋ ಅಪೂರ್ವ ಕಾಂತಿ ಮಿಣುಗುತ್ತಿದ್ದರೂ, ನಿರಾಶೆಯು ಅಲ್ಲಿಯೂ ಮೂಡಿ ನಿಂತಿತ್ತು! ಅವನ ತಾಯಿಯಲ್ಲಿ ಉಳಿದಿತ್ತಾದರೂ ಏನು? ಮೊದಲೇ ಒಂದಿನಿತು ಬಡಕಲಾದ ಆಳು! ಈಗ ಮೂರು ದಿನಗಳಿಂದ ಎಂತೂ ಆಕೆಯ ಸ್ಥಿತಿ ವರ್ಣಿಸಲಸದಳ! ರಕ್ತ ಮಾಂಸವಲ್ಲ ಎಲ್ಲಿಯೋ ಮಾಯವಾಗಿ ಮಾನ ಗಟ್ಟಲೆ ಹೊಟ್ಟೆಗಿಲ್ಲದೆ ನರಳಿ ಬಾಡಿ, ನೆಲಕ್ಕೆ ಬಿದ್ದ ಬರಗಾಲದಲ್ಲಿಯ ಹೆಣಗಳ ನೆನಹನ್ನು ಮೂಡಿಸುತ್ತಿತ್ತು ಆಕೆಯ ದೇಹ; ಆ ಜೋತು ಬಿದ್ದ ಹೊರಸಿನ ಮೇಲೆ ಮಾಸಿದ ಹಾಸಿಗೆಯಲ್ಲಿ ಒಂದು ಅಸ್ಥಿಪಂಜರವನ್ನು ತೂಗುಹಾಕಿ ದಂತಿತ್ತು; ಒಮ್ಮೆಲೇ ಆಕೆ ಪಕ್ಕಕ್ಕೆ ಹೊರಳಿದಳು; ಎದುರಿನಲ್ಲಿ ಕುಳಿತು ಅಂಗಲಾಚುವ ಮಗುವಿನ ಕಡೆಗೆ ಆಕೆಯ ಲಕ್ಷವೇ ಇಲ್ಲ; ತನ್ನದ ಒಂದು ಚಿಂತನೆಯಲ್ಲಿ ಆಕೆ ಇದ್ದು ಬಿಟ್ಟಿದ್ದಳು, ಬಾಹ್ಯ ಪ್ರಪಂಚ ಆಕೆಯ ಪಾಲಿಗೆ ಶೂನ್ಯವಾಗಿತ್ತು! ಘಟ್ಟಿಯಾಗಿ ಕೂಗಿದಳು; ಆಕೆಯ ಕೂಗಿನಲ್ಲಿ ದುಃಖವಿತ್ತು; ಕಠೋರತೆ ಇತ್ತು; ಒಲುವಿತ್ತು; ಸಂತಾಪವೂ ತಾಂಡವವಾಡುತ್ತಿತ್ತು; ಎಲ್ಲಕ್ಕೂ ಹೆಚ್ಚಾಗಿ ನಿರಾಶೆಯ ಮುಸುಕು ಕವಿದಿತ್ತು; ಆಕೆಯ ಆ ಸ್ವರವನ್ನು ಆಲಿಸಿ ದವನು ಎಂಥ ಕಲ್ಲೆದೆಯವನಿದ್ದರೂ ಕರಗಿ ಹೋಗಬಹುದಿತ್ತು; ಒಂದು ಸಮಯ ಕೈಯಿಂದಾಗದ ಹೇಡಿಯಾಗಿದ್ದರೆ, ಒಮ್ಮೆಲೇ ಸಂತಾಪದಿಂದ ನೆಗೆದೆದ್ದು ಕಾರ್ಯಪ್ರವೃತ್ತನಾಗಬಹುದಿತ್ತು; ಹೆಂಗರುಳಿನ ಸಹೃದಯ ಮಾನವನಾಗಿದ್ದರೆ ಅಲ್ಲಿಯೇ ಆಕೆಯ ದುಃಖ ಆಲಿಸಿ, ಅವನ ಹೃದಯ ನಿಂತುಬಿಡಬಹುದಾಗಿತ್ತು;

"ಅಹಮ್ಮದ; ಬಾ; ಮೂರು ದಿನಗಳಿಂದ ಅನ್ನಕೊಡಲಿಲ್ಲವೆಂದೆಯಾ? ....... ನೀಚರು; ಮಗುವಿಗೆ ಅನ್ನಕೊಡಲಿಲ್ಲ; ಕ್ರೂರರು; ನಿರ್ದಯರು!

ಅಹಮ್ಮದ, ಬಾ ಮಗು; ನಾನು; ನಿನ್ನ ಮಾ . . . . . . ಖಾತುನ! ಬಾ, ಓಡಿ, ಬಾ; ಬಾ ಮಗು, ಗಟ್ಟಿಯಾಗಿ ನನ್ನನ್ನು ಬಿಗಿದಪ್ಪು; ಬಾ; ಇನ್ನೆಂದೂ ನಿನ್ನನ್ನು ಬಿಡುವದಿಲ್ಲ; ಬಾ . . . ಅಯ್ಯೋ, ಮಗು; ಯಾರಪ್ಪಾ ನಿನ್ನನ್ನು ಈ ಸ್ಥಿತಿಯಲ್ಲಿ ಬಿಟ್ಟವರು? ಯಾವ ತಾಯಿಯೂ ಹಸಿದ ನಿನಗೆ ಒಂದು ತುತ್ತು ಅನ್ನಹಾಕಲಿಲ್ಲವೆ? ಅಹಮ್ಮದ! ಮುದ್ದು ಅಹಮ್ಮದ! ನಿನ್ನ ನಳಿದೋಳುಗಳೆಷ್ಟು ಆಹ್ಲಾದಕರವಾಗಿವೆ ಬಲ್ಲೆಯಾ? ನೀನು ನಿನ್ನ ಕಿರುದೋಳುಗಳಿಂದ ನನ್ನ ಕುತ್ತಿಗೆಯನ್ನು ಸುತ್ತುವಾಗ ನನಗೆಂತಹ ಆನಂದವಾಗುತ್ತೆಂಬುದನ್ನು ಹೇಗೆ ಬಣ್ಣಿಸಲಿ? . . . . . . ಇನ್ನೂ ನನ್ನ ಅಹಮ್ಮದ ಬರಲಿಲ್ಲವೆ? ಅಹಮ್ಮದ! ಅಹಮ್ಮದ!! . . . . . . . ಅಯ್ಯಯ್ಯೋ! ಏನು ಗತಿ? ಏನು ಗದ್ದಲ . . . . . . . . ಹೊಡೆ, ಬಡೆ, ತಿವಿ, ಕೊಲ್ಲು; ಅಯ್ಯೋ ನನ್ನ ಕೂಸನ್ನು ಕೊಂದರು; ಅಂತೆಯೇ ಮೂರು ದಿನವಾಯಿತು ಮಗು ಬರಲಿಲ್ಲ . . . . . . . ಹೇಡಿಗಳು! ಎಲ್ಲರೂ ಹೇಡಿಗಳು!! ಮಕ್ಕಳನ್ನು ಕೊಂದರು; ಇನ್ನೂ ಹತ್ತು ವರ್ಷಗಳು ತುಂಬದ ಕೂಸನ್ನು ತಿವಿದು ಕೊಂದರು; ತಲೆಯೊಡೆದು ಕೊಂದರು; ಕಾಲಿನಿಂದ ತುಳಿದು ಕೊಂದರು; ಬಾಯಿಂದ, ಮೂಗಿನಿಂದ ರಕ್ತ ಬಂತು! ಯಾವನೋ ಕಿರುಚಿ ಅಂಗಲಾಚುವ ಮಗುವನ್ನು ಮೊಚ್ಚೆಗಾಲಿನಿಂದ ಒದೆದು, ಚರಂಡಿಗೆ ಚಲ್ಲಿದನು, ದೇಹದಲ್ಲಿಯ ರಕ್ತ ಚರಂಡಿಯಲ್ಲಿ ಹರಿಯುವ ಹೊಲಸು ನೀರಿನೊಂದಿಗೆ ಸ್ನೇಹಬೆಳಿಸಿ ಇಳುಕಲ ಕಡೆಗೆ ಹರಿಯುತ್ತಿದೆ; ಸ್ನೇಹವಂತೆ! ಎಲ್ಲ ಅಣಕಾಟ . . . . . ಧರ್ಮದ ಹೆಸರಿನಲ್ಲಿ ನನ್ನ ಕೂಸನ್ನು ಕೊಂದರು . . . . . . ನನ್ನ ಅಹಮ್ಮದನ ರಕ್ತ ಚರಂಡಿಗೆ ಹರಿಸಿದರು. . . . . . . . ನನ್ನ ಕರುಳನ್ನು ಕೊಯ್ದರು . . . . . . ಎಲ್ಲರೂ ಹೆಂಗಸರು! ಮಗುವಿನ ಕೊಲೆಯನ್ನು ನೋಡಿ ಸುಮ್ಮನೆ ಕುಳಿತಿದ್ದಾರೆ . . . . . . . . . "

ರಹಿಮು ಪಕ್ಕದಲ್ಲಿ ಕುಳಿತಿದ್ದನು; ಅಮ್ಮನ ಒಂದೊಂದು ನುಡಿಯೂ ಅವನನ್ನು ಕಂಗಾಲನನ್ನಾಗಿ ಮಾಡಿದ್ದವು; ಆಕೆಗೆ ಎಚ್ಚರವೇ ಇದ್ದಿಲ್ಲ; ಆದರೂ ತನ್ನನ್ನೇ ಉದ್ದೇಶಿಸಿ ಮಾತನಾಡುತ್ತಿದ್ದಂತೆನಿಸಿತು; ರಹಿಮು ಎದ್ದನು; ಆಕೆಯ ಪಕ್ಕದಲ್ಲಿ ಕುಳಿತು ಗಲ್ಲವನ್ನು ನೇವರಿಸಿದನು; ಅವನ ಸ್ಪರ್ಶದಿಂದ ಆಕೆಗೆ ಒಂದಿನಿತು ಎಚ್ಚರ ಬಂತು; ಒಮ್ಮೆಲೇ ಕೈಗಳನ್ನು ಮುಂದೆ ಚಾಚಿ,

"ಅಹಮ್ಮದ, ನನ್ನರಗಿಣಿಯೇ, ಮುದ್ದುಗುವರನೇ ಬಂದೆಯಾ? ನಾನು ಕರೆದುದು ಕೇಳಿಸಿತೇ? ಬಾರಪ್ಪಾ; ಅಂತು ಒಮ್ಮೆ ಬಂದೆಯಾ? . . . . . . . ಅವರು ನಿನ್ನನ್ನು ಹೇಗೆ ಬಿಟ್ಟರಪ್ಪಾ? ಯಾರೋ . . . . . ; ಅವರು ನೀಚರು;

ನನಗೆ ಸುಳ್ಳೇ ಏನಾದರೊಂದು ಹೇಳಿದರು; ನನ್ನ ಅಹಮ್ಮದನನ್ನು ಯಾರೂ ಕೊಲ್ಲಲಿಲ್ಲ; ಹತ್ತು ವರುಷದ ಹಸುಳೆಯನ್ನು ಯಾರಾದರೂ ಕೊಲ್ಲಬಹುದೆ? ಅದರಲ್ಲಿ ನೀನೇನು ಮಾಡಿದ್ದಪ್ಪಾ ಅವರಿಗೆ? ನಿನ್ನ ಸುಂದರ, ನಿಷ್ಪಾಪ, ಮುಗೂದ ಮುಖವನ್ನು ನೋಡಿ ಅವರು ಮುದ್ದಾಡಿರಬಹುದಲ್ಲವೆ? ನಿನ್ನ ಲಲ್ಲೆ ಮಾತುಗಳನ್ನು ಆಲಿಸಿ ಆನಂದದಿಂದ ಅವರೆದೆ ಉಬ್ಬಿಹೋಗಿರಬಹುದಲ್ಲವೆ? ಒಳ್ಳೆಣಿಸಿ, ಮುದ್ದುಗೈದರೆಂದೆಯಾ? . . . . . ಅಹಮ್ಮದ, ಏಕೋ ನನಗೆ ಹೆದರಿಕೆಯಾಗುತ್ತದೆ; ಇನ್ನು ನೀನು ಹೊರಗೆ ಹೋಗಬೇಡಪ್ಪ! ಸಾಲಿಗೆ ಹೋಗುವದೂ ಬೇಡ; ಈ ತಲೆತಿರುಕತನ ಮುಗಿದು ಹೋಗಲಿ; ಅಲ್ಲಿಯ ತನಕ ಎಲ್ಲಿಗೂ ಹೋಗಬೇಡ; ನನ್ನ ಪಕ್ಕದಲ್ಲಿಯೇ ಇರು . . . . . . . "

ರಹಿಮನನ್ನು ತಕ್ಕೆಯಲ್ಲಿ ಹಿಡಿದು ತಲೆಗೂದಲನ್ನು ನೇವರಿಸುತ್ತ ಖಾತುನ ಕಣ್ಣುಮುಚ್ಚಿ ಇನ್ನೂ ಬಗೆ ಬಗೆಯಾಗಿ ಹೇಳುತ್ತಲೇ ಇದ್ದಳು; ರಹಿಮನಿಗೆ ತಡೆಯಲಾಗಲಿಲ್ಲ; ಅಂಥ ಸ್ಥಿತಿಯಲ್ಲಿ ಅಮ್ಮನ ಕಣ್ಣಿನಲ್ಲಿಯ ಆನಂದ ಬಾಷ್ಪಗಳು ಅವನನ್ನು ಕಂಗೆಡಿಸಿದವು; ಆಕೆಯ ಬಾಯಿಂದ ಬರುವ ಸಂತಸದ ನುಡಿಗಳು ಎದೆಯಲ್ಲಿ ಈಟಿ ಹಾಕಿ ತಿರುವಿದಂತಾಗುತ್ತಿದ್ದವು; ಅಮ್ಮನ ಸುಖಸ್ಪರ್ಶ ದಾರುಣವಾದ, ಭೀಕರತೆ, ಹುಟ್ಟಿಸುತ್ತಿತ್ತು; ಒಮ್ಮೆಲೇ ಆಕೆಯ ಬಾಯಿಯನ್ನು ತನ್ನ ಕೈಯಿಂದ ಒತ್ತಿಹಿಡಿದು ಬಿಕ್ಕಿ ಬಿಕ್ಕಿ ಅತ್ತನು. ಆಕೆಯ ಎದೆಯ ಎಲುಬಿನ ಪಂಜರದಲ್ಲಿ ಮುಖವಿರಿಸಿ ಮಗುವಿಗಿಂತ ಮಿಗಿಲಾಗಿ 'ಗೊಳೋ' ಎಂದು ಅತ್ತುಬಿಟ್ಟನು! ಖಾತುನ ಕಣ್ಣು ತೆರೆದಳು; ಆಕೆಗೆ ಇನ್ನೂ ಅದೇ ಭ್ರಾಂತಿ! ತನ್ನ ಅಹಮ್ಮದ ಬಂದನೆಂದೇ ಭ್ರಾಂತಿ! ರಹಿಮನು ತನ್ನ ಮುಖವನ್ನು ಆಕೆಯ ಎದೆಯಲ್ಲಿರಿಸಿದ್ದುದರಿಂದ ಆಕೆಗೆ ಅವನು ಸರಿಯಾಗಿ ಕಾಣಿಸಲಿಲ್ಲ; ಆಕೆ ಅವನ ತಲೆಯನ್ನು ನೇವರಿಸುತ್ತ ಹೇಳಿದಳು;

"ಅಹಮ್ಮದ, ಅಳಬೇಡಪ್ಪಾ; ನಿನ್ನನ್ನು ಹೆತ್ತ ಕರುಳು ಕಳವಳಗೊಳ್ಳುತ್ತದೆ; ತೀರ ಆಯಾಸವಾಗಿರಬೇಕು; ಏಳು; ಹಸಿದಿರ ಬೇಕಲ್ಲವೆ? ಏಳು; ಒಳಗೆ ನಡೆ; ತಿನ್ನಲಿಕ್ಕೆ ಒಂದಿನಿತು ತಿಂಡಿ ಕೊಡುತ್ತೇನೆ . . . . . ಈಗ ಅದನ್ನು ತಿನ್ನು; ಇಷ್ಟರಲ್ಲಿ ಊಟಕ್ಕೆ ತಯಾರಿಸುವೆ; ನನಗೂ ಹಸಿವೆಯಾಗಿದೆ; ಇಬ್ಬರೂ ಕೂಡಿ ಊಟಮಾಡೋಣ; ನೋಡು ನಿನ್ನ ಅಣ್ಣ ರಹಿಮ ಎಲ್ಲಿ ಹೋಗಿದ್ದಾನೆ? ಅವನೂ ಸಹಿತ ನೀನು ಹೋದಂದಿನಿಂದ ಕಂಗೆಟ್ಟು ಹೋಗಿದ್ದಾನೆ; ಮಗು, ಮತ್ತೆ ನಮ್ಮ ಮನೆಯನ್ನು ಬೆಳಗಲು ಬಂದೆ; ನೊಂದ ಮಾತೃ ಹೃದಯವನ್ನು ತಣಿಸಲು ಬಂದೆ; ಅಪ್ಪಾ . . . . . . "

ರಹಿಮನಿಗೆ ತಡೆಯಲಾಗಲಿಲ್ಲ; ಆಕೆಯ ಬಾಯನ್ನು ಹಿಡಿದ ಕೈ ಸಡಿಲಾಗಿತ್ತು; ಮತ್ತೆ ಒತ್ತಿ ಹಿಡಿದನು; ಅವಳೇ ಇಷ್ಟು ದಿನಗಳ ಮೇಲೆ 'ಹಸಿವೆಯಾಗಿದೆ, ಊಟಮಾಡೋಣ'ವೆಂಬುದನ್ನು ಕೇಳಿಯಂತೂ ಇಳಿದೇ ಹೋದನು; ಅವನಿಗೆ ಆಗ ಏನೂ ತಿಳಿಯಲಿಲ್ಲ; ಮುಖಮೇಲಕ್ಕೆತ್ತಿ ಆಕೆಯನ್ನೇ ದಿಟ್ಟಿಸಿ, ಕಣ್ಣೀರು ಕರೆಯುತ್ತ ತೊದಲು ಧ್ವನಿಯಲ್ಲಿ ಮಾತನಾಡಿದನು.

"ಮಾ, ನಾನು ರ—ಹೀ—ಮು; ಅ — ಹ — ಮ್ಮ — ದ — ನಲ್ಲ. ಅವನು . . . . ."

ಮುಂದೆ ಅವನ ಬಾಯಿಂದ ಮಾತುಗಳೇ ಬರಲಿಲ್ಲ; ಮತ್ತೆ ತಾಯಿಯ ಹೃದಯದಲ್ಲಿ ತಲೆಯಿಟ್ಟು ಬಿಕ್ಕಲನುವಾದನು;

ಖಾತುನಬಿಬಿಯ ಮುಖದಲ್ಲಿ ಯಾವ ಬದಲಾವಣೆಯೂ ಕಂಡು ಬರಲಿಲ್ಲ.

"ಅಹಮ್ಮದನಲ್ಲವೇ? . . . . ಹಾ! ಖುದಾ . . . . "

ಒಮ್ಮೆಲೇ ಹಾಸಿಗೆಯ ಮೇಲೆ ಬಿದ್ದು ಬಿಟ್ಟಳು; ಮೈಮೇಲೆ ಎಚ್ಚರವೇ ಉಳಿಯಲಿಲ್ಲ.

x x x x

## (೨)

ನಾಡಿನ ಮೂಲೆ ಮೂಲೆಗಳಲ್ಲಿ ಅದೇ ಸುದ್ದಿ! ಅದೇ ಮಾತು! ವರ್ತಮಾನ ಪತ್ರಗಳ ತುಂಬೆಲ್ಲ ಅದೇ ವರ್ತಮಾನ!

ಜನತೆ ಹೌಹಾರಿಬಿಟ್ಟಿತ್ತು; ಎಲ್ಲರ ಮುಖಗಳ ಮೇಲೂ ಕಳವಳದ ಛಾಯೆ ಎದ್ದು ನಿಂತಿತ್ತು.

ನಿತ್ಯದ ಕೆಲಸಗಳೆಲ್ಲ ನಿಂತುಬಿಟ್ಟವು; ಯಾರೂ ಮನೆಬಿಟ್ಟು ಹೊರಗೆ ಹೋಗಲೊಲ್ಲರು; ನಾಡೆಲ್ಲಾ ಮಸಣವಟ್ಟಿಯಾಯಿತು. ಎಲ್ಲೆಲ್ಲಿಯೂ ಭೀಕರ ಮಸಣ ಶಾಂತಿ ನೆಲೆಸಿತು;

ಅಂಥದರಲ್ಲಿಯೇ ಆಗಾಗ ಭೀಕರ ಸದ್ದು ಕೇಳಬರುತ್ತಿತ್ತು; ಸದ್ದನ್ನಾಲಿಸಿದ ಕೆಲವರು ಕುಳಿತಲ್ಲಿಯೇ ಜೀವಬಿಡುತ್ತಿದ್ದರು.

ಎಲ್ಲೆಲ್ಲಿಯೂ ಅನಾಚಾರ! ಅತ್ಯಾಚಾರ!! ಹಿಂಸೆ! ಕೊಲೆ!! ಸುಲಿಗೆ!!

ತಾಯಿಯ ಕಂಕುಳೊಳಗಿಂದ ಎಳೆದು, ಮೊಲೆಯುಣ್ಣುತ್ತಿದ್ದ ಮಗುವನ್ನು ಅಪ್ಪಳಿಸಿ ಕೊಂದರು; ತಲೆಯೊಡೆದು ನುಚ್ಚುನೂರಾಯಿತು; ಕೈಕಾಲುಗಳು ದೇಹದಿಂದ ಕಿತ್ತುಬಂದವು; ಆದರೂ ಮಗು ಒಂದಿನಿತು ಅಳಲಿಲ್ಲ; ತಾಯಿಗೆ ಅದನ್ನು ನೋಡಿ ಸಹಿಸುವುದು ಹೇಗೆ ಸಾಧ್ಯ? ಘಟ್ಟಿಯಾಗಿ ಕಿರುಚಿ ಓಡಿಹೋಗಿ ಜಜ್ಜಿಹೋದ ಕೂಸನ್ನು ಎತ್ತಿ ಎದೆಗಪ್ಪಿಕೊಂಡಳು. ಮತ್ತೆ ಯಾವನೋ ಹಿಂದಿನಿಂದ ಬಂದು ಸತ್ತ ಕೂಸನ್ನು ಸೆಳೆದು ದೂರದಲ್ಲಿ ಬಿಸುಟಿದನು;

"ಹಃ ! ಹಃ !! ಹಃ !!" ಅಕರಾಳ ವಿಕರಾಳ ಧ್ವನಿಯು ತೂರಿಬರುತ್ತಿತ್ತು;

ಮಾತೆಗೆ ಅದನ್ನು ತಡೆಯುವದಾಗಲಿಲ್ಲ; ಎದುರಿನಲ್ಲಿ ನಿಂತವನನ್ನು ದೂಡಿ ಕೂಸಿನ ಕಡೆಗೆ ಓಡಿದಳು; ಆದರೆ ಆಕೆ ಅಬಲೆಯಾದ ಹೆಂಗಸು! ಯಾರೋ ಸೆರಗನ್ನು ಹಿಡಿದು ಜಗ್ಗಿದರು; ನೋಡುನೋಡುವಷ್ಟರಲ್ಲಿ ಸೀರೆ ಬಿಚ್ಚಿಹೋಯ್ತು! ಕುಪ್ಪಸವನ್ನು ಹರಿದರು; ಕೂಡಲು ಕದರಿತು . . . . ಒಸವಳಿದು ನೆಲಕ್ಕೆ ಬಿದ್ದಳು . . . ವೈಮೇಲೆ ಎಚ್ಚರವೇ ಉಳಿಯಲಿಲ್ಲ . . . ಎಚ್ಚರವಾದಾಗ ತುಂಬಾ ಮೈನೋವು; ಎದೆಯಿಂದ ರಕ್ತ ಸೋರುತ್ತಿತ್ತು; ಎದಗೆ ಬಲವಾದ ಗಾಯವಾಗಿತ್ತು! ಅದರ ಪರಿವೇ ಆಕೆಗಿಲ್ಲ,

ಆಕೆ ಬಡಬಡಿಸುತ್ತಿದ್ದುದು ತನ್ನ ಕಂದನನ್ನು ನೆನೆದು:

'ಮಗು, ಕಂದಾ, ಎಲ್ಲೆ ಹೋದೆಯಪ್ಪಾ; . . . . ."

x x x x

ಕುಡಿದು ಮತ್ತರಾದ ತಲೆತಿರುಕರ ತಂಡವೊಂದು, ಒಂದು ಮನೆಯ ಬಾಗಿಲಿಗೆ ಬಂದು ನಿಂತಿತು; ಬಾಯಿಗೆ ಬಂದಂತೆ ಒದರಿದ್ದಾಯಿತು; ಬಾಗಿಲು ತೆರೆಯಲಿಲ್ಲ; ಒಳಗಿನಿಂದ ಉತ್ತರವೂ ಬರಲಿಲ್ಲ, ಅಂಜಿದ ತರುಣನೊಬ್ಬ ಕಿಡಕಿಯಿಂದ ಇಣಿಕಿ—ಹಾಕಿದನು; ಯಾವನೋ ಕೋಲಿನಿಂದ ಬೀಸಿದನು; ಅದು ಕಿಡಕಿಯ ಸಳಿಗಳಿಗೆ ಬಡಿದು ಮುರಿಯಿತು; ಬೀಸಿದವನ ಕೋಪ ನೆತ್ತಿಗೇರೀತು; ಬಾಯಲ್ಲಿಯ ತಾಂಬೂಲವನ್ನು ಕಿಡಕಿಯ ಕಡೆಗೆ ಉಗುಳಿದನು; ಕಿಡಿಕಿಯ ಬಾಗಿಲುಗಳು ಮುಚ್ಚಿದವು, ಮರುಕ್ಷಣದಲ್ಲಿ ಲಾರಿ ಬೀಸಿ ಕಾಜು ಒಡೆದರು; ಬಾಗಿಲು ಮುರಿದರು; ಮನೆಗೆ ಬೆಂಕಿಹಾಕಿದರು; "ನೀಚನನ್ನು ಹೊರಗೆ ಎಳೆಯಿರಿ; ಏನು ನೋಡುತ್ತಿರುವಿರಿ ತಿವಿಯಿರಿ; ಒಂದು ಮು . . . . ಪಿಳ್ಳೆಯೂ ಇರಬೇಕಾಗಿಲ್ಲ; ಹಿಂದುಗಳಿಗಾಗಿ ಹಿಂದುಸ್ಥಾನ!

ಹಿಂದುಸ್ಥಾನ ಜಿಂದಾಬಾದ!! ಹರಹರ ಮಹದೇವ!' ಒಳಗೆ ನುಗ್ಗಿಯೇ ಬಿಟ್ಟರು; ತಮ್ಮತಮ್ಮಲ್ಲಿಯೇ ಮುನ್ನುಗ್ಗಲು ಬಡಿದಾಟ ನಡೆಯಿತು; ಬಡಿದಾಟಗಳು ನಡೆದವು; ಒಂದೆರಡು ಹೆಣಗಳೂ ಬಿದ್ದವು; ರಕ್ತ ಹರಿಯಿತು; ನೀಚರು ಒಳಗೆ ನುಗ್ಗಿದರು; ಒಂದು ಮೂಲೆಯಲ್ಲಿ ಅದೇ ಯೌವನದಲ್ಲಿ ಕಾಲಿರಿಸಿದ ತರುಣಿ ನಲ್ಲನನ್ನು ತಕ್ಕೆಹಾಕಿ, ಅಂಜಿದ ಹರಿಣಿಯಂತೆ ನಿಂತಿದ್ದಳು; ಜನ ಜಂಗುಳಿ ಕಂಡು ಚೀರಿ ಎಚ್ಚರದಪ್ಪಿ ನಲ್ಲನ ತಕ್ಕಿಯಲ್ಲಿ ಬಿದ್ದುಬಿಟ್ಟಳು; ತರುಣನಿಗೆ ಸಿಟ್ಟು ಬಂತು; ಎಲ್ಲಿಂದಲೊ ಶಕ್ತಿತಂದುಕೊಂಡು ನಲ್ಲೆಯನ್ನು ಒಂದು ಬದಿಗೆ ಸರಿಸಿ ಹಸಿದ ಹುಲಿಯಂತೆ ಅವರ ಮೇಲೆ ಬಿದ್ದನು: ಆದರೆ? . . . . ಮರುಕ್ಷಣದಲ್ಲಿ ಅವನನ್ನು ಒಂದು ಕಂಬಕ್ಕೆ ಬಿಗಿದಿದ್ದರು. ಲಾಠಿಯಿಂದ ಚೆನ್ನಾಗಿ ತಳಿಸಿದ್ದರು; ತಲೆಯೊಡೆದಿತ್ತು; ರಕ್ತ ಮುಖದ ಮೇಲೆ ಹರಿದಿತ್ತು; ಬಟ್ಟೆಬರೆಗಳೆಲ್ಲಾ ಹರಿದಿದ್ದವು; ಮೈಮೇಲೆ ಬಾಸುಂಡೆ—ಗಳೆದ್ದಿದ್ದವು ನೋವಿನಿಂದ ತಡೆಯಲಾರದೆ ನರಳಿದನು—ತರುಣಿಗೆ ಎಚ್ಚರವಾಯಿತು; ಒಮ್ಮೆಲೇ ಎದ್ದು ಚೀರಿ ಗಂಡನನ್ನು ಅಪ್ಪಿದಳು; ಯಾರೋ ಹಿಡಿದೆಳೆದರು; ನೆಲಕ್ಕೆ ಹಾಕಿ . . . ಇನಿಯನ ಎದುರಿನಲ್ಲಿಯೇ . . . . . ಆಕೆಯ ಮಾನಭಂಗಮಾಡಿದರು . . . ಒಬ್ಬರು; ಇಬ್ಬರು; ಲೆಕ್ಕವಿಲ್ಲದಷ್ಟು ಜನರು—ಆಕೆಯದು ಮುಗಿದೇ ಬಿಟ್ಟಿತಂತೆ—ಜನತೆ ಹೊರಬಿತ್ತು; ಹೋಗುವಾಗ ಆಕೆಯ ಮೃತದೇಹಕ್ಕೆ ಯಾವನೋ ಚೂರಿಯಿಂದ ಇರಿಯದೆ ಬಿಡಲಿಲ್ಲ; ತರಣನನ್ನು ಬಡಿಗೆಯಿಂದ ಬಳಸೆ ಬಡಿದಂತೆ ಬಡಿದು ಕೊಂದರು

x x x x

"ಪಾಕಿಸ್ತಾನ! ಜಿಂದಾಬಾದ"

"ಹಿಂದುಸ್ತಾನ! ಮುರುದಾಬಾದ"

"ಅಲ್ಲಾಹೋ ಅಕಬರ"

"ಹಿಂದುಗಳು ಹೇಡಿಗಳು; ಹೊಡೆಯಿರಿ; ಬಡೆಯಿರಿ; ನಮ್ಮ ಹೆಂಗಸರ ಮಾನ ತೆಗೆದಿದ್ದಾರೆ; ಮಕ್ಕಳನ್ನು ಕೊಂದಿದ್ದಾರೆ; . . . . ."

ಎಲ್ಲಿಂದಲೋ ಒಂದು ತಂಡ ಬಗೆಬಗೆಯಾಗಿ ಒದರುತ್ತ ನಡೆದಿತ್ತು; ಎದುರಿಗೆ ಬಂದವರ ಹೋಳಿಯಾಯಿತು; ಬೀದಿಯ ಬದಿಯಲ್ಲೆಲ್ಲ ಹೆಣಗಳೇ ಹೆಣಗಳು; ಸತ್ತವರು ಕೆಲವರು; ಗಾಯಗೊಂಡವರು ಸಾವಿರದಷ್ಟು;

ಬದುಕುವ ಆಶೆಯಿದ್ದವರು ಹತ್ತು ಜನರಾದರೆ, ನಿರಾಶೆಗೊಂಡವರು ನೂರರಷ್ಟು; ನರಳುವ ಧ್ವನಿ ಗಗನವನ್ನು ಗಡಚಿಕ್ಕಿಸಿತ್ತು;

ತಲೆಯೊಡೆದು ಮಿದುಳು ಹೊರಗೆ ಬಂದಿತ್ತು;

ಕಣ್ಣುಗುಡ್ಡೆ ಒಡೆದು ಹೋಗಿದೆ—

ಕಿವಿಮೂಗು ಮಾಯವಾಗಿಬಿಟ್ಟಿವೆ;

ದೇಹದಿಂದ ದಿಂಡವೇ ಮಾಯವಾಗಿದೆ—

ಕಾಲು ಮುರಿದಿದೆ—

ಕೈ ಕತ್ತರಿಸಿದ್ದಾರೆ—

ಮಾನವ ಆಕೃತಿಯೆಂದು ಗುರುತಿಸಲೇ ಸಾಧ್ಯವಿಲ್ಲ; ಬೀದಿಗುಂಟ ರಕ್ತದ ಕಾಲುವೆ ಹರಿದಿದೆ; ಹೆಣಗಳ ರಾಶಿ ಬಿದ್ದುಬಿಟ್ಟಿದೆ; ಮತ್ತರಾದ ಗುಂಡಾ ಜನರು ತಾಂಡವ ನೃತ್ಯ ನಡೆಸಿದ್ದಾರೆ.

ಕೊಲೆ! ಸುಲಿಗೆ! ಲೂಟಿ!!

ಮನೆಮುರಿದರು; ಅಂಗಡಿಯೊಡೆದರು; ಒಳಗಿನದೆಲ್ಲವನ್ನೂ ಬೀದಿಗೆಳೆದರು; ಬೇಕಾದದ್ದನ್ನು ತಕ್ಕೊಂಡು ಓಡಿದರು; ಉಳಿದುದಕ್ಕೆ ಕೊಳ್ಳಿಯಿಟ್ಟರು; ಎದುರು ಬಂದವರನ್ನು ಸಂಹರಿಸಿದರು. ನಗರಕ್ಕೆ ಬೆಂಕಿಹತ್ತಿಬಿಟ್ಟಿದೆ; ಅಗ್ನಿನಾರಾಯಣನು ತನ್ನ ಕರಾಳ ನಾಲಿಗೆಯನ್ನು ಚಾಚಿ ಗಗನಕ್ಕೆ ಅಡರಿದನು; ಭೂಲೋಕದಲ್ಲಿ ಹತ್ತಿದ ಅಗ್ನಿ ದೇವಲೋಕವನ್ನು ಸುಡುತ್ತದೆಯೋ ಅನ್ನುವಂತಿತ್ತು; ಮರುಕ್ಷಣದಲ್ಲಿ ಹೊಗೆಯಿಂದ ಮುಸುಕಿಹೋಯಿತು ಗಗನವೆಲ್ಲ; ಕತ್ತಲು; ಎಲ್ಲೆಲ್ಲಿಯೂ ಕತ್ತಲು!

ನಿರ್ಭಯ ಸ್ಥಾನವಿಲ್ಲ! ಅಭಯವನ್ನು ಹೇಳುವವರಿಲ್ಲ!!

x x x x

ಪೋಲಿಸರ ಗೋಳಿಬಾರು; ಸೈನಿಕರು ಗನ್ನು ಹಚ್ಚಿ ಗುಡುಗಿದರು; ಒಬ್ಬರೂ ಗುಂಡಾ ಸಿಕ್ಕಲಿಲ್ಲ; ನಿರಪರಾಧಿಗಳನ್ನು ಗುಂಡಿಗೆ ಬಲಿಕೊಟ್ಟರು; ಬೀದಿಯಲ್ಲಿ ರಕ್ಷಣೆಗೆಂದು ನಿಂತ ಸೈನಿಕರು ಕಿಡಕಿಯಿಂದ ಹೊರಗೆ ಹಣಿಕಿಹಾಕುವ ಹೆಂಗಸರನ್ನು ಗುಂಡಿನಿಂದ ಹೊಡೆದರು; ಕುತೂಹಲದಿಂದ ಹೊರಗೆ ಬಂದ ಮಕ್ಕಳನ್ನು ಸುಟ್ಟರು; ಆತ್ಮೀಯರನ್ನು ಕಳೆದುಕೊಂಡು ಹಲಬುತ್ತ ಬೀದಿಯಲಿ ಸತುಬಿದವರನು ಹುಡುಕುತ ಬಂದವರ ಹುಡಿಹಾರಿಸಿ ಬಿಟರು.

ರಕ್ಷಣೆಗೆಂದು ಬಂದ ಪೋಲಿಸರು, ಸೈನಿಕರೇ ಅನ್ಯಾಯಮಾಡಿದರು . . . . . ಅತ್ಯಾಚಾರ ನಡೆಯಿಸಿದರು . . . . ನಿರಪರಾಧಿಗಳನ್ನೂ ಸುಟ್ಟರು . . . ಕೊಲೆ ಸುಲಿಗೆಮಾಡಿ ಸಿಕ್ಕಷ್ಟು ದೋಚಿಕೊಂಡು ಓಡಿದರು:

ಪೋಲಿಸರಿಗೂ, ಗುಂಡಾ ಜನರಿಗೂ ಸ್ನೇಹವಂತೆ; ಇಷ್ಟೆಲ್ಲ ನಡೆದರೂ ಒಬ್ಬ ಗುಂಡಾ ಸಹಿತ ಪೋಲಿಸರ ಕೈಗೆ ಸಿಕ್ಕಲಿಲ್ಲವಂತೆ; ಶಿಪಾಯಿಗಳ ಗುಂಡಿಗೆ ಆಹುತಿಯಾಗಲಿಲ್ಲವಂತೆ; ಸೈನಿಕರ ಮಸಿನ್ನಗನ್ನುಗಳು ಒಬ್ಬಾದರೂ ಗುಂಡಾ ನನ್ನು ಆಹುತಿ ತಕೊಳ್ಳಲಿಲ್ಲವಂತೆ?

ಎಲ್ಲೆಲ್ಲಿಯೂ ಇದೇ ಸುದ್ದಿ, ನಡೆದುದು ಒಂದು ಅಂಶವಾದರೆ ಜನರ ಬಾಯಲ್ಲಿ ಅದು ನೂರುಪಟ್ಟು ಹಿರಿದಾಗುತ್ತಿತ್ತು! ಎಷ್ಟೋ ಸುಳ್ಳು ಸುದ್ದಿಗಳು ಹುಟ್ಟಿದವು; ಒಂದಾದರೂ ಅವುಗಳಲ್ಲಿ ಜನರನ್ನು ಸಂತೈಸುವವುಗಳಾಗಿರಲಿಲ್ಲ; ಎಲ್ಲವೂ ಬರೀಯ ಉದ್ರೇಕಿಸುವ ನುಡಿಗಳೇ!

ಅಲ್ಲಲ್ಲಿ ಗುಂಪುಕಟ್ಟಿಕೊಂಡು ಜನರು ಗುಜು, ಗುಜು ಮಾತನಾಡಿದರು;

ಕಲ್ಲು ಸಂಗ್ರಹಿಸಿ ಗುಂಪಿಹಾಕಿದರು; ಲಾರಿಗಳನ್ನು ಕಲೆಹಾಕಿದರು. ಕೈಗೆ ಸಿಕ್ಕ ಆಯುಧಗಳನ್ನು ಹದನಮಾಡಿದರು . . . . ಅಣ್ಣ ತಮ್ಮಂದಿರನ್ನು ನಿರ್ದಯ-ತನದಿಂದ ಕೊಂದರು; ನೆರೆಮನೆಯವರನ್ನೂ ಬೇಟೆಯಾಡಿದರು; ಇಷ್ಟು ದಿವಸ ಗೆಳೆಯರಂತೆ ಕೂಡಿ ಇದ್ದವರು ಒಮ್ಮೆಲೇ ವೈರಿಗಳಾದರು; ಒಬ್ಬರ ಮೇಲೆ ಒಬ್ಬರು ಕತ್ತಿ ಮಸೆದರು;

ಆಸ್ತಿಪಾಸ್ತಿಗಳ ಮೋಹತೊರೆದು ಓಡಿದವರು ಅಸಂಖ್ಯಾತ ಜನರು. ಹೆಂಡತಿ ಮಕ್ಕಳನ್ನು ಸಂಕಟಕ್ಕೆ ಗುರಿಮಾಡಿ ಪಾರಾದ ಜೀವಗಳ್ಳರೂ ಕಡಿಮೆ ಇರಲಿಲ್ಲ. ಮಾನಕ್ಕೆ ಅಂಜಿದ ಅದೆಷ್ಟೋ ಮಾನಿನಿಯರು ಜೀವತ್ಯಾಗ ಮಾಡಿದರು ಗಂಡಂದಿರೇ ಹೆಂಡಂದಿರನ್ನು ಕೊಂದರು! ತಂದೆತಾಯಿಗಳು ಮಕ್ಕಳ ಕತ್ತುಹಿಸುಕಿದರು; ತಮ್ಮ ಕೈಯಿಂದಲೇ ತಾವು ಗಳಿಸಿದ ಆಸ್ತಿಗೆ ಬೆಂಕಿ ಕೊಟ್ಟರು!

ಮಾನವರು ಮನುಷ್ಯತ್ವವನ್ನು ಮರೆತುಬಿಟ್ಟರು; ಪಶುಗಳಾದರು; ಪಶುಗಳಿಗಿಂತಲೂ ಕಡೆ; ಎಂಥ ಕಾಡುಮೃಗಗಳೂ ಸಹಿತ ಹೊಟ್ಟೆತುಂಬಿದ ಮೇಲೆ ಮುರಿದು ತಿನ್ನುವದಿಲ್ಲವಂತೆ; ಇಷ್ಟೆಲ್ಲ ನಡೆದುದು ಹೊಟ್ಟೆಯಪಾಡಿಗಾಗಿ ಅಲ್ಲ; ಮಾನವತ್ವದ ಅವಿರ್ಭಾವದಿಂದಾಗಿ; ಧರ್ಮದ ಹೆಸರಿನಲ್ಲಿ ಇಷ್ಟೆಲ್ಲ ನಡೆದು ಹೋಯಿತು! ಹೆಸರಿಗೆ ಧರ್ಮ!! ಎಷ್ಟೊ ಸ್ವಾರ್ಥ ಸಾಧಕರು

ಪರಿಸ್ಥಿತಿಯು ಉಪಯೋಗ ಮಾಡಿಕೊಂಡು ಕಾರ್ಯ ಸಾಧಿಸಿಕೊಂಡರು; ಮಾನವ ಚರಿತ್ರೆಯಲ್ಲಿಯೇ ತಮ್ಮ ಹೆಸರು ಅಚ್ಚಳಿಯದೆ ಉಳಿಯುವಂತೆ ಮಾಡಿಕೊಂಡರು.

ಅಂತೂ ಘನವಂತರಾದ ಬ್ರಿಟಿಷರು ಹಿಂದುಸ್ಥಾನಕ್ಕೆ ಸ್ವಾತಂತ್ರ್ಯ ಕೊಟ್ಟರು; ಅದರೊಂದಿಗೆ ಅರಾಜಕತೆಯನ್ನೂ ದಯಪಾಲಿಸಿದರು.

ತಪ್ಪು ಅವರದಲ್ಲ; ನಮ್ಮದು!

ಇದು ಬರಿಯ ಚಂದ್ರಗಡದಲ್ಲಿ ಮಾತ್ರ ನಡೆಯಲಿಲ್ಲ; ಭಾರತದ ಲಕ್ಷಾಂತರ ಹಳ್ಳಿಪಳ್ಳಿಗಳಲ್ಲಿಯೂ, ನಡೆಯಿತು

ಭಾರತದ ಕೀರುತಿಯನ್ನೂ ಎತ್ತಿಹಿಡಿಯಿತು;

ವಿಶ್ವಕ್ಕೆಲ್ಲ ಭಾರತದ ಸಂಸ್ಕೃತಿಯ ಪ್ರದರ್ಶನವು ನಡೆದುಹೋಯಿತು ಒಮ್ಮೆ!.

x x x x

(೩)

ಮೂರುದಿನಗಳ ಕೆಳಗಿನ ಮಾತು!

ಮುಗ್ಗುಲಮನೆಯ ಸದಾನಂದ ಅಹಮ್ಮದನ ಮೃತದೇಹವನ್ನು ಎತ್ತಿ ಕೊಂಡು ಬಂದು, ಬಾಗಿಲನ್ನು ನೂಕಿ ಖಾತುನ ಬೀಬಿಯ ಎದುರಿನಲ್ಲಿರಿಸಿದನು; ಅವನ ಕಂಗಳಲ್ಲಿ ನೀರು ದಳದಳನೆ ಸುರಿಯುತ್ತಿತ್ತು; ಮಾತನಾಡಬೇಕೆಂದರೆ ಕಂಠಬಿಗಿದುಹೋಗಿತ್ತು; ಖಾತುನ ಮಗುವನ್ನು ಅಪ್ಪಿಕೊಂಡು ಮನೆಯು ಹಾರಿಹೋಗುವಂತೆ ಅತ್ತುಬಿಟ್ಟಳು; ಸದಾನಂದನಿಗೆ ತಡೆಯುವದಾಗಲಿಲ್ಲ; ಅವನೂ ಅತ್ತುಬಿಟ್ಟನು; ನೊಂದ ಮಗುವನ್ನು ಸಂತೈಸುವಂತೆ ಖಾತುನ ಮರುಕ್ಷಣದಲ್ಲಿ ಮೈದಡವುತ್ತ ಬಡಬಡಿಸಹತ್ತಿದಳು; ಮಗುವನ್ನೇ ದಿಟ್ಟಿ ಸುತ್ತಿದ್ದಳಾಕೆ.

"ಅಹಮ್ಮದ ಮೈ ಬಹಳ ನೋವಾಗಿದೆ ಏನಪ್ಪಾ?"

"........"

"ಯಾರು ಹೊಡೆದರಪ್ಪಾ?"

"........"

"ಯಾಕೆ ಹೊಡೆದರು?"

". . . . . . . ."

"ಅಯ್ಯೋ ನನ್ನ ಕಂದನನ್ನು ಹೊಡೆಯುವಾಗ ಅವರ ಕೈಗಳೇಕೆ ಕಡಿದು ಬೀಳಲಿಲ್ಲ . . . . . . ಮಗು! . . . . . ."

". . . . . ."

"ಮಾತನೇಕಾಡುವದಿಲ್ಲಪ್ಪ? ಬಹಳ ಸಂಕಟವಾಗಿದೆಯೇ? . . . ."

". . . . . ."

ಒಮ್ಮೆಲೇ ಆಕೆಗೆ ಏನು ಆಯಿತೋ ಏನೋ ಎದೆ ಎದೆ ಬಡಿದುಕೊಂಡು ಅಳಲಿಕ್ಕೆ ಹತ್ತಿದಳು.

"ಅಯ್ಯಯ್ಯೊ, ಅಹಮ್ಮದ, ನನ್ನನ್ನು ಬಿಟ್ಟು ಹೋದೆಯಾ? . . . . . ಸಾಯುವಾಗ ಎಷ್ಟು ಕಷ್ಟವಾಗಿರಬೇಕು ಕಂದನಿಗೆ? ತಲೆಯೊಡೆಯುವಂತೆ ಹೊಡೆದಿದ್ದಾರೆ . . . . ಮಗೂ . . . . ." ಎಚ್ಚರದಪ್ಪಿ ಬಿದ್ದುಬಿಟ್ಟಳು ಆಕೆ!

ತಮ್ಮನನ್ನು ಅರಸಲು ಹೋದ ರಹೀಮನು ಮುಖಕೆಳಗೆ ಹಾಕಿಕೊಂಡು ಒಳಗೆ ಕಾಲಿಟ್ಟನು; ಸದಾನಂದನಿಗೆ ಅದನ್ನೂ ನೋಡಿ ದುಃಖ ಒತ್ತರಿಸಿ ಬಂತು; ಅವನನ್ನು ತಕ್ಕೆ ಹಾಕಿಕೊಂಡು ಅತ್ತುಬಿಟ್ಟನು; ರಹೀಮನ ದೇಹವೆಲ್ಲ ಅಂಜಿಕೆಯಿಂದ ಕಂಪಿಸಿಹೋಯಿತು; ಬಾಯಿಬಿಟ್ಟು ಕೇಳಬೇಕೆಂದರೆ ಬಾಯಿಂದ ಶಬ್ದಗಳೇ ಬರಲೊಲ್ಲವು; ಸದಾನಂದನೂ ಮಾತನಾಡಲಿಲ್ಲ. ಹತ್ತಿರದಲ್ಲಿ ನೆಲದಮೇಲೆ ಹಾಕಿದ ತಮ್ಮನ ದೇಹವನ್ನು ರಹೀಮನು ನೋಡಿದನು. ಒಮ್ಮೆಲೇ ತಕ್ಕೆಯಲ್ಲಿ ಹಿಡಿದ ಸದಾನಂದನನ್ನೂ ದೂಡಿ ತಮ್ಮನನ್ನು ತಬ್ಬಿ ಗೋಳಾಡಿದನು.

ಎದೆ ಹಿಂಡಿಹೋಗಿರಬೇಕು. ಒಮ್ಮೆಲೇ ಅಲ್ಲಿಂದೆದ್ದನು.

ಮುಖದ ಮೇಲೆ ನಿರ್ವಿಕಾರತೆಯು ಕಳೆ ಮೂಡಿತ್ತು; ಸದಾನಂದನನ್ನು ಏನನ್ನೋ ಕೇಳಬೇಕೆಂದು ಅವನ ಬಳಿಗೆ ಬಂದನು. ಸದಾನಂದನೇ ಮೊದಲುಮಾಡಿದನು.

"ರಹೀಮ ಭಯ್ಯಾ, ಏನು ಹೇಳಲಿ? ನೀಚರು ತಮ್ಮನನ್ನು ಕೊಂದರು . . . . . ಅಯ್ಯೋ ಆ ದೃಶ್ಯ ನಿಜವಾಗಿಯೂ ಭೀಕರವಾಗಿತ್ತು . . . . .

ನಾನು ದೂರದಲ್ಲಿದ್ದೆ; ಓಡಿ ಹೋಗುವಷ್ಟರಲ್ಲಿ ತೀರಿಯೇ ಬಿಟ್ಟಿತ್ತು; ಅಹಮ್ಮದನು ಗದ್ದಲಕೇಳಿ ಆ ಕಡೆಗೆ ಓಡಿ ಹೋಗಿರಬೇಕು. ಕೈಯಲ್ಲಿ ಪಾಠ-ಪುಸ್ತಕಗಳನ್ನು ಹಾಕಿದ ಚೀಲ ಹಾಗೆಯೇ ಇತ್ತು; ಪಾಪ! ಅಲ್ಲಿಯ ಭೀಕರತೆ ನೋಡಿ ಒಮ್ಮೆಲೇ ಅಹಮ್ಮದನು ಓಡಲನುವಾದನು. ಜನ ಜಂಗುಳಿಗೆ ಹೆದರಿ ಮಗ್ಗುಲ ಮನೆಯಲ್ಲಿ ಅಂಜಿಕೊಂಡ ನಾನು ಓಡುವ ಅಹಮ್ಮದನನ್ನು ನೋಡಿ ಹೊರಗೆ ಬಂದೆ; ಯಾವನೋ ಕೈಯಲ್ಲಿ ಬಡಿಗೆ ಹಿಡಿದುಕೊಂಡು ಬೆನ್ನತ್ತಿದ್ದನು. ಗಾಬರಿಗೊಂಡು ಅಹಮ್ಮದನನ್ನು ಉಳಿಸಲಿಕ್ಕೆಂದು ಧಾವಿಸಿದೆನು. ನೆರೆದ ಜನರಲ್ಲಿ ಕೆಲವರು ಹೊಡೆಯಬೇಡವೆಂದರು.

"ಪಾಪ ಸಣ್ಣ ಹುಡುಗ!"

"ಅವನೇನು ಮಾಡಿದ್ದಾನೆ ನಮಗೆ?"

"ಹಸುಳೆಯನ್ನು ಕೊಂದು ಯಾವ ನರಕಕ್ಕೆ ಹೋಗುವದು?"

"ಬೇಡ ಅವನನ್ನು ಹೊಡೆಯಬೇಡ"

"ಪಾಪ ಹುಡುಗ ಗಾಬರಿಯಾಗಿದ್ದಾನೆ ....... ಅಯ್ಯೋ ಬಿದ್ದುಬಿಟ್ಟನು! ...... ಏ, ರಾಮ್ಯಾ, ಏನು ನೋಡುತ್ತಿರುವೆ? ಮಂಗಳನ ಕೈಯೊಳಗಿನ ಬಡಿಗೆ ಕಸಿದುಕೊ! ಭೀಮು ಓಡು ಪೆಟ್ಟು ಹತ್ತಿತೊ ಏನೋ; ಹೋಗು ಎಬ್ಬಿಸು; ಎತ್ತಿಕೊಂಡು ಬಾ, ಸುರಕ್ಷಿತವಾಗಿ ಮನೆಗೆ ಮುಟ್ಟಿಸೋಣ ..... ಯಾರ ಹುಡುಗ ಗೊತ್ತೇನೊ?"

ಮತ್ತೆ ಕೆಲವರು ಬಾಯಿಗೆ ಬಂದಂತೆ ಬೊಗಳುತ್ತ ಹೊಡೆಯಲಿಕ್ಕೆ ಪ್ರೋತ್ಸಾಹನ ಕೊಡುತ್ತಿದ್ದರು.

ನೂರು ಮಂದಿ ಸಾವಿರ ಮಾತುಗಳು!

"ಸಣ್ಣ ಹುಡುಗನಂತೆ!"

"ಇಂದು ಸಣ್ಣ ಹುಡುಗನು; ನಾಳೆ ದೊಡ್ಡವನಾಗುತ್ತಾನೆ."

"ಹೀಗೆಯೇ ಅಲಕ್ಷ್ಯಮಾಡಿದರೆ ಇವನೇ ಕಂಟಕನಾಗುತ್ತಾನೆ."

"ಸಣ್ಣ ಹುಡಗನಾದರೇನಾಯಿತು; ಜಾತಿಯೇನು ಸುಳ್ಳೇನು?"

"ಹಾವಿನ ಮರಿ ಸಣ್ಣದೆಂದು ಬಿಡಬಹುದೇ?"

"ಹೂಂ; ಏಕೆ ಬೆಪ್ಪನಂತೆ ನಿಂತೆ; ಕುಟ್ಟು; ಹಾಕು; ದೇವಿಯ ಎದುರಿನಲ್ಲಿ ಪ್ರಮಾಣಮಾಡಿದ್ದನ್ನು ಮರೆತೆಯಾ? ಅವನು ಹೇಡಿ; ಸರಿ ಹಿಂದಕ್ಕೆ . . . . . ಬಂದು; ನುಗ್ಗು . . . . . . . . . ಮೊನ್ನೆ ಅವರು ಮೊಲೆ ಕುಡಿಯುವ ಕೂಸನ್ನು ಹೊಡೆಯಲಿಲ್ಲವೇ? ಅಯ್ಯೋ ನೀವೆಲ್ಲ ರಣಹೇಡಿಗಳು! ಇಷ್ಟರಲ್ಲಿಯೇ ನಿಮಗೆ ದಯೆ ಬಂದು ಬಿಡುತ್ತದೆ; ಇಷ್ಟೊಂದು ಕರುಣಾನಿಧಿಗಳೇಕೆ ಈ ಕೆಲಸಕ್ಕೆ ಕೈಹಾಕಿದಿರಿ? ಸರಿರಿ; ಎಲ್ಲರೂ ಹೆಂಗಸರು! . . . . . . . . . . ನಾನೇ . . . . . . . . . .

ಮೃತ್ಯುದೇವನಂತೆ ಆ ಮುರ್ಕಾಲನು ಮುನ್ನುಗ್ಗಿದನು; ಅಹಮ್ಮದನು ಅಷ್ಟರಲ್ಲಿ ಎಡವಿ ಬಿದ್ದು ಒದ್ದಾಡುತ್ತಿದ್ದನು. ಅವನು ಕೈಯೊಳಗಿನ ದೊಣ್ಣೆ ಎತ್ತಿದನು. ಒಮ್ಮೆಲೇ ಕಣ್ಣಿಗೆ ಕತ್ತಲೆಗೂಡಿಸಿದಂತಾಯಿತು; ಇನ್ನೂ ನೂರು ಅಂಗಲ ದೂರದಲ್ಲಿದ್ದೆ;

"ಅಯ್ಯೋ, ಸಣ್ಣ ಮಗು! ಹೊಡೆಯಬೇಡಿರಿ; ಅವನೇನೂ ಮಾಡಲಿಲ್ಲ . . . . ಅಯ್ಯೋ, ನಿಮ್ಮ ಕಾಲು ಬೀಳುತ್ತೇನೆ; ಕೈ ಮುಗಿಯುತ್ತೇನೆ . . . . . . . ದಯಮಾಡಿ ಬಿಟ್ಟುಬಿಡಿರಿ . . . . . . ದಮ್ಮಯ್ಯ . . . ."

ಗಟ್ಟಿಯಾಗಿ ಕಿರುಚಿದೆ ಅವನು ಬೇರೆ ಕೇಳಲಿಲ್ಲ; ನಾಲ್ಕು ಬಿಗಿದೇ ಬಿಟ್ಟನು; ಮಗು ಚಟಪಡಿಸಿತು; ವಿಲಿವಿಲಿ ಒದ್ದಾಡಿದನು ಅಹಮ್ಮದನು! ಬಾಯಿಂದ ಒಂದು ಮಾತೂ ಹೊರಬೀಳಲಿಲ್ಲ; ನಾನು ಬಂದು ತಕ್ಕೆಯಲ್ಲಿ ಹಿಡಿದಾಗ ಪ್ರಾಣವು ಹಾರಿಯೇ ಬಿಟ್ಟಿತ್ತು; ತಲೆಯೊಡೆದು ರಕ್ತ ಸೋರುತ್ತಿತ್ತು; ಮಗುವನ್ನು ತಕ್ಕೆಯಲ್ಲಿ ಹಿಡಿದುಕೊಂಡು ಮನೆಯ ಕಡೆಗೆ ನಡೆದಿದ್ದೆ. ಆದರೂ ಆ ನೀಚರು ನನ್ನನ್ನು ಹೋಗಗೊಡಲಿಲ್ಲ; ಮಗುವನ್ನು ಕಸಿದುಕೊಂಡು ಚರಂಡಿಗೆ ಎಸೆದರು; ನನ್ನನ್ನೂ ನಾಲ್ಕು ತಳಿಸಿದರು; ನೆಲದ ಮೇಲೆ ಬಿದ್ದು ಬಿಟ್ಟೆ; ಎಚ್ಚತ್ತಾಗ ಬೀದಿಯಲ್ಲಿ ಯಾರೂ ಇರಲಿಲ್ಲ; ಚರಂಡಿಯಲ್ಲಿ ಬಿದ್ದ ತಮ್ಮನನ್ನು ಎತ್ತಿಕೊಂಡು . . . . . .

ಸದಾನಂದನ ಬಾಯಿಂದ ಮಾತುಗಳೇ ಹೊರಡಲಿಲ್ಲ; ಮುಖವನ್ನು ತಗ್ಗಿಸಿದನು.

ಎದುರಿನಲ್ಲಿ ನಿಂತ ರಹಿಮನ ಕೋಪ ನೆತ್ತಿಗೇರಿತು ಇಷ್ಟರಲ್ಲಿಯೇ! ಕಣ್ಣುಗಳು ಕಿಡಿಗಳನ್ನು ಉಗುಳುತ್ತಿದ್ದವು; ಮುಖವು ರಣಗುಡುತ್ತಿತ್ತು; ತುಟಿ ಕಚ್ಚಿದನು; ಹಲ್ಲುಗಳು ಸಪ್ಪಳಮಾಡಿದವು; ಇಡಿಯ ದೇಹವೆಲ್ಲ ಕಂಪಿಸಿ ಬೆವರಿಟ್ಟಿತು; ಅವನ ನಾಡಿಗಳಲ್ಲಿ ರಕ್ತವು ಭರದಿಂದ ಹರಿಯಲನುವಾಯಿತು.

ರಹೀಮನ ಭೀಕರ ಮೂರ್ತಿಯನ್ನು ನೋಡಿ ಸದಾನಂದನಿಗೂ ಒಂದಿನಿತು ಅಂಜಿಕೆಯಾಯಿತು;

ಖಾತುನ ಮಗುವನ್ನೇ ದಿಟ್ಟಿಸುತ್ತ ಎಲ್ಲವನ್ನು ಕೇಳಿದಳು; ಎಷ್ಟೆಂದರೂ ಹೆತ್ತ ಕರುಳಲ್ಲವೇ? ಹೊಟ್ಟೆ ನೆತ್ತಿಕಟ್ಟಿ ಜೋಪಾನ ಮಾಡಿದ್ದಾಳೆ; ಆಕೆಗೂ ಕೆಡಕೆನಿಸಿತು;

ರಹೀಮನ ಉಗ್ರ ಮೂರ್ತಿಗೆ ಸಹನೆ ಮೀರಿತು.

"ಸದೂ, ಮಗುವನ್ನು ಈ ರೀತಿಯಾಗಿ ಅಮಾನುಷವಾಗಿ ಕೊಂದರೂ ನೀನು ಅವರಿಗೆ ಏನನ್ನೂ ಮಾಡಲಿಲ್ಲವೇ? ಹಾಗೆಯೇ ನೋಡಿ, ಹೇಗೆ ಸಹಿಸಿದಿ? ಪ್ರತಿಭಟಿಸಲಿಲ್ಲವೇ? ಅಹಮ್ಮದನ ಪ್ರಾಣಕ್ಕೆ ಬದಲಾಗಿ ನಿನ್ನ ಪ್ರಾಣವನ್ನೇಕೆ ಕೊಡಲಿಲ್ಲ? . . . . . . . ."

ಮಗುವಿನ ಮರಣದಿಂದ ಖಾತುನ ಬೀಬಿ ಭ್ರಾಂತಳಾಗಿ ಬಿಟ್ಟಿದ್ದಳು; ಯಾವುದನ್ನು ಮಾತನಾಡಬೇಕು, ಯಾವುದನ್ನು ಬಿಡಬೇಕೆಂಬುದು ಆಕೆಗೆ ತಿಳಿಯದೆ ಹೋಯಿತು; ಬಗೆ ಬಗೆಯಾಗಿ ಎದುರಿನಲ್ಲಿದ್ದವರೆಲ್ಲರನ್ನೂ ದೂಷಿಸಿದಳು.

"ಅವನೇಕೇ ಪ್ರಾಣಕೊಡುತ್ತಾನೆ? ಪ್ರಾಣಕೊಡಲಿಕ್ಕೆ ಇವನೇನು ಅವನ ತಮ್ಮನೇ? ಮೇಲಾಗಿ ಜಾತಿಯವನೇ? . . . . . ಇದೆಲ್ಲ ಹಿಂದುಗಳು ಹೂಡಿದ ಒಳಸಂಚಿನ ಪ್ರತಿಫಲ . . . . . . ಇವನೇನು ಅವರಿಂದ ಹೊರತಿಲ್ಲ ವಲ್ಲ! . . . . . . ಮೇಲಾಗಿ . . . . . ."

ಸದಾನಂದನಿಗೆ, ಖಾತುನಳು ದುಃಖದ ಭರದಲ್ಲಿ ಈ ಮಾತುಗಳನ್ನು ಹೇಳುತ್ತಿರುವಳೆಂಬುದು ತಿಳಿದಿತ್ತು; ಆದರೂ ಅವುಗಳನ್ನು ಆಲಿಸಿ ಅವನಿಗೂ ಕೆಡಕೆನಿಸಿತು; ಅವಳನ್ನು ಮುಂದೆ ಮಾತನಾಡಗೊಡಲಿಲ್ಲ.

"ಮಾ! ಈ ಮಾತು ಮಾತ್ರ ಹೇಳಬೇಡ;" ಅವನ ಮಾತಿನಲ್ಲಿ ದೀನತೆ ಯಿತ್ತು; ಪ್ರೇಮವಿತ್ತು; ನಿಧಾನತೆಯಿತ್ತು;

ಆದರೆ ಖಾತುನಳ ಮನಸ್ಥಿತಿ ಅವನ ಮನಸ್ಥಿತಿಗಿಂತ ತೀರ ಭಿನ್ನ ವಾಗಿತ್ತು; ಆಕೆ ಮತ್ತಿನಿತು ರೇಗಿದಳು.

"ಅದನ್ನೇ ಏಕೆ, ಅದಕ್ಕೂ ಮುಂದೆ ಹೋಗುತ್ತೇನೆ; ಮಕ್ಕಳನ್ನು ಕೊಂದ ನೀವು ಮನುಷ್ಯರಲ್ಲ; ರಾಕ್ಷಸರು; ಹೇಡಿಗಳು . . . . . . ಷಂಡರು . . . . . . . ಹೆಂಗಸರು . . . . . . ."

ಆಕೆಯ ಬಾಯಿಂದ ಸರಿಯಾಗಿ ಮಾತುಗಳೇ ಬರುತ್ತಿರಲಿಲ್ಲ; ಕ್ರೋಧದ ಜ್ವಾಲೆಗಳು ಮಾತ್ರ ಮುಖದ ಮೇಲೆ ಮೂಡಿದ್ದವು.

ಸದಾನಂದನಿಗೆ ಆಕೆಯ ಮಾತುಗಳು ಸತ್ಯವೆನಿಸಿದವು; ಏನನ್ನೂ ಮಾತನಾಡಬಾರದೆಂದು ನಿಶ್ಚಯಿಸಿ, ಅಲ್ಲಿಂದ ಹೊರಡಬೇಕೆಂದಿದ್ದನು;

ಖಾತುನಳು ಮತ್ತೆ ಆರ್ಭಟಿಸಿದಳು. ಈ ಸಲ ಸದಾನಂದನ ಮೇಲೆ ಆಕೆ ರೇಗಿರಲಿಲ್ಲ; ಎದುರಿನಲ್ಲಿ ನಿಂತ ರಹೀಮನ ಕಡೆಗೆ ಲಕ್ಷ್ಯಹೋಗಿತ್ತು!

"ನೋಡು, ಹೇಗೆ ನಿಂತಿದ್ದಾನೆ ಎದುರಿನಲ್ಲಿ? ತಮ್ಮನನ್ನು ಹೊಡೆದು ಕೊಂದಿದ್ದಾರೆ; ಎದುರಿನಲ್ಲಿ ತಮ್ಮನು ಸತ್ತು ಬಿದ್ದಿದ್ದರೂ ನೋಡುತ್ತ ನಿಂತಿದ್ದಾನೆ; ಒಂದಿನಿತಾದರೂ ಮನುಷ್ಯತ್ವವಿದ್ದರೆ ಹೀಗೆ ನಿಲ್ಲುತ್ತಿದ್ದನೇ? ...... ಅಯ್ಯೋ, ಯಾರು ಇದ್ದರೇನು? ...... ಅಣ್ಣತಮ್ಮಂದಿರಂತೆ! ನೆರೆಹೊರೆಯವರಂತೆ; ತಮ್ಮನನ್ನು ಕೊಂದರೆ ಅಣ್ಣನಿಗೆ ಕಳವಳವಿಲ್ಲ; ..... ಅವರು ಇದ್ದಿದ್ದರೆ ...... ಮಗು, ಅಹಮ್ಮದ, ಭೂಮಿಗೆ ಬಿದ್ದ ನಿನ್ನ ರಕ್ತದ ಒಂದೊಂದು ಹನಿಯೇ ಇದೇ ನೆಲದಲ್ಲಿ ಒಂದೊಂದು ವೀರ ವ್ಯಕ್ತಿಯಾಗಿ ವೈತಾಳಿ ನಿನ್ನನ್ನು ನಿರ್ದಯಿತನದಿಂದ ಕೊಂದವರನ್ನು—ಎಲ್ಲ ಹಿಂದುಗಳನ್ನು ಸೀಳಿ ಹಾಕಲಿ! ......."

ಖಾತುನ ಆಗ ರಣಮಾರಿಯಂತೆ ಕಾಣುತ್ತಿದ್ದಳು; ಅಂಥ ಮುದಿತನದಲ್ಲಿಯೂ ಆಕೆಯಲ್ಲಿ ಎಲ್ಲಿಂದಲೋ ಶಕ್ತಿ ಬಂದಿತ್ತು; ರಹೀಮನ ರಕ್ತ ಕುದಿಯಿತು.

"ಮಾ! ನಿನ್ನ ಮಗನೇ ನಾನಾಗಿದ್ದುದು ನಿಜವಾದರೆ, ತಮ್ಮನನ್ನು ಕೊಂದವರನ್ನು ಹಾಗೆ ಬಿಡುವದಿಲ್ಲ ...... ಅಮ್ಮಾ, ನಿನ್ನ ಮಗನಲ್ಲಿ ವಿಶ್ವಾಸವಿಡು ....... ಚಿತ್ರ ಹಿಂಸೆಮಾಡಿ ತಮ್ಮನನ್ನು ಕೊಂದಿದ್ದಾರೆ; ಇಡೀ ಇಸ್ಲಾಮು ಧರ್ಮಕ್ಕೇನೇ ಅಪಮಾನ ಮಾಡಿದ್ದಾರೆ ......."

"ಮಾಡಿದ್ದಾರೆ" .... ಖಾತೂನ ಸಹಿತ ಧ್ವನಿಕೂಡಿಸಿದಳು. "ಸಾಧ್ಯವಿದ್ದಷ್ಟು ಹೆಣಗಾಡುವೆ; ಜೀವವನ್ನೇ ಪಣಕ್ಕೆ ಹಚ್ಚುವೆ; ನರ ನರಗಳಲ್ಲಿ ರಕ್ತ ಹರಿದಾಡುವ ತನಕ ಹೋರಾಡುವೆ; ಸಾಧ್ಯವಿದ್ದಷ್ಟು ಹೇಡಿ ಹಿಂದುಗಳನ್ನು ತುಂಡರಿಸುವೆ ....." ಸದಾನಂದನಿಗೆ ಈ ಮಾತುಗಳನ್ನು ಕೇಳಿ ಸೋಜಿಗವೇನೂ ಅನಿಸಲಿಲ್ಲ; ಸಿಟ್ಟಿನ ಭರದಲ್ಲಿ ನುಡಿಯುವ ಮಾತುಗಳೆಂದು ತಿಳಿದನು.

ಆದರೂ ರಹೀಮನನ್ನು ಅವನು ಚನ್ನಾಗಿ ಬಲ್ಲನು; ಅವನ ದೃಢನಿರ್ಧಾರಕ್ಕಾಗಿ ಅವನಲ್ಲಿ ಅಚಲ ವಿಶ್ವಾಸವಿತ್ತು; ಅದಕ್ಕಾಗಿ ಒಂದಿನಿತು ನಡುಗಿದನು; ಅವನನ್ನು ಸಂತೈಸಲು ಯತ್ನಿಸಿದನು; ಆದರೆ ಸಾಧ್ಯವಾಗಲಿಲ್ಲ.

ಆಗ ಯಾವ ಶಕ್ತಿಗೂ ರಹೀಮನನ್ನು ತಡೆಹಿಡಿಯುವದಕ್ಕೂ, ಸಂತೈಸುವದಕ್ಕೂ ಸಾಧ್ಯವಿರಲಿಲ್ಲ.

"ಮಾ! ನಿನ್ನ ಮಗನನ್ನು ಕೊಂದು, ನಿನ್ನ ಹೃದಯವನ್ನೇ ಹಾಳು ಮಾಡಿದ್ದಾರೆ . . . . . . ನನ್ನ ತಮ್ಮನನ್ನು ಕೊಂದು ನನ್ನನ್ನು ಹೇಡಿಯೆಂದು ಸಾರಿದ್ದಾರೆ . . . . . ಮುಸಲ್ಮಾನ ಹುಡುಗನನ್ನು ಜಜ್ಜಿ ಇಸ್ಲಾಮ ಧರ್ಮಕ್ಕೇ ಅಪಮಾನವನ್ನು ಮಾಡಿದ್ದಾರೆ; ನಾನು ಪವಿತ್ರ ಇಸ್ಲಾಮ ಧರ್ಮದ ತರುಣನಾಗಿದ್ದೇ ನಿಜವಾಗಿದ್ದಲ್ಲಿ, ಈ ಕಾಫಿರರನ್ನೆಲ್ಲ ಕಾಡುಮೃಗಗಳ ಬೇಟೆಯಾಡಿದಂತೆ . . . . . . . ."

ಮಗನ ವೀರಾವೇಷದ ಮಾತಿನಿಂದ ಖಾತುನಳಿಗೆ ಒಂದಿನಿತು ಸಮಾಧಾನವಾಗಿತ್ತು; ಅವನನ್ನು ಹುರುದುಂಬಿಸುವದಕ್ಕೆಂದು ಹೇಳಿದಳು.

"ಅದು ಬರೀಯ ಪ್ರತೀಕಾರವಿಷ್ಟೇ ಅಲ್ಲ; ನಿನ್ನ ಪಾಲಿನ ಕರ್ತವ್ಯ; ನಿನ್ನ ಮಾತೆಯ ಆಜ್ಞೆ! ಧರ್ಮಕ್ಕೆ ನೀನು ಸಲ್ಲಿಸಬೇಕಾದ ಸೇವೆ! . . . . . ."

"ಮ್ಮಾ, ನಿನ್ನ ಒಬ್ಬ ಮಗನನ್ನು ಕೊಂದಿದ್ದಾರೆ; ಅದಕ್ಕೆ ಪ್ರತಿಯಾಗಿ ಇಬ್ಬರು ಹಿಂದೂ ಹುಡುಗರನ್ನು ತಂದು ನಿನ್ನ ಕಣ್ಣೆದುರಿನಲ್ಲಿ ಸೀಳಿ ಹಾಕುತ್ತೇನೆ . . . . . . ."

ರಹೀಮನ ಮೈಮೇಲೆ ಎಚ್ಚರವಿದ್ದಂತೆ ತೋರಲಿಲ್ಲ; ಸದಾನಂದ ತಡೆದನು.

"ರಹೀಮ ಭಯ್ಯಾ, ಏನು ಮಾತನಾಡುತ್ತಿರುವಿ? ಎಚ್ಚರ-ವಿದೆಯೋ?"

"ಇರದೇ ಏನು! ಇದೊ . . . . . . . . ."

ಕೈ ಮುಷ್ಟಿಮಾಡಿ ತೋರಿಸಿದನು; ಖಾತುನ ಉರಿವ ಬೆಂಕಿಯಲ್ಲಿ ಎಣ್ಣೆ ಸುರಿವಿದಳು.

"ಹಾಗೆ ಮಾಡಿದರೇನೇ ನೀನು ನನ್ನ ಮಗನು! ಗಂಡಸಾಗಿದ್ದರೆ ನಿನ್ನ ಮಾತಿನಂತೆ ನಡೆಯುವಿ . . . . ನಿಂತೇನು ನೋಡುತ್ತಿರುವೆ . . . . ಈಗಿಂದೀಗಲೇ ಹೋಗು . . . . . . ."

ರಹೀಮನು ಒಮ್ಮೆ ತಮ್ಮನ ಮೃತ ದೇಹದ ಕಡೆಗೆ, ಒಮ್ಮೆ ಮಾತೆಯ ಕಡೆಗೆ, ನೋಡಿ ರಭಸದಿಂದ ಮನೆಯಿಂದ ಹೊರಬಿದ್ದನು. ಸದಾನಂದನು ಅವನ ಹಿಂದೆಯೇ ಓಡಿದನು . . . . . . .

" ರಹೀಮ ಭಯ್ಯಾ, ಈಗ ಶಾಂತನಾಗು . . . . . . ತಾಳ್ಮೆ ತಂದುಕೊ . . . . . . . . . . ನನ್ನ ಮಾತು ಕೇಳು . . . . . .

ರಹೀಮನಿಗೆ ಅವನ ಮಾತುಗಳಾವುವೂ ಕೇಳಿಸಿದಂತಿರಲಿಲ್ಲ.

x x x x

(೪)

ಮತ್ತೆ ಮೂರು ದಿನಗಳ ಮೇಲೆ ರಹಿಮನು ಮನೆಗೆ ಬಂದನು; ಅವನ ಕ್ರೋಧವಿನ್ನೂ ಇಳಿದಿರಲಿಲ್ಲ; ದೇಹವೆಲ್ಲ ರಕ್ತದಿಂದ ಸ್ನಾನಮಾಡಿದಂತಾಗಿತ್ತು; ರಣಾಂಗಣದಿಂದ ಪಾರಾಗಿಬಂದ ವೀರನಂತೆ ಕಾಣುತ್ತಿದ್ದನವನು.

ಸುತ್ತಲೂ ಕತ್ತಲೆ ದಟ್ಟವಾಗಿ ಕವಿದುಬಿಟ್ಟಿತ್ತು; ಮನೆಯಲ್ಲಿ ದೀಪವನ್ನೇ ಹಚ್ಚಿರಲಿಲ್ಲ; ಸಂಗಡಿಗನ ತಲೆಯಮೇಲಿನ ಹೊರೆಯನ್ನು ಇಳಿಸಿಕೊಂಡು ಕತ್ತಲೆ ಯಲ್ಲಿಯೇ ಒಂದು ಕೋಣೆಯಲ್ಲಿ ಇರಿಸಿಬಂದನು; ಮನೆಯನ್ನೆಲ್ಲ ಕತ್ತಲೆ ಯಲ್ಲಿಯೇ ಸುತ್ತಿದನು. ಯಾರೂ ಮನೆಯಲ್ಲಿದ್ದಂತೆ ಕಂಡುಬರಲಿಲ್ಲ; ಕಡ್ಡೀ ಕೊರೆದು ಮೂಲೆಯಲ್ಲಿಯ ದೀಪವನ್ನು ಹಚ್ಚಿ ಅದನ್ನು ಕೈಯಲ್ಲಿ ಹಿಡಿದು ಕೊಂಡು ಗಟ್ಟಿಯಾಗಿ ಕೂಗುತ್ತ ಮನೆಯನ್ನು ಮತ್ತೊಮ್ಮೆ ಸುತ್ತಿದನು.

" ಮಾ! . . . . ಮಾ! . . . . ಮಾ! . . . ."

ಖಾತುನ ಬೇರೆ ಉತ್ತರ ಕೊಡಲಿಲ್ಲ;

ದೀಪವನ್ನು ಒಳಗೆ ಇಟ್ಟು ಹೊರಗೆ ಬಂದನು; ಮನೆಯ ಎಡಗಡೆಗೆ ಒಂದು ಸಣ್ಣ ಮಾವಿನ ಮರವಿತ್ತು; ಅದರ ಅಡಿಯಲ್ಲಿಯೇ ಅಹಮ್ಮದನನ್ನು ಹುಗಿದಿದ್ದರು. ರಹೀಮನಿಗೆ ಅದು ತಿಳಿದಿರಲಿಲ್ಲ; ಅಲ್ಲಿ ಯಾರೋ ಕುಳಿತಂತೆನಿ ಸಿತು; ಅಲ್ಲಿಗೆ ಹೋದನು. ಮಗುವಿನ ಗೋರಿಯ ಪಕ್ಕದಲ್ಲಿ ಖಾತುನ ಕುಳಿತು ಚಿಂತಿಸುತ್ತಿದ್ದಳು.

ರಹೀಮ ಮೆಲ್ಲನೆ ಹೋಗಿ ಆಕೆಯ ಹಿಂದೆ ನಿಂತನು. ಖಾತುನಳು ಸಮಾಧಿಯಲ್ಲಿಯೇ ದಿಟ್ಟಿ ನಿಲ್ಲಿಸಿ ಕುಳಿತಿದ್ದಳು; ರಹೀಮನು ಬಂದುದು ಆಕೆಯ ಲಕ್ಷಕ್ಕೆ ಒರಲಿಲ್ಲ; ರಹೀಮ ಎಷ್ಟೋ ಹೊತ್ತು ಅಲ್ಲಿಯೇ ಕಾಯ್ದಿದ್ದನು;

ತಾಯಿಯು ಬೇರೆ ಅವನ ಕಡೆಗೆ ನೋಡಲಿಲ್ಲ; ರಹೀಮನೇ ಮೊದಲುಮಾಡಿದನು.

"ಮಾ!"

ಖಾತುನಳು ಕತ್ತೆತ್ತಿ ನೋಡಿ ಕೇಳಿದಳು.

"ಯಾರು?"

"ನಾನು; ರಹೀಮ . . . . . ."

"ಬಾ, ಮಗು; ಒಮ್ಮೆ ಸುರಕ್ಷಿತವಾಗಿ ಮರಳಿ ಬಂದೆಯಲ್ಲಾ! ಖುದಾ ನಿನಗೆ ಒಳ್ಳೇದು ಮಾಡಲಿ . . . . . ."

"ಮಾ, ನಾನು . . . . . ."

"ರಹೀಮ, ಬಾ; ಸನಿಯಕ್ಕೆ ಬಾ"

ಖಾತುನಳು ರಹೀಮನನ್ನು ಬಿಗಿದಪ್ಪಿದಳು. ಹಾಗೆಯೇ ಗಾಢಾಲಿಂಗನದಲ್ಲಿ ಎಷ್ಟೋ ಹೊತ್ತು ತಾಯಿಮಕ್ಕಳಿಬ್ಬರು ಕುಳಿತಿದ್ದರು.

"ಮಾ, ಚಳಿಬಿದ್ದಿದೆ; ಒಳಗೆ ಹೋಗೋಣ!"

"ಹೂಂ; ನಡೆಯಪ್ಪಾ;".

ಆಕೆಯ ಮನಸ್ಸು ಅಳುಕಿದಂತಾಯಿತು; ಬಹಳಮಾಡಿ ಅಹಮ್ಮದನಿಗೆ 'ಚಳಿಯಾಗಲಿಕ್ಕಿಲ್ಲವೇ' ಎಂದು ಅನಿಸಿರಬೇಕು. ರಹೀಮನು ಅವಳನ್ನು ಕೈಹಿಡಿದು ನಡೆಯಿಸುತ್ತ ತಾಯಿಯನ್ನು ಒಳಗೆ ಕರೆದೊಯ್ದನು.

ಖಾತುನಳು ತೀರಾ ಸೋತುಹೋಗಿದ್ದಳು. ನಡುಮನೆಯಲ್ಲಿ ಒಂದು ಕಂಬಕ್ಕೊರಗಿ ಕುಳಿತಳು. ರಹೀಮನು ಪಕ್ಕದಲ್ಲಿ ನಿಂತಿದ್ದನು. ತಾಯಿಗೆ ಏನೋ ಹೇಳಲು ಉತ್ಸುಕನಾಗಿದ್ದನವನು.

ಖಾತುನಳು ಹೇಳಿದಳು.

"ಮಗೂ, ಸದು ಈಗೆರಡು ದಿನಗಳಿಂದ ಮನೆಯ ಕಡೆಗೆ ಬರಲಿಲ್ಲ; ಅವನ ಮನೆಗೂ ಬಂದಿಲ್ಲವಂತೆ; ನಿನಗೇನಾದರೂ ಗೊತ್ತಿದೆಯೋ ಅವನ ಸಮಾಚಾರ? . . . . . . . ಎಲ್ಲಿ ಹೋಗಿರಬಹುದು? ಜೀವಕ್ಕೇನಾದರೂ ಅಪಾಯವಿಲ್ಲ ತಾನೆ? . . . . ".

"ಅಮ್ಮಾ, ಇನ್ನೆಲ್ಲಿಯ ಸದು . . . . ಅವನ ಮಾತು ಕೇಳಿದ್ದರೆ ನಾನು . . . . . . . . ನಾನು ಮಾಡುವ ಪ್ರತಿಯೊಂದು ಕಾರ್ಯಕ್ಕೂ ಅಡ್ಡಿಮಾಡಿದನು . . . . ಮೇಲಾಗಿ ಬುದ್ಧೀ ಹೇಳಲಿಕ್ಕೆ ಬರುತ್ತಿದ್ದನು . . . . ನಾನೇ ತೀರಿಸಿಬಿಡಬೇಕೆಂದಿದ್ದೆ; ಆದರೆ ನನ್ನ ಕೈಯಿಂದ ಅದು ಆಗಲಿಲ್ಲ. ಅವನು ನನ್ನ ಹತ್ತರಿರುವ ತನಕ ನಾನು ಕೈಕೊಂಡ ಕೆಲಸ ಕೈಗೂಡದೆಂದು ಖಚಿತವಾದಾಗ ನಜೀರನಿಗೆ ಹೇಳಿದೆ; ಅವನು . . . . . . . ."

"ಅಯ್ಯೋ ಸದು! ನೀನೂ ಹೋಗಿಬಿಟ್ಟೆಯಾ? ನಜೀರ, ನೀನು ಕೊಲೆಗಡಕ; ನೀಚ; ಸದು ನಿನಗೆ ಅಣ್ಣನಂತಿರಲಿಲ್ಲವೇ ರಹೀಮು? ಅವನನ್ನು ಹೇಗೆ ಕೊಲ್ಲಿಸಿದೆ? ನಿನ್ನ ಮನಸ್ಸಾದರೂ ಹೇಗಾಯಿತು? . . . . . ಹಾಂ! ಖುದಾ, ಏನೇನು ಅತ್ಯಾಚಾರ, ಅನಾಚಾರ, ಅನಾಹುತಗಳು ನಡೆದವಪ್ಪಾ ನಿನ್ನ ಜಗತ್ತಿನಲ್ಲಿ? . . . . . . ರಹೀಮು, ಮತ್ತೇನು ನಡೆಯಿತು? ಬೇಗ ಹೇಳು . . . . . ಈ ಹೃದಯ ನಿಂತು . . . . . . . . ."

ಖಾತುನಳು ಉದ್ವೇಗದ ಭರದಲ್ಲಿ ಕೇಳಿದ ಪ್ರಶ್ನೆಯನ್ನು ರಹೀಮನು ಆಕೆಯು ಆನಂದಿತೆಯಾಗಿಯೇ ಕೇಳಿದಳೆಂದು ಅರ್ಥಮಾಡಿಕೊಂಡನು; ತಾನು ಮಾಡಿದ ಕೆಲಸದ ವಿವರವನ್ನು ತಾಯಿಗೆ ಹೇಳಿದರೆ ಆಕೆ ಸಂತುಷ್ಟಳಾಗುವಳೆಂದು ತಿಳಿದನು. ತಮ್ಮನು ಸತ್ತ ದುಃಖದಲ್ಲಿ ಕೊಂಚವಾದರೂ ಕಡಿಮೆಯಾಗುವದೆಂದು ಉಬ್ಬಿದನು. ಎಲ್ಲಕ್ಕೂ ಹೆಚ್ಚಾಗಿ ತನ್ನ ರಾಕ್ಷಸೀಕತೆಯನ್ನು ತಾಯಿಯ ಎದುರಿನಲ್ಲಿ ಆದಷ್ಟು ತೀವ್ರ ಹೇಳುವದು ಅವನಿಗೆ ಬೇಕಾಗಿತ್ತು.

ಅವನು ಹೇಳುವದನ್ನು ಕೇಳಿ, ಖಾತುನಳು ಒಂದು ಸಲ ಎಚ್ಚರದಪ್ಪಿ ಹೋದಳು; ಬಾಯಿಂದ ಮಾತುಗಳೇ ಹೊರಡಲಿಲ್ಲ; ರಹೀಮನು ಆಕೆಯನ್ನು ಉಪಚರಿಸಿ ಮತ್ತೆ ಅರ್ಧಕ್ಕೆ ನಿಲ್ಲಿಸಿದ ಕತೆಯನ್ನು ಮುಗಿಸಿದನು.

ಖಾತುನಳ ಹೃದಯ ನೊಂದು ಹೋಗಿತ್ತು.

ಶಿಲಾಪ್ರತಿಮೆಯಂತೆ ಕುಳಿತಿದ್ದಳು; ರಹೀಮನು ಹೇಳುತ್ತಿದ್ದುದು ಕೊನೆಗಂತೂ ಆಕೆಗೆ ಏನೂ ತಿಳಿಯಲಿಲ್ಲ.

ರಹೀಮನು ಅಲ್ಲಿಂದೆದ್ದು ಮುಗ್ಗುಲ ಕೋಣೆಯೊಳಗಿಂದ ಒಂದು ಗಂಟು ತಂದು, ತಾಯಿಯ ಎದುರಿನಲ್ಲಿರಿಸಿದನು. ಖಾತುನಳು ಹಾಗೆಯೇ ಅದನ್ನು ನೋಡುತ್ತಿದ್ದಳು. ರಕ್ತದಿಂದ ಅದು ತೊಯ್ದುಹೋಗಿತ್ತು; ಬಿಚ್ಚಿದನು;

ಖಾತುನಳು ಚಿಟ್ಟನೆ ಚೀರಿಬಿಟ್ಟಳು;

ಆರೇಳು ವರುಷದ ಎರಡು ಹುಡುಗರು;

ಒಂದು ಹೆಣ್ಣು;

ಇನ್ನೊಂದು ಗಂಡು;

ಮೈತುಂಬ ಗಾಯಗಳಾಗಿಬಿಟ್ಟಿವೆ; ರಕ್ತ ಸೋರುತ್ತಿತ್ತು. ಆದರೂ ಜೀವಹೋಗಿರಲಿಲ್ಲ; ಬೇಕೆಂದೇ ಅರೆಜೀವ ಮಾಡಿ ತಂದಿದ್ದನು; ಆದರೆ ಮೈಮೇಲೆ ಎಚ್ಚರವಿರಲಿಲ್ಲ.

ಖಾತುನಳು ಕೈಗಳನ್ನು ಚಾಚಿ ಮಕ್ಕಳಿಬ್ಬರನ್ನು ಅಪ್ಪಿದಳು. ತನ್ನ ಮೇಲು ಮುಸುಕಿನಿಂದ ಮುಖದ ಮೇಲಿನ ರಕ್ತದ ಕಲೆಗಳನ್ನು ಒರೆಯಿಸಿ ದಳು.

ರಹೀಮನು ಖಾತುನಳನ್ನು ಮೆಲ್ಲನೆ ಕೇಳಿದನು "ಮಾ, ನೀನು ಆಜ್ಞಾಪಿಸಿದಂತೆ . . . . . ನಾನು ನಿನಗೆ ಮಾತುಕೊಟ್ಟಂತೆ ಈ ಹಿಂದೂ ಹುಡುಗರನ್ನು ತಂದಿದ್ದೇನೆ; ಅಲ್ಲಿಯೇ ಕೊಂದು ಬಿಸುಟಿ ಬಿಡುತ್ತಿದ್ದೆ; ನಿನ್ನ ಎದುರಿನಲ್ಲಿ ಸೀಳಿಹಾಕುವೆನೆಂದು ಮಾತುಕೊಟ್ಟದ್ದರಿಂದ ಇಲ್ಲಿಗೆ . . . ."

"ಧೂ, ನೀಚಾ! ನಿಷ್ಕರುಣಿ!! ಕಟುಕನು ನೀನು. ಎಳೆಯ ಮಕ್ಕಳ ಮೇಲೆ ಕೈಮಾಡಲು ಹೇಗೆ ಮನಸ್ಸಾಯಿತು ನಿನಗೆ? . . . . . ."

"ಅಮ್ಮಾ, ಅವರು ಅಹಮ್ಮದನನ್ನು ಕೊಲ್ಲಲಿಲ್ಲವೇ?"

"ಅಹಮ್ಮದನನ್ನು ಕೊಂದರು!" ಆಕೆಯ ಬಾಯಿಂದಲೂ ಉದ್ಗಾರ ಹೊರಟಿತು.

"ಅಂತೆಯೇ . . . . . ."

"ಹೌದು; ದೊಡ್ಡ ಸಾಹಸ ಮಾಡಿದೆಯಪ್ಪ; ಅಹಮ್ಮದನನ್ನು ಈ ಮಕ್ಕಳು ಕೊಂದಿಲ್ಲ . . . . ."

"ಹಿಂದುಗಳು ಕೊಂದರು!"

"ಅದಕ್ಕೆ ಈ ಕಂದಮ್ಮಗಳಿಗೆ ಶಿಕ್ಷೆಯೇ?"

"ಇವು ಹಿಂದೂ ಕುನ್ನಿಗಳು!"

"ಮುಚ್ಚು ಬಾಯಿ! ಯಾರು ಕಲಿಸಿದರು ಹೀಗೆ ಮಾತನಾಡಲಿಕ್ಕೆ? ನನ್ನ ಹೊಟ್ಟೆಯಿಂದ ಹೇಗೆ ಹುಟ್ಟಿದೆ ನೀನು?"

"ಅಮ್ಮಾ, ನೀನೇ ಹೇಳಲಿಲ್ಲವೇ? . . . . . ."

". . . . . . . . . . . . ." ಖಾತುನಳು ಉತ್ತರ ಕೊಡಲಿಲ್ಲ.

ಖಾತುನಳು ಸ್ವಲ್ಪ ಸಮಯದ ನಂತರ ಶಾಂತಳಾಗಿ ಮಾತನಾಡಿದಳು.

"ರಹೀಮ, ಇವು ಯಾರ ಹುಡುಗರು?"

"ಹಿಂದೂ ಹುಡುಗರು!"

"ಅದು ಗೊತ್ತಿದೆ . . . . . . ಎಲ್ಲಿಂದ ತಂದೆ?"

"ದೊಡ್ಡ ಪೇಟೆಯಿಂದ;"

"ಹೇಗೆ ತಂದೆ?"

". . . . . . . . . . . . ." ರಹೀಮನಿಗೆ ಹೇಳುವ ಮನಸ್ಸಾಗಲಿಲ್ಲ.

"ರಹೀಮ, ಮತ್ತೆ ಈ ಕಂದಮ್ಮರನ್ನು ಅವರ ಮನೆಗೆ ಮುಟ್ಟಿಸಿ ಬಾ;"

ಖಾತುನಳ ಮನಸ್ಸಿನ ಸ್ಥಿತಿಯೇ ಅವನಿಗೆ ಅರ್ಥವಾಗಲಿಲ್ಲ; ರಹೀಮ ಹೇಳಿದನು.

"ಮಾ, ಇವರನ್ನು ತಿರುಗಿ ಕಳುಹಿಸಲಿಕ್ಕ ಇಲ್ಲಿಗೆ ತರಲಿಲ್ಲ. ನಿನ್ನೆದುರು ಸೀಳಿಹಾಕಿ, ಅಹಮ್ಮದನು ಸತ್ತುದರಿಂದ ನಿನಗಾದ ದುಃಖವನ್ನು ಕಡಿಮೆ ಮಾಡಲಿಕ್ಕೆ . . . . . ."

"ರಹೀಮ, ಹಾಗೆ ಮಾತನಾಡಬೇಡ . . . . . . ಈಗಾಗಲೇ ನೀನು ಮಾಡಿದ್ದೇನೂ ಕಡಿಮೆಯಿಲ್ಲ . . . . ನನ್ನ ಮಾತು ಕೇಳು, ಈ ಮಕ್ಕಳನ್ನು ಅವರವರ ಮನೆಗಳಿಗೆ ಮುಟ್ಟಿಸಿ ಬಾ."

"ಅಮ್ಮಾ, ಅವು ಬದುಕುವ ಆಶೆಯಿಲ್ಲ; ಮೇಲಾಗಿ ಅವರು ನನ್ನನ್ನು ಹಾಗೆಯೇ ಬಿಡುವರೇ?"

"ಹಾಗೆಯೇ ಬಿಡದಿದ್ದರೆ, ನಿನ್ನ ರುಂಡವನ್ನು ಚೆಂಡಾಡಲಿ! ನೀನು ಈ ಕೂಸುಗಳನ್ನು ಅವರ ಮನೆಗೆ ಮುಟ್ಟಿಸಿ ಬರಲೇ ಬೇಕು."

ಖಾತುನಳ ಮಾತಿನಲ್ಲಿ ಬಿಗುವಿತ್ತು; ಆಣತಿಗೆ ಒಪ್ಪತಕ್ಕ ಧ್ವನಿಯೂ ಅದಕ್ಕೆ ಬೆರೆತಿತ್ತು.

ರಹೀಮನು ಕಂಭದಂತೆ ನಿಂತುಬಿಟ್ಟಿದ್ದನು. ಅವನಿಗೆ ಏನೂ ಹೊಳೆಯುಲಿಲ್ಲ. ನೆತ್ತಿಗೇರಿದ ಕೋಪವಿನ್ನೂ ಇಳಿದಿರಲಿಲ್ಲ. ತಾಯಿಯು ತಬ್ಬಿಹಿಡಿದ ಎರಡೂ ಹುಡುಗರನ್ನು ದುರದುರನೇ ನೋಡಿದನು; ಕಣ್ಣುಗಳಿಂದ ಕಿಡಿಗಳು ಹಾರುತ್ತಿದ್ದವು. ಅವನ ದಿಟ್ಟಿಗೆ ಅಂಜಿ ಚೀರಿತೋ ಎಂಬಂತೆ, ಹೆಣ್ಣು ಮಗುವು ಎಚ್ಚತ್ತು ಚೀರಿತು; ಆಗಲೇ ಅವಕ್ಕೆ ಎಚ್ಚರ ಬಂದದ್ದು.

"ಅಯ್ಯಯ್ಯವ್ವಾ! ತಲೆ ನೋಯಿತದs ..... ಕಣ್ಣು ಉರಿತವs ..... ಅವ್ವಾ! ಅವ್ವಾ!! ಅವ್ವಾ!!! ....."

ಗಂಡು ಹುಡುಗನಿಗೂ ಎಚ್ಚರವಾಯ್ತು! ಆದರೆ ಅವನ ಬಾಯಿಂದ ಮಾತುಗಳು ಹೊರಡಲಿಲ್ಲ; ಕತ್ತರೆ ಬಲೆಯಲ್ಲಿ ಸಿಕ್ಕ ಇಲಿಯಿಂತೆ ಒದ್ದಾಡುತ್ತಲಿದ್ದನವನು!

ಖಾತುನಳ ಹೃದಯವೇ ಹಿಂಡಿಹೋಯಿತು! ಮಮತೆಯಿಂದ ರಹೀಮನಿಗೆ ಆಜ್ಞೆವಿಧಿಸಿದಳು.

"ರಹೀಮ, ಹೂಂ, ಏಕೆ ನಿಂತೆ ವಶುವಿನಂತೆ? ..... ಕೊಲೆಗಡುಕಾ, ನಿನಗೆ ಖುದಾ ಸರಿಯಾದ ಪ್ರಾಯಶ್ಚಿತ್ತವನ್ನು ಮಾಡದೆ ಬಿಡುವದಿಲ್ಲ ..... ಹಸುಳೆಗಳಿಗೆ ಹಿಂಸೆ ಕೊಟ್ಟೆ ..... ಸಹೋದರನಂತಿದ್ದ ಸದುವನ್ನು ಕೊಲ್ಲಿಸಿದೆ ..... ಇನ್ನೂ ..... ನಿನಗಾಗಿ ರವರವ ನರಕ ಸಿದ್ಧವಾಗಿದೆ ..... ಪುನಃ ಅವರ ಮನೆಗೆ ಈ ಕೂಸುಗಳನ್ನು ಮುಟ್ಟಿಸಿ ಒಂದಿನಿತು ಪುಣ್ಯಕಟ್ಟಿಕೊ! ಮಾತೆಯರ ಆಶೀರ್ವಾದಗಳಿಂದ ಕೃತಕೃತ್ಯನಾಗು ..... ಅಹಮ್ಮದನು ಸತ್ತನು ..... ತಾಯಿಯ ಹೃದಯ ಕಂಪಿಸಿತು; ಬಾಳಿನಲ್ಲಿ ಬೇಸರ ಹುಟ್ಟಿತು; ಹಿಂದುಗಳಾದರೇನು? ಅವರೂ ಮನುಷ್ಯರಲ್ಲವೇ? ಅವರದೂ ನನ್ನಂತೆಯೇ ಸ್ಥಿತಿಯಾಗಿರಲೇ ಬೇಕು ..... ನನ್ನ ಸರ್ವಸ್ವವು ನಾಶವಾಗಿದೆಯೆಂದು ಇನ್ನೊಬ್ಬರದನ್ನೂ ನಾಶಮಾಡಿದರೆ ನನಗೇನು ಬರುತ್ತದೆ? ..... ರಹೀಮ, ಮಾತೃಹೃದಯದ ಸಂಕಟ ಗಂಡುಸಾದ ನಿನಗೆ ತಿಳಿಯದು .... ತಡಮಾಡಬೇಡ ..... ಹೂಂ; ಹುಡುಗರನ್ನು ಎತ್ತಿಕೊ ....."

ರಹೀಮನೇನೂ ಅಲುಗಾಡಲಿಲ್ಲ. ಖಾತುನಳು ಎದ್ದಳು. ಅಂಥ ವಯಸ್ಸಿನಲ್ಲಿಯೇ ಇಲ್ಲದ ಶಕ್ತಿಯನ್ನು ತಂದುಕೊಂಡು, ಹೆಗಲಮೇಲೆ ಹುಡುಗನನ್ನು ಕೂಡಿಸಿಕೊಂಡು, ಕೊಂಕುಳದಲ್ಲಿ ಹುಡಿಗೆಯನ್ನು ಅವಚಿಕೊಂಡು, ಮೆಲ್ಲಡಿಯಿಡುತ್ತ ಮನೆಯಿಂದ ಹೊರಟಳು.

ಆಗಲೇ ನಡುರಾತ್ರಿಯಾಗಿತ್ತು; ಬೀದಿಯಲ್ಲಿ ನಾಯಿಗಳು ಗಟ್ಟಿಯಾಗಿ ಬೊಗಳುತ್ತಿದ್ದವು; ಬೀದಿ ನಿರ್ಜನವಾಗಿತ್ತು; ದೂರದಿಂದ ಭೀಕರ ಸದ್ದು, ತೇಲಿ ಬಂದು ಕಿವಿಪಟಲಗಳೊಡೆಯುವಂತೆ, ಕೇಳಿಸುತ್ತಿತ್ತು. ಎಲ್ಲಿಯೋ ಒಂದು ಕಡೆಗೆ ಬೆಂಕಿ ಹತ್ತಿರಬೇಕು; ಲೂಟಿ ನಡೆದಿರಲಿಕ್ಕೆ ಸಾಕು! ಅಗ್ನಿ ಜ್ವಾಲೆಗಳು ದೂರದಲ್ಲಿ ಕಾಣಿಸುತ್ತಿದ್ದವು; ಅಗ್ನಿಯ ಬೆಳಕಿನಲ್ಲಿ ಗಗನಕ್ಕೆ ಅಡರುವ ಹೊಗೆ ಅಕರಾಳ ವಿಕರಾಳವಾಗಿ ಕಾಣಿಸುತ್ತಿತ್ತು!

ಖಾತುನಬೀಬಿ ಆಯಾಸದಿಂದ ಒಂದೊಂದೇ ಹೆಜ್ಜೆಯಿಕ್ಕುತ್ತ ಇಬ್ಬರನ್ನೂ ಹೊತ್ತುಕೊಂಡು ದೊಡ್ಡಪೇಟೆಯ ಕಡೆಗೆ ನಡೆದಳು. ಒಂದಿನಿತು ದೂರ ಹೋಗುವ ತನಕ ರಹೀಮನು ಆಕೆಯನ್ನೇ ನೋಡುತ್ತ ನಿಂತಿದ್ದನು.

ಒಮ್ಮೆಲೇ ಕೂಗಿದನು!

"ಮಾ! ಮುಂದೆ ಹೋಗಬೇಡ; . . . . ನಿನ್ನನ್ನೂ ಅವರು ಕೊಲ್ಲುತ್ತಾರೆ . . . . ಅಲ್ಲಿ ಈಗಾಗಲೇ ಜನರು ತಂಡ ತಂಡವಾಗಿ ನೆರೆದಿದ್ದಾರೆ . . . . ಮಾ! . . . . ಮಾ!"

ಆಕೆ ಬೇರೆ ಅವನ ಮಾತಿನ ಕಡೆಗೆ ಲಕ್ಷ್ಯಕೊಡಲಿಲ್ಲ; ಹಾಗೆಯೇ ನಡೆದಿದ್ದಳು.

"ಮಾ! ನಿಲ್ಲು . . . . ನಾನೇ ಹೋಗುತ್ತೇನೆ . . . . ಅವರ ಮನೆಗೆ ಮುಟ್ಟಿಸಿಬರುತ್ತೇನೆ . . . . ನೀನು ತಿರುಗಿ ಬಾ . . . ."

ರಹೀಮನು ಅವಳು ಹೋದ ದಿಕ್ಕಿನಲ್ಲಿ ಓಡಿದನು. ಖಾತುನ ಬೇರೆ ನಿಲ್ಲಲಿಲ್ಲ; ಹಾಗೆಯೇ ಮುಂದೆ ಸಾಗಿದ್ದಳು!

# ಗತಕಾಲದ ಗುರುತು

(ಶ್ರೀ ಎಚ್. ಎಸ್ ಪಾಟೀಲ, ಎಮ್. ಎ. ಬಿ. ಕಾಮ್., ಬೊಂಬಾಯಿ )

ತಲೆ ಚಿಟ್ಟೆಂದು ಹೋಗಿತ್ತು ಹೇಮಂತನಿಗೆ.

ತಿಳಿಯದ ನರಕದಲ್ಲಿ ಕೂಡ ವಾಸವಾಗಿರಲು ನನ್ನ ಮನಸ್ಸು ಒಪ್ಪಬಹುದು—ಈ ಕ್ಷಣದಲ್ಲಿ! ಆದರೆ ಈ ಹಾಳು ಮುಂಬಯಿಯಲ್ಲಿ ಇರಲಾಸಲ್ಲ! ಕೆಲಸ ಸಿಗುತ್ತವೆಂದು ಜೀವದ ಹಂಗುದೊರೆದವರಂತೆ ಇಲ್ಲಿಗೆ ಓಡಿ ಬಂದಾಯಿತು. ಕೆಲಸ ದೊರೆತ ಕೂಡಲೆ ಕೂಳಿನ ಕೊರತೆಯೆನಿಸ ಹತ್ತಿತು. ಆ ಸಮಸ್ಯೆಯನ್ನು ಬಗೆಹರಿಸಬೇಕೆಂದು—ಮನದೊಲವುಗಳನ್ನೆಲ್ಲ ಬದಿಗೆ ಸರಿಸಿ—ಒಂದು ಮದುವೆಯನ್ನು ಮಾಡಿಕೊಂಡರೆ, ಇದ್ದ ಸಮಸ್ಯೆಯು ಇಲ್ಲದಂತಾಗುವ ಬದಲು ಇಲ್ಲದ ಪ್ರಮೇಯಗಳು ಇದಿರು ಬಂದು ನಿಂತುವು. ಈ ಎಂಟು ತಿಂಗಳ ನನ್ನ ಜೀವನವೆಂದರೆ ಅದೊಂದು ಚಿತ್ರಪಟಕಥೆಯಂತಾಗಿದೆ.

ಗಾಡಿಯು ಪುಣೆಯ ನಿಲ್ದಾಣವನ್ನು ದಾಟಿ ಮೆಲ್ಲನೆಯೆ ಸಾಗಿತ್ತು—ಸೊಲ್ಲಾಪುರದ ಕಡೆಗೆ ಎಷ್ಟು ಜನ ಯುವತಿಯರನ್ನು ಅವರ ಪ್ರಿಯತಮರಿಂದ ಬೇರೆ ಮಾಡಿ—ಕರೆದೊಯ್ಯುತ್ತಿತ್ತೊ ಆ ಬಂಡಿ. ಜಡಹೃದಯದ ಜವ್ವನೆಯನ್ನು ಕರೆದೊಯ್ಯುವ ಸೇವಕನಂತೆ ಕೆಳಗೆ ಮುಖವನ್ನು ಹಾಕಿಕೊಂಡು ಮಂದ ಗತಿಯಾಗಿ ಸಾಗಿತ್ತು ಆ ಉಗಿಬಂಡಿ! ಇತ್ತ ಹೇಮಂತನ ವಿಚಾರ ಚಕ್ರವು ಮಾತ್ರ ಆ ಗಾಡಿಯ ವಿರುದ್ಧ ದಿಸೆಯನ್ನು ಹಿಡಿದಿತ್ತು.

ಮತ್ತೆ ಬರಬಹುದೇ ಆ ಸವಿಬಾಳಿನ ದಿನಗಳು ಎಂದು ತನ್ನನ್ನೆ ತಾನು ಕೇಳಿಕೊಂಡ. ಮೀನಾಕ್ಷಿಯ ಜೊತೆಯಲ್ಲಿ ನಾಲ್ಕು ತಿಂಗಳ ಕಾಲ ಕಳೆದುದು —ನಾಲ್ಕು ಕ್ಷಣಗಳಂತೆ ಹೋಗಿತ್ತಲ್ಲ! ಆಗಿನ ನನ್ನ ಜೀವನವು ಎಷ್ಟು ಸುಖ ಮಯವಾಗಿತ್ತು! ಆದರೆ ಅದೊಂದು ಕನಸು! ಬೇಡಿ ಬಯಸಿ ಕಂಡ ಕನಸು! ಒಡೆಯುವದೆಂಬುದು ನಿಶ್ಚಿತವಾಗಿದ್ದರೂ ತನ್ನದನ್ನಾಗಿಸಿಕೊಂಡ ಕಾಜಿನ ಪಾತ್ರೆ ಯಾಗಿದ್ದಿತು—ಆಗಿನ ನನ್ನ ಸಂಸಾರ!

ಗೆಳೆಯರಾದರೂ ಏನು ಮಾಡಿಯಾರು? ಗೆಳೆತನದ ನಿಮಿತ್ತವಾಗಿ ಸಾಧ್ಯವಾದುದಕ್ಕಿಂತ ಹೆಚ್ಚಾಗಿಯೆ ಸಹಾಯಮಾಡಿದರು. ಬಾಣಂತನಕ್ಕೆಂದು

ಹೋದ ಮಡದಿಯನ್ನು, ನನ್ನ ಸಲುವಾಗಿ ನಾನು ನಾಲ್ಕು ದಿನ ಹೆಂಡತಿಯೊಡನೆ ಇರಲಿ ಎಂಬ ಉದ್ದೇಶದಿಂದ ತಡವಾಗಿ ಕರೆಯಿಸಿಕೊಂಡ—ಮಾಧವ. ಆದರೆ ಆತನದಾದರೂ ಏನು ತಪ್ಪು? ನನ್ನ ಸಂಸಾರದ ಚಿಂತೆಯನ್ನು ಆತ ಮಾಡಿದ್ದರೆ, ಆತನು ವಿರಹಿಯಾಗಿ ಇರಬೇಕಾಗಿತ್ತು! ಈಗ ಮುಂಬಯಿಯಲ್ಲಿ ಕಾಲ ಕಳೆಯುವುದು ಕಠಿಣವಾಗಿ ನಾನು ಇಷ್ಟೊಂದು ವೇಗವಾಗಿ ಊರ ಕಡೆಗೆ—ಊರ ಕಡೆಗೇನು ಹೆಂಡತಿಯ ಕಡೆಗೆ ಹೊರಟಿಲ್ಲವೆ? ಆತನಿನ್ನೂ ಪಾಪ! ಮಡದಿಯನ್ನಂತೂ ಆರೇಳು ತಿಂಗಳು ಕಂಡಿಲ್ಲ; ಅದೊತ್ತಟ್ಟಿಗಿರಲಿ! ಹೊಸತಾಗಿ ಹುಟ್ಟಿದ ಗಂಡು ಮಗುವಿನ ಮೊಗವನ್ನು ಕೂಡ ಕಂಡಿಲ್ಲ. ಅಂತಹದು ಒಂದೆರಡು ತಿಂಗಳು ತಡಮಾಡಿಯಾದರೂ ತನ್ನ ಮಡದಿ—ಮಕ್ಕಳನ್ನು ತನ್ನದಾದ ಮನೆಗೆ ಕರೆಯಿಸಿಕೊಂಡರೆ ತಪ್ಪೆ? ಕುಳಿತಲ್ಲಿಯೇ ಬೇಸರೆನಿಸಿತು ಅವನಿಗೆ ಅವನ ಪ್ರವಾಸ. ಗಾಡಿಯಲ್ಲಿ ದೀಪಗಳು ಹತ್ತಿದವು. ಇನ್ನು ಏಳು ಗಂಟೆಯಾಗಿರಲಿಲ್ಲ ಜನರು ಅಷ್ಟರಲ್ಲಿಯೆ ಹಾಸುಗೆಯ ವ್ಯವಸ್ಥೆಯನ್ನು ಮಾಡಹತ್ತಿದ್ದರು. ಹೇಮಂತನಿಗೆ ಸೋಜಿಗವೆನಿಸಿತು. ಹತ್ತಾರು ಗಂಟೆಗಳು ಹೆಚ್ಚೆಂದರೆ—ಈ ಮದರಾಸ್ ಎಕ್ಸ್‌ಪ್ರೆಸ್ ಗಾಡಿಯಲ್ಲಿ ಒಂದು—ಒಂದೂವರೆ ದಿವಸಗಳ ಪ್ರವಾಸ. ಅದರಲ್ಲಿಯೆ, ಊಟದ ಪೂರ್ವಸಿದ್ಧತೆ, ಮಲಗುವ ಸಂಪೂರ್ಣ ತಯ್ಯಾರಿ, ಇವುಗಳಿಗಾಗಿ ಇಷ್ಟೊಂದು ನಿರತರಾಗುವ, ನಿರ್ವಿಣ್ಣರಾಗುವ ಮಾನವ ಶೂಲವನ್ನು ಕಂಡು ಆತ ತವಕಗೊಂಡ. ಇವರೆಲ್ಲರನ್ನು ಮುಂಬಯಿಯಲ್ಲಿಡಬೇಕು—ವರ್ಷಾರು ತಿಂಗಳು ಎಂದುಕೊಂಡು ನಕ್ಕನಾತ.

ನಮಗೆ - ಏನು ಮಾಡಿದರೂ ಈಗ ಎರಡು ವರುಷಗಳಾದುವು—ಇರಲಿಕ್ಕೆ ಒಂದು ಮನೆಯು ಸಿಗಲೊಲ್ಲದು. ಇದ್ದ ಹೆಂಡತಿಯೊಡನೆ ಬಾಳುವೆ ಮಾಡಿಕೊಂಡಿರಬೇಕೆಂದರೆ ಬಂದಿದೆ ಬವಣೆ! ಈ ಜನರು ಕ್ಷಣದ ಪ್ರವಾಸದಲ್ಲಿಯೂ ಕಾಲುಚಾಚಿ ಒರಗುವ ವಿಭೂತಿಗಳು! ಏನು ನನ್ನದೇ ತಪ್ಪಾಯಿತೊ? ಎಂಬುದೊಂದು ಮರುಸವಾಲು ಆತನನ್ನು ಕೆಣಕಿತು. ಆ ಕ್ಷಣದಲ್ಲಿ ಆತ ತಿರುಗಿ ಕುಳಿತ.

ಹೊರಗೆ ಕರಿಯ ಹೊಲದ ಮೇಲೆ ಬೆಳೆಗಳು ಬಳಕುತ್ತಿರುವದನ್ನು ಕಂಡ. ಆ ದಿನ ನಾನೂ—ಮಂಗಳೆಯೂ ಇಂತಹದೇ ಆದ ಒಂದು ಹೆಚ್ಚ—ಹಸುರಿನಿಂದ ತುಂಬಿದ ಹೊಲದಲ್ಲಿ ಮಾತನಾಡುತ್ತ ಕುಳಿತಿದ್ದೆವು. ಅಂದಿನ ಆ ಸೊಬಗು ಇನ್ನೆಂದಿಗೂ ಬರಲಾರದು. ಊಟಕ್ಕಾಗಿ ಮನೆಯ ಎಲ್ಲ ಜನರೊಡನೆ ಹೊಲಕ್ಕೆ ಹೋಗಿದ್ದರೆ, ಮೆಲ್ಲನೆ ನನ್ನೊಬ್ಬನನ್ನೆ ಅದೆಂತಹ

ಕೌಶಲ್ಯದಿಂದ ಮಂಗಲೆಯು ಬೇರೊಂದು ಕಡೆಗೆ ಕರೆದೊಯ್ದುಳಲ್ಲ. ಅಂದು ಆಕೆಯು ಮನವನ್ನು ತಿಳಿದುಕೊಳ್ಳದೆ ಇಂದು ಈ ರೀತಿಯಾಗಿ ನಾನು ಹಲುಬುತ್ತಿರುವದು.

"ಮುಂಬಯಿಯು ಬಲು ಚೆಂದವಾದ ಊರಂತೆ"

"ಹೌದು; ಜನರು ಹೇಳುತ್ತಾರೆ"

"ಅದೇಕೆ; ಮತ್ತೆ ನೀವು ಮೊನ್ನೆ ಹೋಗಿದ್ದಿರಂತಲ್ಲ"

"ಹೋಗಿದ್ದೆ; ಆದರೆ ಮುಂಬಯಿಯನ್ನು ನೋಡಲಿಕ್ಕಲ್ಲ"

"ಆಂದರೆ; ಬೇರೆ ಇನ್ನಾರನ್ನಾ . . . . "

"ಹಃ ಹೌದು. ಬೇರೆ ಇನ್ನಾರನ್ನಾದರೂ ನೋಡಲಿಕ್ಕೇ ಹೋದದ್ದು. ಆದರೆ ಹೆಂಗುಸರನ್ನಲ್ಲ, ಗಂಡುಸರನ್ನು."

"ನನಗೆಲ್ಲ ತಿಳಿದಿದೆ. ನೀವು ಇಷ್ಟರಲ್ಲಿ ಅಲ್ಲಿಯೆ ಇರಲಿಕ್ಕೆ ಹೋಗುವವರಂತೆ" ನನಗೆ ಆಗ ಏನು ಹೇಳಬೇಕು, ಏನು ಹೇಳಬಾರದು ತಿಳಿಯಲಿಲ್ಲವಲ್ಲ! ಅಂದು ನಾನು ನನ್ನ ನಿರ್ಣಯವನ್ನು ಬದಲಿಸಿದ್ದರೆ ಇಂದು ಇದೇ ಮುಂಬಯಿಯಲ್ಲಿ ಸುಖವಾಗಿ ಇರುತ್ತಿದ್ದಿನೊ ಏನೊ!

ಆತ ಗಟ್ಟಿಯಾಗಿ ಕಣ್ಣುಗಳನ್ನು ಮುಚ್ಚಿದ; ಹೊರಗಿನ ಗಾಳಿಗಾಗಿ ಅಧೀರನಾಗಿ ಮೋರೆಯನ್ನು ಹೊರಗೆ ಚಾಚಿದ. ಅಂದಿನ ಆ ಸಂಧ್ಯಾಸಮಯದ ಬಯಲು ಗಾಳಿಯು ತಣಿಪು ಅವನ ಕಾದಕದಪುಗಳನ್ನು ನೇವರಿಸಿದುವು. ತಟ್ಟನೆ ಅವನಿಗೆ ಅಂದಿನ ಹೊಲದಲ್ಲಿಯೆ ಹೋಗಿ ನಿಂತಂತೆ ಭಾಸವಾಯಿತು. ತಂಗಾಳಿಯು ಸೂಸುಸೂಸಾಗಿ ಹರಿದು ಬರುತಿತ್ತು. ಬಳಿಯಲ್ಲಿಂದಲೆ ಒಡನೆ ಬಂದ ಮಿಕ್ಕ ಜನರ ಮಾತು—ಚೀರಾಟಗಳ– ಕಲ—ಕಲವು ಆ ಗಾಳಿಯಲ್ಲಿಯೆ ತೇಲಿಬರುತ್ತಿತ್ತು. ಬಿಗಿಯಾಗಿ ತಲೆಯ ಮೇಲಿಂದ ಎಳೆದುಕೊಂಡ ತನ್ನ ಸೀರೆಯ ಸೆರಗನ್ನು ಮಂಗಲೆಯು ಅಂದು ತನ್ನ ಬಲದ ಕೈಯಿಂದ ಬಲವಾಗಿ ಹಿಡಿದುಕೊಂಡಿದ್ದಳಲ್ಲವೆ? ಇತ್ತ ಎಡಗೈಯ ಬೆರಳುಗಳು ನನ್ನ ಬೆಗಳುಗಳೊಳಗೆ ಬೆರೆತು ಆಟವಾಡುತ್ತಿದ್ದವು.

"ನಾನು ಮುಂಬಾಯಿಗೆ ಹೋಗಬಾರದೆಂದು ಮಾಡಿದ್ದೇನೆ ಮಂಗಲಾ." ಅದೊಂದೆ ವಾಕ್ಯವನ್ನು ಕೇಳಿದೊಡನೆ ಆಕೆಯ ಮೈಯಲ್ಲೆಲ್ಲ ಒಂದು ನಡುಕು ಸಂಚರಿಸಿದಂತಾಯಿತು. ಸರ್ರನೆ ತನ್ನ ಕೈಯನ್ನು ಬಿಡಿಸಿಕೊಂಡು ಆಕೆಯು

ಅಂದು ನನ್ನನ್ನೆ ದಿಟ್ಟಿಸಿ ನೋಡಿದಳು: ಆಕೆಯ ಆ ನೋಟವೆ ನನ್ನನ್ನು ಸಮವಾದ ದಾರಿಗೆ ಸರಿಸಬೇಕಾಗಿತ್ತು.

"ಅದೇಕೆ?"

"ಮುಂಬಾಯಿಯಲ್ಲಿನ ಜೀವನವೆಂದರೆ ಅದೊಂದು ವಂಚನೆ" ಅಂದು ನಾನು ಆಡಿದ ಮಾತು ಆಕೆಗೆ ತಿಳಿಯಿತೊ ಇಲ್ಲವೊ ಹೇಳಲಾಗದು. ಆದರೆ ನನ್ನ ಈ ನಾಲ್ಕು ವರುಷದ ಜೀವನವನ್ನು ನಿರೀಕ್ಷಿಸಿ ನೋಡಿದರೆ, ಆ ಮಾತಿನ ಅರ್ಥವು ನನಗಾದರೂ ತಿಳಿಯಿತೊ ಹೇಗೆ ಎಂಬುದನ್ನು ವಿಚಾರ ಮಾಡ ದಂತಾಗಿದೆ. ಅದು—ಹೆರವರು, ನಮ್ಮ ಸಮ್ಮತಿಯಿಲ್ಲದೆ ಹೂಡಿದ ಯುದ್ಧ, ಅದರಲ್ಲಿ ನಮ್ಮ ಮುಂದಾಳುಗಳೆಲ್ಲ ಯುದ್ಧದ ಉದ್ದೇಶವನ್ನು ಸ್ಪಷ್ಟಗೊಳಿಸಿರಿ, ತಾವು ಸಹಕರಿಸುವ ವಿಚಾರವನ್ನು ಮಾಡುವೆವು ಎಂದು ಹೇಳುತ್ತಿದ್ದರೂ ಕೂಡ, ಅದನ್ನು ಲೆಕ್ಕಿಸದೆ, ಆಳರಸರು ನಮ್ಮ ಜನರಿಂದಲೆ ನಮ್ಮ ಮುಂದಾಳು ಗಳನ್ನು ಬಂಧಿಸಿ, ಮಿಕ್ಕವರನ್ನು ಯುದ್ಧ ಕಾರ್ಯದಲ್ಲಿ ನೆರವಾಗುವಂತೆ ಮಣಿಸಹತ್ತಿದ್ದಾರೆ. ಇಂತಹ ಸಮಯದಲ್ಲಿ ನಾನು—ಕಲಿತು ನಮ್ಮ ದೇಶದ ಆದರ್ಶವನ್ನು, ನಮ್ಮ ಜನರ ಕರ್ತವ್ಯವನ್ನು, ನಮ್ಮ ಸ್ಥಿತಿಯ ಗೋಳನ್ನು—ಅರಿತ ನಾನು—ಒಂದು ಸರಕಾರದ ಕೆಲಸವನ್ನು ಹಿಡಿದುಕೊಂಡು ಮುಂಬಾ ಯಿಯಲ್ಲಿ ವಾಸವಾಗಿರಬಹುದೆ? ಬವಣೆಗೆಟ್ಟ ಬಡಬಗ್ಗರ ಬಾಳನ್ನು ಲಕ್ಷಿಸದೆ ನಾನು ಸುಖ-ಸಂತೋಷಗಳಲ್ಲಿ ಸಮಯವನ್ನು ಕಳೆಯ ಬಹುದೆ ಎಂಬ ವಿಚಾರವನ್ನು ಅಂದು ಮಾಡಿದೆ. ನಾನು ಆಗ್ಗೆ ಕೈಕೊಂಡ ನಿರ್ಣಯವು ಎಷ್ಟು ಸಮಂಜಸವಾದುದೆನಿಸಬಹುದು. ಆದರೆ ಈಗ ನನ್ನ ಗತಿಯೇನು? ಅಂದು ಆ ರೀತಿಯಾಗಿ ನಾನು ನಡೆಯದೆ, ಮುಂಬಯಿಯಲ್ಲಿ ಬಂದು ನೆಲಸಿ ದ್ದರೆ, ಒಬ್ಬನಾದರೂ—ನಾನೊಬ್ಬನಾದರೂ ನಿಶ್ಚಿತನಾಗಿರುತ್ತಿದ್ದೆ.

ಆದರೆ ಈಗ ಅದಕ್ಕಿಂತ ಹೆಚ್ಚಿನ ಅಪರಾಧವನ್ನು ನಾನು ಮಾಡುತ್ತಿರು ವುದಿಲ್ಲವೆ? ಗಾಡಿಯು ಒಮ್ಮೆಲೆ ನಿಂತಿತು. ಪೋಮಲವಾಡೀ ಎಂಬ ಕೂಗು ಕೇಳಿಸಿತು—ಹೇಮಂತನಿಗೆ. ಮೈಯೆಲ್ಲ ಭಾರವೆನಿಸುತ್ತಿದ್ದ ಅವನು ಒಳಗೆ ನೋಡಿದ. ತನ್ನ ಬಳಿಯಲ್ಲಿದ್ದ ಒಬ್ಬ ಪ್ರಯಾಣಿಕ ಅವಸರವಸರವಾಗಿ ತನ್ನ ಗಂಟು ಗದಡಿಗಳನ್ನು ಸರಿಪಡಿಸಿಕೊಂಡು ಎದ್ದ. 'ಹೋಗುವಿರೇನು' ಎಂದು ಹೇಮಂತ ಒಂದು ಬಿಸಿಯ ಉಸಿರಿನಲ್ಲಿ ಕೇಳಿದ. ಮೆಲ್ಲನೆ ಕಾಲನ್ನಾ ದರೂ ಚಾಚಬಹುದು ಎಂದು. ಆದರೆ ಆತ 'ಇಲ್ಲ' ಎಂಬುದನ್ನು ಹೇಳುವದ ಕ್ಕಿಂತ ಮೊದಲಾಗಿಯೆ ಎದುರಿನ ಬೆಂಚಿನ ಮೇಲೆ ಕುಳಿತ ಜಡದೇಹಿಯೊಬ್ಬನು

ಮೆಲ್ಲನೆ ಬಂದು ಕುಳಿತ ಆ ಸ್ಥಳದಲ್ಲಿ. ಹೇಮಂತನಿಗೆ ವಿಚಿತ್ರ ಎನಿಸಿದಷ್ಟು ಸಿಟ್ಟು ಬಂದಿತು. ಇದ್ದ ತನ್ನ ಜಾಗವನ್ನು ಬಿಟ್ಟು ಇಲ್ಲಿ ಬಂದು ಕುಳಿತು ಕೊಳ್ಳುವದೇಕೆ—ಈ ಮನುಷ್ಯ ಎಂಬುದರ ರಹಸ್ಯವು ಆತನಿಗೆ ತಿಳಿಯದೆ ಹೋಯಿತು. ಈ ಬದಿಯಲ್ಲಿರುವ ಕಿಡಿಕಿಗಾಗಿರಬಹುದೆ? ಛೆ; ಎಂತಹ ಕ್ಷುದ್ರವಾದ ಸಮಾಧಾನ; ವಿಚಾರ ಮಾಡುತ್ತಿರುವಷ್ಟರಲ್ಲಿಯೆ, ಆ ಗ್ರಹಸ್ಥನು ಅತ್ತಿತ್ತ ಅಲುಗಾಡುತ್ತಿರುವದನ್ನು ಅರಿತನು.

"ಯಾವೂರಿಗೆ ಹೋಗಬೇಕು?" ಎಂದು ಕೋಪದಲ್ಲಿಯೆ ಕೇಳಿದ ಹೇಮಂತ ಆ ಪ್ರಾಣಿಗೆ ಮಾತು ತಿಳಿಯಲಿಲ್ಲವೆನೋ ಎಂದು ಹಿಂದುಸ್ಥಾನಿ ಯಲ್ಲಿ ಮತ್ತೊಮ್ಮೆ ಪ್ರಶ್ನೆಯನ್ನು ಕೇಳಿದ. ಆ ಸಲದ ಮೃದುವಾದ ಧ್ವನಿ ಯನ್ನು ಗುರುತಿಸಿ

"ಮದರಾಸಿಗೆ ಹೊರಟಿದ್ದೇನೆ" ಎಂದು ಹೇಳಿದ ಆ ಗ್ರಹಸ್ಥ. ಅಷ್ಟಕ್ಕೆ ಬಿಡದೆ, ಅತ್ತಿತ್ತ ಸರಿದಾಡುತ್ತ ಸಲಿಗೆಯ ಸ್ವರದಲ್ಲಿ ಮತ್ತೆ ಮಾತನಾಡಿದ.

"ನೀವು ಎಲ್ಲಿಗೆ ಹೋಗಬೇಕು?" ಈ ಪ್ರಶ್ನೆಯನ್ನು ಹೇಮಂತ ನಿರೀಕ್ಷಿ ಸಿದ್ದ. ಮೊದಲಿನ ಸಿಟ್ಟಿನ ಮಾತಿಗೆ ಪ್ರತಿಯಾಗಿ ಈ ವಾಕ್ಯವು ಬಂದಿದ್ದರೆ "ಸುಡುಗಾಡಿಗೆ" ಎಂದು ಹೇಳಬೇಕೆಂಬ ಸ್ಥಿತಿಯಾಗಿದ್ದಿತು ಅವನ ಮನಸ್ಸಿ ನದು. ಆದರೆ ಬದಲಾದ ಆ ಪರಿಸ್ಥಿತಿಯಲ್ಲಿ ಆತನು ತನ್ನ ಮಾತಿನ ಓಘವನ್ನೆ ತಿರುವಿದ.

"ಇಲ್ಲಿಯೆ ಸೊಲ್ಲಾಪುರಕ್ಕೆ"

"ಎಷ್ಟು ಗಂಟೆಗೆ ತಲಪುತ್ತದೆ ಈ ಗಾಡಿ ಅಲ್ಲಿಗೆ?"

"ರಾತ್ರಿಯ ಹನ್ನೊಂದು ಗಂಟೆಗೆ"

"ಇಷ್ಟೆಯೊ?" ಎನ್ನುತ್ತ ಆನಂದಾತಿಶಯದಲ್ಲಿ ಆತನು ಇನ್ನಷ್ಟು ಅಗಲಾಗಿ ಕುಳಿತುಕೊಂಡು,

"ಹಾಗಾದರೆ ಒಳಿತಾಯಿತು ನಾನಿಲ್ಲಿ ಬಂದುದು" ಎಂದು ನಕ್ಕ. ಆದರೆ ಹೇಮಂತನಿಗೆ ಮಾತ್ರ ಹೇಸಿಕೆಯೆನಿಸಿತು ಅವನ ಸಹವಾಸ. ಇಷ್ಟೊಂದು ಗದ್ದಲ ಗಾಡಿಯಲ್ಲಿ! ಜನರಿಗೆ ಕಾಲಿಡಲು ಕೂಡ ಸ್ಥಳವಿಲ್ಲ. ಎಷ್ಟೊ ಜನರು ಕಾಲುಮಣೆಯ ಮೇಲೆ ನಿಂತು ಅತ್ಯಂತವಾದ ಗಂಡಾಂತರದಿಂದ ಪ್ರವಾಸ ಮಾಡುತ್ತಾರೆ. ಇವರು ಒಳಗೆ ಬರುವವರನ್ನು ಹೊರಗೆ ನೂಕುತ್ತಾರೆ;

ಒಳಗೆ ಕಾಲುಗಳನ್ನು ಪಸರಿಸಿಕೊಂಡು ಮಲಗಲು ಹವಣಿಸುತ್ತಾರೆ. ಇವರಿಗೇನಾದರೂ ಸಾಮಾಜಿಕ ದೃಷ್ಟಿಯಿರುವದೋ; ಏನು ಕೇವಲ ಸ್ವಾರ್ಥವೊಂದೆ ನಿಜವೊ?

ಈ ಕೊನೆಯ ಶಬ್ದವು ಅವನ ಮನೋಮಂಡಲದಲ್ಲಿ ಮೂಡುತ್ತಲೆ ಅವನ ಚಿತ್ತವು ಮತ್ತೊಂದು ದಿಕ್ಕನ್ನು ಹಿಡಿಯಿತು.

ಪಾಪ! ಮೀನಾಕ್ಷಿಯ ಅವಸ್ಥೆಯೇನಾಗಿರುವುದೊ ಯಾರು ಬಲ್ಲರು! ಅವಳದು ಅಂತಹ ಶಾಂತಸ್ವಭಾವ. ಇತ್ತ ಮನೆಯಲ್ಲಿ ನೋಡಿದರೆ ಈ ಪರಿಯ ಕಾಟ. ತಂದೆತಾಯಿಗಳಿಲ್ಲದ ಅವಳನ್ನು ಆದರ್ಶದ ಬೆನ್ನಹತ್ತಿದ ನಾನು, ನನಗೆ ತಕ್ಕ ಕನ್ಯೆ, ಎಂದು ಮದುವೆಯಾದರೆ ನಮಗಿಬ್ಬರಿಗೂ ಇಂದು ಇಂತಹ ದಿನಗಳು ಬಂದಿರುವವು. ಅಂದು ಆ ಆದರ್ಶದ ಬಿಸಿಲು ಗುದುರೆಯ ಬೆನ್ನು ಬಿಟ್ಟು ನಾನು ರಾಜಮಾರ್ಗದಿಂದ ನಾಗಿದ್ದರೆ ನನ್ನ ಪ್ರಾಪಂಚಿಕ ತೊಡಕು ಗಳಾದರೂ ಅಡಗುತ್ತಿದ್ದವೊ ಏನೊ? ಇಂದು ನಾನು ಮೀನಾಕ್ಷಿಗೆ ಅದಾವ ಸುಖವನ್ನು ಕೊಟ್ಟಂತಾಯಿತು? ಇತ್ತ ನಾನಾದರೂ ನನ್ನ ಮನದೊಲವನ್ನು ಎಷ್ಟು ಸಾಧಿಸಿದಂತಾಯಿತು? ಅಂದು ಸಿಕ್ಕ ಕೆಲಸವನ್ನು, ಒಲಿದ ಹುಡುಗೆಯನ್ನು ತೊರೆದು, ಮೂರು ನಾಲ್ಕು ವರುಷ ಅತ್ತಿತ್ತ ಅಲೆದಾಡಿ ಇತ್ತ ಇಂದು ಕಳ್ಳವೇಟೆಯಲ್ಲಿ ಸೆಳೆದುತಂದು ಸಂಪತ್ತಿನಮೇಲೆ ನಮ್ಮನ್ನೆಲ್ಲ ಮೇಯಿಸುವ ಈ ಸಾಹುಕಾರನ ಸೇವಕನಾಗಿದ್ದೇನೆ. ಹೆಸರಿಗೆ ನಾನು ಸ್ವತಂತ್ರ ಕೆಲಸವೆನಿಸುವ ಈ ವ್ಯಾಪಾರದಲ್ಲಿ ಬಂದಿರುವೆ. ಆದರೆ ನನ್ನನ್ನೆ ನಾನು ಒಳಹೊಕ್ಕು ನೋಡಿಕೊಂಡಿರುವೆನೇನು? ಅಂದು ಸರಕಾರದ ಕೆಲಸವನ್ನು ಹಿಡಿದಿದ್ದರೆ, ಮನಸ್ಸನ್ನು ಬಿಗಿದೊಗೆದು ಮೈಯನ್ನಾದರೂ ಉಣಿಸಿ, ತಣಿಸಿ, ಸುಖದಿಂದಿರಬಹುದಿತ್ತು. ಇಂದು ನನ್ನನ್ನೆ ನಾನು ಮೋಸಗೊಳಿಸಿಕೊಳ್ಳುವ ಈ ಉದ್ಯಮವನ್ನು ಕೈಕೊಂಡು ಮನಸ್ಸನ್ನೂ ಮೈಯನ್ನೂ ಕೂಡಿಯೆ ದಣಿಸಹತ್ತಿದ್ದೇನೆ. ಅದೆಂತಹ ಪತನ!

ಗಾಡಿಯೊಳಗಿನ ಗದ್ದಲವು ಇನ್ನೂ ಹೆಚ್ಚಾಗಿತ್ತು. ಅತ್ತಿತ್ತ ಹೊರಳಿ ನೋಡುವದಕ್ಕೆ ಕೂಡ ಅನುವು ಇರಲಿಲ್ಲ. ಇತ್ತ ಹೇಮಂತನ ತಲೆಯಲ್ಲಿ ಭರದಿಂದ ತಿರುಗುತ್ತಿರುವ ಈ ವಿಚಾರಚಕ್ರವು ಮತ್ತಷ್ಟು ಕಾವನ್ನೆ ಉಂಟು ಮಾಡಿದಂತೆನಿಸಿತು ಅವನಿಗೆ. ಅಸಹ್ಯ ವೇದನೆಯಾಯಿತು ಅವನಿಗೆ ಆಕ್ಷಣ. ಎದ್ದು ಒಂದು ಕ್ಷಣ ನಿಂತಾದರೂ ನೋಡಬೇಕು ಎಂಬ ವಿಚಾರ ಬಂದಿತು

ಅವನಿಗೆ. ಅದೇ ನಿವಿಷ ಅವನ ಬದಿಯುವನ ನೆನಪಾಗಿ ಅವನು ಮತ್ತೊಮ್ಮೆ ಅತ್ತಿಂದ ಮೋರೆಯನ್ನಷ್ಟೆ ತಿರುವಿದ.

ಮೀನಾಕ್ಷಿಯು ತಾತ್ಪೂರ್ತಿಕವಾದ ಅವರ ನಾಲ್ಕು ತಿಂಗಳ ಸಂಸಾರವು ಕೊನೆಗಾಣುವ ದಿನ ಊರಿಗೆ ಹೊರಟ ಕಾಲದ ನೆನಪಾಯಿತು ಅವನಿಗೆ. ಅಂದು ಇಡಿಯ ದಿನ ಮೌನದಲ್ಲಿಯೆ ಹೋಗಿತ್ತು ಅವರಿಗೆ! ದಿನಂಪ್ರತಿ ನಗುತ್ತ, ನಲಿಯುತ್ತ ಕಾಲಕಳೆಯುತ್ತಿದ್ದ ಅವರು ಇನ್ನು ಮುಂದೆ ಸಹಿಸ ಬೇಕಾದ ವಿರಹದ ಪ್ರಯೋಗವೇನೊ, ಪಾರವೇನೊ ಎಂಬಂತೆ ಅಂದು ಅವರು ಮಾತುಗಳನ್ನೆ ಆಡಿರಲಿಲ್ಲ. ಕೊನೆಗೆ ಹೊರಹೊರಟ ಆ ಕ್ಷಣ ಮೀನಾಕ್ಷಿಯು ತಮ್ಮ ಮನೆ ಎಂದೆನಿಸಿಕೊಂಡ ಆ ಎರಡು ಕೋಣೆಗಳನ್ನು ಎವೆಯಿಕ್ಕದೆ ನೋಡುವದನ್ನು ಕಂಡು ಕನಿಕರವೆನಿಸಿತ್ತು ಅವನಿಗೆ. ಗಾಡಿಯಲ್ಲಿ ಕುಳಿತ ಮೇಲೆ ಮೀನಾಕ್ಷಿಯು ಹೊರಗೆ ನಿಂತ ಗಂಡನ ಕಡೆಗೆ ಒಮ್ಮೆಯಾದರೂ ನೋಡಲಿಲ್ಲ; ಒಂದು ಶಬ್ದವನ್ನು ನುಡಿಯಲಿಲ್ಲ ಗಾಡಿಯು ಹೊರಟ ಕೂಡಲೆ 'ಹೋಗಿ ಬಾ ಹಾಗಾದರೆ' ಎಂದು ಹೇಮಂತ ಹೇಳುತ್ತಲೆ ಆಕೆ ಈ ಕಡೆ ಹೊರಳಿದ್ದಳು. ಆದರೆ ಅದೆಂತಹ ಮುಖಮುದ್ರೆ! ಆ ದೀನವಾದ ನೋಟವು, ತಮ್ಮ ಅಸಹಾಯ ಸ್ಥಿತಿ, ಮುಂದೆ ಅತ್ತಿಗೆಯ ಮನೆಯಲ್ಲಿ ಮೀನಾಕ್ಷಿಯು ಸಹಿಸಬೇಕಾದ ತೊಂದರೆ, ಹೇಮಂತನಿಗೆ ಊಟದ ಮನೆ, ಒತ್ತಡ ಕೆಲಸ ಇವುಗಳಿಂದಾಗಬಹುದಾದ ಅನಾನುಕೂಲ ಇವೆಲ್ಲ ಒಂದೇ ಪಟದಲ್ಲಿ ಮಾಡಿಸಿದ ಚಿತ್ರದಂತಾಗಿತ್ತು.

ಈ ಚಿತ್ರಮಾಲಿಕೆಯು ಅವನ ಕಣ್ಮುಂದೆ ಬಂದು ನಿಲ್ಲುತ್ತಲೆ, ಅವನು ಜರ್ಜರಿತನಾದನು. ನುಚ್ಚುನೂರಾದ ಈ ನನ್ನ ಮನೋಮಂದಿರವನ್ನು ನಾನು ಮತ್ತೆ ಕಟ್ಟಿ ಕಾಣಬಹುದೆ? ಛೀ; ಹಾಳು ಈ ಬಾಳು! ಅಂದು ಮೈಯೊಲವನ್ನು ಧಿಕ್ಕರಿಸಿದೆ; ಮನದೊಲವನ್ನು ಬೆಂಬತ್ತಿದೆ. ಇಂದು ಮನಸ್ಸು ದಣಿದಿದೆ; ಮೈಯಂತೂ ಮಣ್ಣುಗೂಡುವ ಸ್ಥಿತಿಗೆ ಬಂದಿದೆ! ಧಿಕ್ಕಾರವಿರಲಿ!!

ಆತನು ಕುಳಿತಲ್ಲಿಯೆ ನಿಶ್ಚಲನಾಗಿ ಕುಳಿತುಕೊಂಡಿದ್ದ. ಅತ್ತ ಬೇಡಾದ ಮಾತಿನ ಮಹಾಶಯ! ಎದುರು ಕಣ್ಣು ತೆರೆದು ನೋಡಿದರೆ ಅಸಂಖ್ಯ ಹೆಂಗಸರು, ಹುಡುಗರು ಹಿರಿಯರು ಕಾಲಿಟ್ಟುಕೊಂಡು ನಿಲ್ಲುವದಕ್ಕೆ ಕೂಡ ಅವಕಾಶವಿಲ್ಲದೆ ಜೋಲಿಯ ಹೊಡೆಯುತ್ತ, ತೂಕಡಿಸುತ್ತ, ಆಕಳಿಸುತ್ತ ನಿಂತಿರುವ ದಾರುಣ ದೃಶ್ಯ! ಕಣ್ಣು ಮುಚ್ಚಿದರೆ ಎದೆಯನ್ನೆ ಬಿರಿಯುವ ಆ ಹಿಂದಿನ ಜೀವನದ ನೆನಹುಗಳು. ಅವನ ಕಣ್ಣಿಗೆ ಕತ್ತಲೆ ಬಂದಂತಾಯಿತು.

"ಎಷ್ಟು ದಿನಗಳಾದುವು ನಿಮ್ಮನ್ನು ಕಾಣದೆ. ಈಗ ನೆನಪಾಯಿತೇನು?"

"ಹೌದು. ಅದೂ ನಿಮ್ಮ ತಾಯಿ ಇಂದು ನಮ್ಮಲ್ಲಿಗೆ ಬಂದು ಕರೆದಗು ಎಂದು ಇಲ್ಲಿ ಬರುವದಾಯಿತು."

"ಓಹೊ ಹಾಗೆಯೊ? ನನ್ನದೇನು ಹಾಗಾದರೆ . . . . . "

"ಛೆ. ಅದೇನಿಲ್ಲ . . . . ಎಷ್ಟು ಸೊರಗಿರುವಿಯಲ್ಲ?

"ಸೊರಗುವದೇನು . . . ಅದು ವಾಡಿಕೆಯದಾಗಿದೆ"

"ಏನಾದರೂ ತೊಂದರೆಯೆ . . . . ಏನು ನನಗೆ ಹೇಳಬಹುದಲ್ಲ."

"ತೊಂದರೆಯೇನು? ಹೆಣ್ಣಿನ ಬಾಳು ಗೊತ್ತೇ ಇದೆಯಲ್ಲ"

" . . . . . . . "

"ಅದಾಯಿತು. ಇದೇನು ನಿಮ್ಮ ಸ್ಥಿತಿ? ಮೀನಾಕ್ಷಿಯು ಊಟಕ್ಕೆ ಹಾಕುವದಿಲ್ಲವೆ?"

"ಮೀನಾಕ್ಷಿ . . . . "

'ನೊಲ್ಲಾಪುರ ಬಂತು ಏಳರೀ' ಎಂದು ಬದಿಯ ಗೆಳೆಯ ಹೇಮಂತ ನನ್ನು ಎಬ್ಬಿಸಿದ. ಕಣ್ಣು ತೆರೆದು ನೋಡುತ್ತಾನೆ ಮಂಗಲೆಯು ಮಾಯವಾಗಿದ್ದಳು; ಅವನ ಡಬ್ಬಿಯ ಎದುರಿನಲ್ಲಿ ಕಣ್ಣುಗಳನ್ನರಳಿಸಿಕೊಂಡು ನಿಂತಿದ್ದಳು ಮೀನಾಕ್ಷಿ.



# ಚೂರಿಯ ಕಥೆ

(ಶ್ರೀ ಕಡೆಂಗೋಡ್ಲು ಶಂಕರ ಭಟ್ಟರು, ಮಂಗಳೂರು)

ಇತ್ತೀಚೆಗೆ ನನ್ನ ತಾಯಿಯ ಒತ್ತಾಸೆಯೋ ಒತ್ತಾಸೆ—ನಾನು ಬೊಂಬಯಿ ನಗರವನ್ನು ಬಿಟ್ಟು ಊರಿನಲ್ಲಿಯೇ ಬೇರೂರಬೇಕೆಂದು. "ಮಗು! ಬಂದು ಬಿಡು. ಆ ಬೊಂಬಯಿಯ ತಂಟೆ ಬೇಡ" ಎಂದು ತಿಂಗಳಿಗೆ ಒಮ್ಮೆಯಾದರೂ ಬರೆಯುತ್ತಲೇ ಇದ್ದಳು. ನನ್ನಮ್ಮನ ವಯಸ್ಸು ಐವತ್ತೈದಾದರೂ ಮೂವತ್ತರ ಗಟ್ಟಿಮುಟ್ಟು; ಮಗನು ಒಳಿಯಲ್ಲಿಯೇ ಇರಬೇಕೆಂಬ ಸ್ಥಿತಿ ಬಂದಿರಲಿಲ್ಲ. ತಂದೆ ಸತ್ತ ಮೊದಲುಗೊಂಡು ನಾವು ವಾಸವಾಗಿದ್ದುದು ಮಾವನ ಮನೆಯಲ್ಲಿ. ಮಾವನಿಗೆ ಅಕ್ಕನೆಂದರೆ ಪ್ರಾಣ. ಅವರ ಹೆಂಡತಿ, ನನ್ನತ್ತೆ, ಅತ್ತಿಗೆಯಲ್ಲಿ ಕೇಳದೆ ಒಲೆಗೆ ಬೆಂಕಿ ಹಚ್ಚುವಹಾಗಿಲ್ಲ; ಅಷ್ಟು ಅನ್ಯೋನ್ಯ ಅವರಲ್ಲಿ. ಮಾವ ನನ್ನ ತಾಯಿಗೆ ಸೋದರನಾಗಿದ್ದುದು ಮಾತ್ರವಲ್ಲ; ಮಗನೂ ಆಗಿದ್ದ, ಪ್ರಪಂಚದಲ್ಲಿ ಏನೆಲ್ಲ ಆಗಿರಬಹುದೋ ಅದೆಲ್ಲ ಆಗಿದ್ದ. ಹೀಗಿದ್ದರೂ ತಾಯಿಯ ತಂಬೂರಿಯಲ್ಲಿ ಒಂದೇನಾದ— ನೀನು ಬೊಂಬಯಿಯ ತಂಟೆ ಬಿಡು ಮಗು! ಎಂದು. ನಾನು ಬೊಂಬಯಿಗೆ ತಂಟೆ ಮಾಡಿರಲಿಲ್ಲ; ಬೊಂಬಯಿ ನನಗೆ ತಂಟೆ ಮಾಡಿರಲಿಲ್ಲ. ಅಲ್ಪ ವಿದ್ಯನಾದ ಒಬ್ಬ ಪೋರನಿಗೆ ತಿಂಗಳೊಂದಕ್ಕೆ ಮುನ್ನೂರು ರೂಪಾಯಿಗಳನ್ನು ಕೊಡುತ್ತಿತ್ತು. ಈ ತಂಟೆಯನ್ನು ಬೇರಾವ ಊರಾದರೂ ಕೊಡಬಲ್ಲುದೆ? ನಮ್ಮ ಊರಲ್ಲಿ ಇದರ ನಾಲ್ಕನೆಯ ಒಂದಂಶ ಸಂಪಾದನೆಯಾದೀತೆ? ನಾನಲ್ಲಿ ಒಂದು ಜನವೇ ಅಲ್ಲ. ನನ್ನ ವಿದ್ಯೆಗೆ ಅಲ್ಲಿ ಒಂದು ಕಾಸು ಬೆಲೆಯಿಲ್ಲ. ನೇಗಿಲಿಗೆ ಕೈಕೊಡುವೆನೆಂದರೆ ಯಾರ ಹೊಲವನ್ನು ಉಳಬೇಕು? ಒಂದು ವೇಳೆ ನೆಲ ಹೊಲ ಎಲ್ಲ ಸಿಕ್ಕಿತೆಂದರೂ ಲೆಕ್ಕಣಿಕೆ ಹಿಡಿದು ಮರಕಟ್ಟಿ ಹೋದ ಬೆರಳುಗಳಿಗೆ ನೇಗಿಲಿನ ಹಿಡಿತವೇ ಮರೆತು ಹೋಗಿದೆ. ಊರಿನಲ್ಲಿ ಹೊಟ್ಟೆ ತುಂಬಿಸಲಾರದ ಹಗುರ ಮನುಷ್ಯನಾಗಿದ್ದರೂ ಚಿಂತೆಯಿಲ್ಲ; ಬರಲೇಬೇಕೆಂಬುದು ತಾಯಿಯ ಕಟ್ಟಪ್ಪಣೆ!

ತಾಯಿಯ ಈ ಆಗ್ರಹಕ್ಕೆ ಕಾರಣ ಇಲ್ಲದಿಲ್ಲ. ಕೊನೆಗೆ ವಿಚಾರಿಸಿ ನೋಡಲಾಗಿ ಪ್ರಾಣದಷ್ಟು ಅಮೂಲ್ಯವಾದ ವಸ್ತು ಇನ್ನೊಂದಿಲ್ಲ. ಮಾನ, ಮರ್ಯಾದೆ, ಸ್ಥಿತಿ, ಗತಿ ಎಲ್ಲ ಮತ್ತೆ. ಅವು ಯಾವುವು ಇಲ್ಲದಿದ್ದರೂ ಪ್ರಾಣ

ವೊಂದು ಉಳಿದರೆ ಸಾಕು. ಮುದಿ ವಿಧವೆಯೊಬ್ಬಳ ಏಕಮಾತ್ರ ಪುತ್ರನ ಪ್ರಾಣ. ಇದಕ್ಕಾಕೆ ಏನು ಬೆಲೆ ಕೊಡಲಾರಳು? ಯಾವ ಯಾತನೆ ಪಡ ಲಾರಳು? ಸ್ವಲ್ಪ ಕಾಲದ ಹಿಂದೆ ಬೊಂಬಯಿಯ ಹಡಗು ಕಟ್ಟೆಯ ಪ್ರದೇಶ ವೆಲ್ಲ ದೊಡ್ಡ ರಾಕ್ಷಸನಂತೆ ಎದ್ದು ಹಾರಿ ವಿಕಟತಾಂಡವ ಮಾಡಿದ ಸಮಾಚಾರ ವನ್ನು ಎಲ್ಲರೂ ಕೇಳಿದ್ದಾರೆ. ಚಿಕ್ಕ ದೊಡ್ಡ ಮನೆಗಳು ಕೂಡ ತೂಗುವ ತೊಟ್ಟಿಲಿನ ಹಾಗೆ ತೊನೆದಿದ್ದುವು. ಹಿಡಿದ ಬೆಂಕಿ ಒಂದು ತಿಂಗಳ ವರೆಗೆ ಆರಲಿಲ್ಲ. ಸುಡುವ ಒಡವೆಗಳನ್ನು ತಿಂದು ಬೆಂಕಿಗೂ ಅಜೀರ್ಣವಾದ ಹಾಗಿತ್ತು. ಕೊನೆಗಂತೂ ಬೆಂಕಿ ಆರಿತು. ಅಂದಿನಿಂದ ನನ್ನ ತಾಯಿಗೆ ಭೀತಿ. ನನ್ನ ವಾಸದ ಕೋಣೆ, ಕೆಲಸದ ಕಚೇರಿ, ಈ ಪ್ರದೇಶದಿಂದ ಎಷ್ಟೋ ದೂರದಲ್ಲಿದ್ದರೂ, ನನ್ನನ್ನು ಹುಡುಕಿಕೊಂಡೇ ಈ ವಿಪತ್ತು ಬಂದುದೆಂದು ಅಮ್ಮನ ಭಯ. ಈ ಘಟನೆ ನಡೆದು ಎರಡು ವಾರಗಳ ವರೆಗೆ ನನ್ನಿಂದ ಅಮ್ಮನಿಗೆ ಪತ್ರವಿರಲಿಲ್ಲ. ಈ ದಿನಗಳೆಂದರೆ ನನ್ನ ತಾಯಿಗೆ ಕಣ್ಣೀರು, ಗೋಳಾಟ, ಅರೆಯುವವಾನದ ದಿನಗಳಾಗಿದ್ದುವು. ನನ್ನ ಪತ್ರ ಕೈಸೇರಿದಂದು ಆಕೆ ಹೊಟ್ಟೆತುಂಬ ಉಂಡಳಂತೆ. ಆ ರಾತ್ರಿ ರೆಪ್ಪೆಗೆ ರೆಪ್ಪೆ ಕೂಡಿತಂತೆ.

ಇದಾದ ಮೇಲೆ ಇನ್ನೊಂದು ಅವಾಂತರ. ಅಂದು ಹಿಡಿದ ಬೆಂಕಿ ವಾರ ಗಳ ಅನಂತರವಾದರೂ ನಂದಿತು. ಇಂದಿನದು ಆರುವ ಹಾಗೆ ತೋರುವು ದಿಲ್ಲ. ಹಿಂದುಗಳಂತೆ; ಮುಸುಲ್ಮಾನರಂತೆ; ಹಿಂದುಸ್ಥಾನವಂತೆ; ಪಾಕಿಸ್ತಾನ ವಂತೆ. ಈ ಸ್ಥಾನಗಳನ್ನು ರಚಿಸುವುದಕ್ಕೆ ಕೊಲೆಯೊಂದೇ ಉಪಾಯವಂತೆ! ಯಾರು ಯಾರನ್ನು ಕೊಲ್ಲುವುದೊ? ಏಕೆ ಕೊಲ್ಲುವುದೋ? ಕೊಂದು ದೊರೆಯುವುದೇನೋ! ಕೆಡುಕರಲ್ಲಿಯೂ ಸ್ವಪ್ರಯೋಜನ ಬುದ್ಧಿ ಇರುವು ದುಂಟು. ಈ ತಲೆಹೋಕರಿಗೆ ಅದೂ ಇಲ್ಲ. ನಮ್ಮ ಮೈಯ ಮೇಲೆ ಸೊಳ್ಳೆ ಕಡಿಯಿತೆಂದು ಈಟಿಯನ್ನು ಪ್ರಯೋಗಿಸುವುದಿಲ್ಲ, ಮೈಗೆ ನೋವಾಗದಂತೆ, ಸೊಳ್ಳೆ ಸಾಯುವಂತೆ, ಹೊಡೆಯುತ್ತೇವೆ. ಹತ್ಯಾಕಾರಿಗಳೆಂದರೆ ರೋಗ ಕೀಟಕಗಳೆಂಬುದು ನಿಜ. ಇವುಗಳನ್ನು ಹೊಡೆದು ಹಾಕ ಬೇಕಾದರೆ ಹಾಕೋಣ. ಆದರೆ ಒಡಲು ಮುರಿಯುವಂತೆ ಹೊಡೆಯುವುದೇ? ಇಂದಿನ ಕ್ರಮದಲ್ಲಿ ರೋಗಕೀಟಗಳು ಸಾಯುತ್ತವೆ. ಅವು ಸತ್ತು, ಬದುಕಬೇಕಾದ ಜನರೂ ಸಾಯುತ್ತಾರೆ. ರೋಗ ಹಬ್ಬುತ್ತಿದೆ. ಹೀಗೆಲ್ಲ ತರ್ಕ ಹೂಡುವುದು ಯಾರಲ್ಲಿ? ತಲೆಕೆಟ್ಟವರ ನಡುವೆ ತಲೆಕೆಡಿಸಿಕೊಳ್ಳುವುದೇ ಸಭ್ಯತೆಯಲ್ಲವೆ?

ನನ್ನಮ್ಮನ ಭಾವನೆಯಂತೆ ಬೊಂಬಯಿಯಲ್ಲಿ ಇಷ್ಟೆಲ್ಲ ದುರ್ಘಟನೆ

ಗಳುಗುತ್ತಿರುವುದು ನನ್ನೊಬ್ಬನ ಕೇಡಿಗಾಗಿ. ಭೀತಿಗೆ ಭೀತಿಯೇ ತಾಯಿ ಬೇರು. ಭೀತಿಗೆ ಭೀತಿಯೆ ಚಿಗುರು—ಕಾಯಿ—ಹಣ್ಣು. ಸಮಾಧಾನ ಪಡಿಸಲು ನಾನೆಷ್ಟು ಬರೆದರೇನು? ತಾಯಿಗೆ ಒಲವಾಗದು. ಕೊನೆಗೆ ನನಗೂ ಒಂದು ಬಗೆಯ ವೈರಾಗ್ಯವೋ ವೈರಸ್ಯವೋ ಉಂಟಾಯಿತೆನ್ನಬಹುದು. ಬೊಂಬಯಿಗೆ ಕೊನೆಯ ನಮಸ್ಕಾರ ಹೊಡೆದರಾಗಬಹುದು ಎಂದು ತೋರ ತೊಡಗಿತು. ಆದರೆ ನಾನೊಂದು ತೊಡಕನ್ನು ತಂದು ಕೊಂಡಿದ್ದೆ. ನಾನು ಕೆಲಸ ಮಾಡುತ್ತಿದ್ದುದು ಒಂದು ವ್ಯಾಪಾರಿ ಸಂಸ್ಥೆಯಲ್ಲಿ. ಧನಿಗಳು ದೊಡ್ಡ ಗುಜರಾಥಿ ಶ್ರೀಮಂತರು. ಬೊಂಬಯಿಯಲ್ಲಿ ಬಡಿದಾಟ ಹೆಚ್ಚಿದಂತೆ ಅವರ ಶರೀರದ ಆರೋಗ್ಯ ಕೆಡುತ್ತಾ ಬಂತು. ತಮ್ಮೂರಿಗೆ ಹೋಗಿ ಹವೆ ಬದ ಲಾಯಿಸದಿದ್ದರೆ ಬದುಕುವ ಹಾಗಿಲ್ಲ—ಎಂದು ತೋರಿತು. ಐವತ್ತು ರೂಪಾ ಯಿಯ ಹೆಚ್ಚಳವನ್ನು ಕೊಟ್ಟು "ಭಾಯಿ ...... ನೀನೇ ಎಲ್ಲವನ್ನು ನೋಡಿಕೊ ... ಎರಡು ತಿಂಗಳಲ್ಲಿ ಹಿಂದೆ ಬರುತ್ತೇನೆ ... ನಿನ್ನಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆ" ಎಂದು ಭರವಸೆಕೊಟ್ಟರು. ಅವರಿಗೆ ನನ್ನಲ್ಲಿ ತುಂಬ ನಂಬಿಕೆಯಿತ್ತು. ಐವತ್ತು ರೂಪಾಯಿಯ ಅಧಿಕ ವೇತನಕ್ಕಾಗಿ ನಾನು ಪ್ರಾಣವನ್ನು ಬಲಿಕೊಡಲೂ ಸಿದ್ಧನೆಂಬುದರಲ್ಲಿ ಅವರಿಗೆ ಸಂದೇಹ ವಿರಲಿಲ್ಲ. ಅವರ ಪ್ರಾಣ ಮಾತ್ರ ನನ್ನದರಷ್ಟು ಅಗ್ಗವಲ್ಲ; ಅಷ್ಟೆ .. ತಿಂಗಳೆರಡು ಕಳೆದು ಅರ್ಧ ವರ್ಷವೇ ಆಯಿತು. ಅವರ ಆಗಮನ ವಾರ್ತೆ ಇಲ್ಲ. ಅವ ರಿಲ್ಲದ ಕಾಲದಲ್ಲಿ ಕೆಲಸ ಬಿಟ್ಟು ಹೋಗೋಣವೇ? ಅದು ಕಳ್ಳಾಟಿಕೆಯಾದೀ ತೆಂಬ ಮರ್ಯಾದೆಯ ಬುದ್ಧಿ ಬೇರೆ; ಬರಲೇ ಬೇಕೆಂಬ ತಾಯಿಯ ಒತ್ತಾಯ ಬೇರೆ. ಕೊನೆಗೆ ನಿರುಪಾಯನಾಗಿ "ಇನ್ನೊಂದು ತಿಂಗಳೊಳಗಾದರೂ ನೀವಿ ಲ್ಲಿಗೆ ಬರಬೇಕು; ನನಗೆ ಬಿಡುಕೊಡಬೇಕು. ಒಮ್ಮೆ ಊರಿಗೆ ಹೋಗಿ ತಾಯಿ ಯನ್ನು ನೋಡಿ ಬರಬೇಕು" ಎಂದು ಪತ್ರ ಬರೆದೆ. "ಬೇಗನೆ ಬರುತ್ತೇನೆ; ಅದು ವರೆಗೆ ಅಲ್ಲಿರು" ಎಂದು ಉತ್ತರ ಬಂತು.

ಈ ಬಾರಿ ತಾಯಿಯ ಒತ್ತಾಯದಲ್ಲಿ ಕೆರೆಕೋಡಿ ಅಬ್ದುಲ್ಲನ ತಾಯಿ ಪಾತುಮ್ಮ (ಇದು ಫತೀಮ ಎಂಬುದರ ಅಪಭ್ರಂಶ)ನ ಪ್ರಾರ್ಥನೆಯೂ ಸೇರಿಕೊಂಡಿತ್ತು. "ರಾಮಣ್ಣ ... ಕೆರೆಕೋಡಿ ಅಬ್ದುಲ್ಲನ ತಾಯಿ ಬಹಳ ಕಠಿನ ಸ್ಥಿತಿಯಲ್ಲಿ ಇದ್ದಾಳೆ. ಶರೀರದಲ್ಲಿ ರಕ್ತಮಾಂಸ ಎಂಬುದಿಲ್ಲ. ಇಡೀ ಶರೀರ ಒಂದು ದೊಡ್ಡ ತೊಗಲಿನ ಮೂಟೆಯ ಹಾಗಿದೆ. ತನ್ನ ನಿತ್ಯಕರ್ಮ ವನ್ನೂ ಮಾಡಲಾರದವಳಾಗಿದ್ದಾಳೆ. ಅಲ್ಲನು ಎಂದು ತನ್ನನ್ನು ಕರೆದೊಯ್ಯು

ವನೋ ಎಂದು ಹಾದಿನೋಡುತ್ತಿದ್ದಾಳೆ. ಅವಳೂ ನನ್ನಂತೆಯೇ ಹೆಣ್ಣಲ್ಲವೇ? ಅವಳೂ ನನ್ನಂತೆಯೆ ಹೊಟ್ಟೆಯಲ್ಲಿ ಹುಟ್ಟಿದ ಒಂದೇ ಒಂದು ಕೂಸಿನ ಮೇಲೆ ತನ್ನ ಆಸೆಗಳನ್ನೆಲ್ಲ ಹೇರಿ ದಿನಲೆಕ್ಕಮಾಡುತ್ತಿರುವ ಬಡವಿಧವೆಯಲ್ಲವೆ? ಅಲ್ಲಿ ಯಾರು ಯಾರನ್ನು ಬೇಕಾದರೂ ತಿವಿಯಲಿ. ನೀನು ಅವನನ್ನು ಹುಡುಕಿ ಕರೆದು ತರಲೇಬೇಕು. ಆತ ಹೋಗಿ ಇಂದಿಗೆ ಎಂಟು ವರ್ಷಗಳಾಗಿರ ಬಹುದು. ಒನ್ಮೆಯಾದರೂ ಬಂದು ತಾಯಿಗೆ ಮುಖತೋರಿಸಿ ಹೋದು ದುಂಟೇ? ಏನಾದರೂ ಮಾಡಿ ಮುದುಕಿ ಪಾತುಮ್ಮನಿಗೆ ಕಳೆದುಹೋದ ಮಗನನ್ನು ತುಂದುಕೊಟ್ಟು ಪುಣ್ಯಸಂಪಾದಿಸು ಮಗ! — ಎಂದು ಪತ್ರದಲ್ಲಿತ್ತು. ಸಲಭ ಕಾರ್ಯವಲ್ಲ. ನಾನೊಬ್ಬ ನನ್ನ ತಾಯಿಗೆ ತನ್ನ ಮಗನನ್ನು ತಂದೊಪ್ಪಿಸಿದರೆ ಸಾಲದು. ಪಾತುಮ್ಮನಿಗೆ ಮಗನನ್ನು ತಂದುಕೊಡಬೇಕು! ನನ್ನ ತಾಯಿ 'ಪಾರ್ತಿ'. ಅವನ ತಾಯಿ ಪಾತುಮ್ಮ. ಬೊಂಬಯಿ ನಗರ ದಲ್ಲಿ ಈ ಎರಡು ಹೆಸರುಗಳೊಳಗೆ ಎಷ್ಟು ಅಂತರವೆಂಬುದು ಹಳ್ಳಿಯ ಹೆಂಗುಸಿಗೆ ಹೇಗೆ ತಿಳಿದೀತು? ಅಬ್ದುಲ್ಲನನ್ನು ಕರೆದುಕೊಂಡು ಹೋಗುವುದು ಹಾಗಿರಲಿ; ನನ್ನನ್ನು ನಾನೇ ಕರೆದುಕೊಂಡು ಹೋಗಬೇಕಾದರೆ ಈ ಜೀವ ವನ್ನು ಉಪ್ಪಿನಕಾಯಿ ಭರಣಿಯಲ್ಲಿ ತುಂಬಿ ಹೊಗೆಯಟ್ಟದಲ್ಲಿ ಅಡಗಿಸಿ ಕಾಯುತ್ತಿರಬೇಕು!

x x x x

ಅಬ್ದುಲ್ಲ! ಹೌದು, ಆತ ನನ್ನ ಬಾಲ್ಯದ ಸಂಗಾತಿ. ಪಾತುಮ್ಮ ಒಬ್ಬಳು ಬಡ ವಿಧವೆ. ಗಂಡನಿದ್ದಾಗ ಅವರಿಗೊಂದು ಚಿಕ್ಕ ಅಂಗಡಿಯಿತ್ತು. ನಮ್ಮ ಹಳ್ಳಿಯೆಂದರೆ ಹಳ್ಳಿಯ ರಾಜ. ಮನೆಗೆ ಎರಡು ಮೈಲು ದೂರದಿಂದ ಈಚೆಗೆ ರಸ್ತೆಯೇ ಇಲ್ಲ. ಎಲ್ಲ ಗದ್ದೆ ತೋಡು ಕಾಡು. ಹತ್ತಿರದ ಪೇಟೆಯ ರಸ್ತೆ ಗುಡ್ಡಬೆಟ್ಟಗಳ ಬೆನ್ನಮೇಲೆ ಹರಿದಾಡಿ ಸುತ್ತಿ ಡೊಂಕಿ ಏರಿ ಇಳಿದು ಮಾಗಣೆ ಶ್ಯಾನುಭಾಗರ ಮನೆಯ ಅಂಗಳದ ಅಂಚಿಗೆ ತಗಲುತ್ತದೆ. ಚಿಕ್ಕ ಬೋಳುಗುಡ್ಡದ ಮುಖದಿಂದಿಳಿದು ಬರುವ ಆ ರಸ್ತೆಯ ಕೆಂಪುತುದಿ, ದೂರ ನಿಂತು ತನ್ನೊಡೆಯನ ಕಾಲನ್ನು ನಕ್ಕುವ ನಾಯಿಯ ನೀಳನಾಲಗೆಯಂತೆ, ಗ್ರಾಮುಕ್ಕೆ ಇಳಿಯುತ್ತದೆ. ಈ ರಸ್ತೆಯಲ್ಲಿಯೇ ನೂರು ಗಜ ಹಿಂದೆ ಪಾತು ಮ್ಮನ ಗಂಡನಿಗೆ ಬಿದಿರು ಮುಳಿಹುಲ್ಲಿನ ಹೊದಿಕೆಯ ಅಂಗಡಿಯೊಂದು ಇತ್ತು. ಈ ಚಿಕ್ಕ ಅಂಗಡಿಯಲ್ಲಿ ಅವನೊಬ್ಬ ದೊಡ್ಡ ಸಾವುಕಾರನಾದ. ನಸ್ಯ, ಬೀಡಿ, ಬಾಳೆಹಣ್ಣು, ಓಲೆಬೆಲ್ಲ, ಸಾಬೂನಿನ ತುಣುಕುಗಳನ್ನು ಮಾರಿ ಸ್ವಲ್ಪ ಕಾಸು

ಮಾಡಿದ್ದ. ಆತ ಸತ್ತು ಇಂದಿಗೆ ಇಪ್ಪತ್ತು ವರ್ಷವಾಯಿತೆಂದು ಹೇಳುತ್ತಾರೆ. ಆರು ವರ್ಷದ ಅಬ್ದುಲ್ಲನ ಲಾಲನೆ ಪಾಲನೆಗಳ ಭಾರ ಪಾತುಮ್ಮನ ಹೆಗಲ ಮೇಲೆ ಎರಗಿತು. ಆದರೆ ಅಬ್ದುಲ್ಲನಂಥವರನ್ನು ಸಾಕುವ ಕೆಲಸ ಅಷ್ಟೇನೂ ದೊಡ್ಡದಲ್ಲ. ದಿನಕ್ಕೆ ಮೂರು ಬಾರಿ ಗಂಜಿ. ಉಡುವುದಕ್ಕೊಂದು ಲುಂಗಿ. ಮೈಗೊಂದು ಗಂಜಿಪ್ರಾಕು(ಬನಿಯನ್). ಮನೆಯಲ್ಲಿ ತಂಟೆ ತಪ್ಪಿಸುವುದೊಂದೆ ಉಳಿದ ಪ್ರಶ್ನೆ. ಶಾಲೆಗೆ ಕಳುಹಿಸಿದರಾಯಿತಲ್ಲವೆ? ಹಗಲು ಹೊತ್ತು ಮಾಸ್ತರರ ಬೆತ್ತ ಕಾಯುತ್ತದೆ; ರಾತ್ರಿ ನಿದ್ರೆ ಕಾಯುತ್ತದೆ. ದಿನ ಹೋಗು ವುದು; ವರ್ಷವಾಗುವುದು. ಮೈ ಬೆಳೆಯುವುದು. ರೂಪಾಯಿ ಆಣೆ ಪೈಗಳ ಲೆಕ್ಕ ಬರುವಾಗ ತಂದೆಯ ಕಸುಬನ್ನು ಕೈಕೊಂಡರಾಯಿತು. ಪಾತುಮ್ಮನಿಗೆ ಮಗನ ಭವಿಷ್ಯದ ವಿಷಯದಲ್ಲಿದ್ದ ಮಹಾಕಾಂಕ್ಷೆ ಇಷ್ಟೆ! ತಾನು ಸಾಯುವ ಕಾಲಕ್ಕೆ ಮಗನ ಕಣ್ಣಮುಂದೆಯೇ ಸಾಯಬೇಕೆಂಬುದು, ತಾಯಿಯಾದ ತಂದೆಯಾದ, ಪ್ರತಿಯೊಂದು ವ್ಯಕ್ತಿಯ ಆಸೆಯಷ್ಟೆ. ಅದನ್ನು ಬೇರೆ ಹೇಳ ಬೇಕಾದುದಿಲ್ಲ.

ನನಗೆ ಅಬ್ದುಲ್ಲನ ಪರಿಚಯ ಮಾಡಿಕೊಟ್ಟುದು ನನ್ನ ಗ್ರಾಮದ ಶಾಲೆ. ಅಬ್ದುಲ್ಲ ಶತದಡ್ಡ. ಆದುದರಿಂದ ಉಪಾಧ್ಯಾಯರ ಬೆತ್ತಕ್ಕೆ ಒಳ್ಳೆಯ ಸವಿತುತ್ತಾಗಿದ್ದ. ನಾನು ಓದುವುದರಲ್ಲಿ ಚುರುಕಾಗಿದ್ದರೂ ತಂಟೆ ಮಾಡುವುದರಲ್ಲಿ ಅಗ್ರಗಣ್ಯ. ತಂಟೆ ಮಾಡದ ದಡ್ಡನಿಗೂ ಕಲಿಯುವ ತುಂಟನಿಗೂ ಒಂದೇ ತೆರ. ನಾದ ಸಂಭಾವನೆ. ಇಡೀ ಶಾಲೆಯಲ್ಲಿ ನಮ್ಮಿಬ್ಬರಷ್ಟು ಮೈ ಹದ ಮಾಡಿಸಿ ಕೊಂಡವರು ಬೇರಾರೂ ಇರಲಿಲ್ಲ. ಬೆತ್ತಗಳಿಗೂ ನಮಗೂ ರಕ್ತ ಸಂಬಂಧವೇ ಇದ್ದಿರಬೇಕು. ಈ ಕಾರಣದಿಂದ ನನಗೆ ಅಬ್ದುಲ್ಲನಲ್ಲಿಯೂ ಅಬ್ದುಲ್ಲನಿಗೆ ನನ್ನಲ್ಲಿಯೂ ಸಹಾನುಭೂತಿ ಉಂಟಾಯಿತು. ಪೆಟ್ಟುದೊರೆಯದ ದಿನಗಳೇ ಇರಲಿಲ್ಲ. ಕೊನೆಗೆ ನಿರಾಶರಾದೆವು. ಮಾಸ್ತರರ ಬೆತ್ತದ ಆಟವನ್ನು ನಿಲ್ಲಿಸಲೇ ಬೇಕೆಂದು ತೋರಿತು. ಯಾವ ಬಗೆಯಿಂದಲಾದರೂ ಸೇಡುತೀರಿಸಬೇಕೆಂದು ತೋರಿತು. ಈ ಶಾಲೆಗೆ ಬಂದು ಈ ಮಾಸ್ತರರಿಂದ ಕಲಿಯುವುದು ಪೆಟ್ಟು ತಿನ್ನುವ ಪಾಠವನ್ನಷ್ಟೆ! ಇದನ್ನು ಬೇರೆಲ್ಲಿಯಾದರೂ ಕಲಿತುಕೊಳ್ಳೋಣ . . . ಒಮ್ಮೆಗೆ ಮಾಸ್ತರರಿಗೆ ಬಿಸಿಹುಟ್ಟಿಸೋಣ . . . ಎಂದು ಯೋಚಿಸುತ್ತಿದ್ದೆವು. ಅದು ಮಧ್ಯಾಹ್ನದ ಹೊತ್ತು. ಮಾಸ್ತರರು ಪಟೇಲರ ಮನೆಗೆ ಹೋಗಿ ಊಟ ಮಾಡಿ ಬರುತ್ತಾರೆ. ಆ ದಿನ ಪಟೇಲರ ಮನೆಯಲ್ಲಿ ಒಂದು ಔತಣವಿತ್ತು. ತಿಂದ ಭಾರವನ್ನು ಹೊರುವ ಆಯಾಸದಿಂದ ಆಕಳಿಸಿಕೊಂಡೇ ಬಂದಾರು

ಎಂಬುದೂ ನಮಗೆ ಗೊತ್ತು. ಮಕ್ಕಳಲ್ಲಿ ಮುಕ್ಕಾಲು ಪಾಲು ಜನ ತಂತಮ್ಮ ಮನೆಗಳಿಗೆ ಹೋಗಿದ್ದರು. ಬುತ್ತಿ ತರುತ್ತಿದ್ದವರಲ್ಲಿ ನಾನೊಬ್ಬ. ಅಬ್ದುಲ್ಲ ನೊಬ್ಬ. ಬುತ್ತಿಯನ್ನು ತಿಂದು ಮುಗಿಸಿ ಶಾಲೆಯ ಹಿಂದಿನ ಪೊದರುಗಳ ನಡುವೆ ತಿರುಗಾಡುತ್ತಿದ್ದೆವು. "ಏನು ಅಬ್ದುಲ್ಲ . . ನಮ್ಮ ಮಾಸ್ತರರು ನಮಗಿಷ್ಟು ಬುದ್ಧಿ ಕಲಿಸುತ್ತಾರಲ್ಲ; ನಾವು ಅವರಿಗೂ ಒಂದಿಷ್ಟು ಕಲಿಸಿ ಬಿಡೋಣವೇ?" ಎಂದು ನಗುತ್ತಾ ಕೇಳಿದೆ. "ಓಹೋ . . ಆಗಬಹುದು" ಎಂದ ಅಬ್ದುಲ್ಲ. ಆಗ ಅಲ್ಲೆ ಒಂದು ಚೂರಿ ಮುಳ್ಳಿನ ಪೊದರು ಕಾಣಿಸಿತು. ಹರಿತವಾದ ಆ ಮುಳ್ಳುಗಳ ಮೊನೆಯಲ್ಲಿಯೇ ಮಾಸ್ತರರಿಗೆ ಕಲಿಸಬೇಕಾದ ಬುದ್ಧಿಯೂ ಕಾಣಿಸಿತು. "ನನ್ನ ಬೆನ್ನು ರಾಗಿ ಬೀಸ ವ ಕಲ್ಲು" ಎಂದೆನಾನು. "ನನ್ನ ಬೆನ್ನು ಸಮಗಾರನ ಚರ್ಮ" ಎಂದ ಅಬ್ದುಲ್ಲ. "ಈ ಚೂರಿಮುಳ್ಳು ಬುದ್ಧಿ ಕಲಿಸುತ್ತದೆ" ಎಂದು ನಾನು ಅಭಯ ಕೊಟ್ಟೆ. ಬೊಗಸೆ ತುಂಬ ಮುಳ್ಳನ್ನು ಸಂಗ್ರಹಿಸಿದೆವು. ನಮ್ಮ ಉಪಾಧ್ಯಾಯರ ಕುರ್ಚಿ ಬೆತ್ತದ ಹೆಣೆ ತದ್ದು. ಅದರಲ್ಲಿ ಸಜೀವವಾದ ಚೂರಿಮುಳ್ಳುಗಳೆಷ್ಟೊ ಮನೆ ಮಾಡಿದ್ದುವು. ಈ ತಗಣೆಗಳು ಅವರ ಬೆತ್ತಕ್ಕೂ ಹೆದರುತ್ತಿರಲಿಲ್ಲ. ಮಕ್ಕಳಿಗೆ ಅವರಲ್ಲಿದ್ದ ಹೆದರಿಕೆ ಈ ತಗಣೆಗಳಿಗೆ ಇರಲಿಲ್ಲ. ಇವುಗಳ ಹಾವಳಿ ತಪ್ಪಿಸುವುದಕ್ಕಾಗಿ ಮಾಸ್ತರರು ಕುರ್ಚಿಯ ಮೇಲೆ ಎರಡು ಮಡಿಕೆ ಮಾಡಿದ ಹುಲ್ಲಚಾಪೆಯನ್ನು ಬೆನ್ನಿನಾಭಾಗಕ್ಕೂ ಆಸನಕ್ಕೂ ಹಾಸುತ್ತಿದ್ದರು. ನಾವು ಆ ಚೂರಿಮುಳ್ಳು ಗಳನ್ನು ತಂದು ಚಾಪೆಯ ಮಡಿಕೆಯೊಳಗೆ ಅಂಟಿಸಿ ಇಟ್ಟೆವು. ವರೇಲರ ಮನೆ ಯಲ್ಲಿ ಊಟತೀರಿಸಿಕೊಂಡು, ಕೈ, ಕಾಲು, ಹೊಟ್ಟೆ—ಯಾವುದೂ ತಮ್ಮದಲ್ಲ ಎಂಬ ಆಯಾಸದಿಂದ ಬುಸ್ಸೆಂದು ನಿಟ್ಟುಸಿರು ಬಿಡುತ್ತಾ ಮಾಸ್ತರರು ಬಂದು ದೊಪ್ಪನೆ ಕುರ್ಚಿಯ ಮೇಲೆ ಅಂಡಿಸಿದುದೇ ತಡ.

ಅಯ್ಯೋ! ಎಂದು ಹುಯಿಲಿಡುತ್ತಾ ಒಂದು ನಿಮಿಷ ಭೂತದ ಅಣಿ ಕಟ್ಟಿದ ನಲಿಕೆಯವನಂತೆ ಗೋಳಿಟ್ಟರು! ಮಕ್ಕಳೆಲ್ಲ ತಬ್ಬಿಬ್ಬಾಗಿ ನೋಡುತ್ತಿ ದ್ದರು. ನಾವಿಬ್ಬರೆ ಮನಸ್ಸಿನ ಒಳಗೇ ನಗುತ್ತಿದ್ದೆವು. ಮನಸ್ಸಿನ ನಗು ತುಟಿ ಯಲ್ಲಿ ಕಾಣಿಸಿತೋ ಏನೋ . . ಅಥವಾ ಇಂತಹ ತಂಟೆ ತಕರಾರುಗಳನ್ನು ಮಾಡುವುದಕ್ಕೆ ನಾನೊಬ್ಬನೇ ಸಮರ್ಥನೆಂಬ ಕಾರಣದಿಂದಲೋ ಏನೊ . . ಉಪಾಧ್ಯಾಯರು ಬೆತ್ತವನ್ನು ಬಲವಾಗಿ ಬೀಸಿ ನನ್ನ ಬೆನ್ನಿಗೆ, ಕಾಲಿಗೆ, ಕೈಗೆ . . ಎಲ್ಲ ಅವಯವಗಳಿಗೆ, ಹೊಡೆದರು. ಆಗ ಅಬ್ದುಲ್ಲ "ಅಯ್ಯೋ!" ಎಂದು ಅರಚಿದ. ಹೀಗೆ ಅರಚಿದ ಕಾರಣದಿಂದಲೇ ಅವನ ಅಪರಾಧವೂ ತುಬ್ಬಾಯಿತು.

ಬೇರೆ ಮಕ್ಕಳೆಲ್ಲ ಮೌನವಾಗಿ ನೋಡುತ್ತಿದ್ದಾಗ ಅಬ್ದುಲ್ಲನೊಬ್ಬನೇ ಅರಚಿದು ದೇಕೆ? ನನ್ನ ಈ ಒಳಸಂಚಿನಲ್ಲಿ ಅವನೂ ಸೇರಿದ್ದಾನೆನ್ನುವುದಕ್ಕೆ ಬೇರೆ ಸಾಕ್ಷಿ ಬೇಕೆ? ನಮ್ಮಿಬ್ಬರನ್ನೂ ಶಾಲೆಯ ಮಕ್ಕಳ ಮುಂದೆ ನಿಲ್ಲಿಸಿ ಐವತ್ತೈವತ್ತು ಚಡಿಕೊಟ್ಟರು. ಶಾಯಿಕುಪ್ಪಿಗೆ ಬೆರಳನ್ನು ಮುಳುಗಿಸಿ ಇಬ್ಬರಿಗೂ ಕಪ್ಪು ಮೀಸೆಗಳನ್ನೆಳೆದರು. ಮುಖಕ್ಕೆ ಮೂರು ಮೂರು ನಾಮ ಹಾಕಿದರು. ಶಾಲೆಯಿಂದ ಹೊರಗೆ ದಬ್ಬಿ ಬಿಟ್ಟರು.

ಶಾಲೆಯ ಹೊರಗೆ ಅಳುತ್ತಾ ಹೋಗುತ್ತಿದ್ದ ನಮ್ಮಿಬ್ಬರ ಮೈ ಕೆಂಡದಲ್ಲಿ ಹಾಕಿದ ಬದನೆಕಾಯಿಗಳಂತೆ ಉರಿಯುತ್ತಿತ್ತು. ಸ್ಲೇಟು ಪುಸ್ತಕಗಳನ್ನು ಹೆಗಲ ಮೇಲಿಟ್ಟುಕೊಂಡು ಮನೆಯ ದಾರಿಯಲ್ಲಿ ನೂರು ಗಜ ನಡೆಯುತ್ತಿದ್ದಾಗ ನನ್ನ ಮನಸ್ಸು ಅವನ ಕಡೆಗೂ ಅವನ ಮನಸ್ಸು ನನ್ನ ಕಡೆಗೂ ಹಾರಿತು. ಕರ್ತವ್ಯ ಮಾಡಿದುದಕ್ಕೆ ಶಿಕ್ಷೆಯನ್ನನುಭವಿಸಬೇಕಾಗಿ ಬಂದ ನಿರಪರಾಧಿಗಳಂತೆ ನಾವಿಬ್ಬರೂ ಪರಸ್ಪರ ಸಹಾನುಭೂತಿಯನ್ನು ತೋರಿಸುತ್ತಿದ್ದೆವು. ಮನೆಗೆ ಹೋಗುವುದಕ್ಕೆ ಅವಕಾಶವಿರಲಿಲ್ಲ. ಶಾಲೆ ಮುಗಿಯುವ ಮುಂಚೆ ಬಂದುದೇಕೆ? ಎಂದು ತಾಯಂದಿರು ಕೇಳಿದರೆ ನಾವು ಕೊಡಬೇಕಾಗಿದ್ದ ಉತ್ತರವೇನು? ಇದೇ ವೇಷದಲ್ಲಿ ಬಲುದೂರ ಹೋಗುವ ಹಾಗಿರಲಿಲ್ಲ. ಈ ಮೀನೆ ನಾಮಗಳನ್ನು ಕಂಡರೆ ದಾರಿಹೋಕರು ಏನೆಂದಾರು? ಆಗ ಅಬ್ದುಲ್ಲನಿಗೆ ಒಂದು ಯೋಜನೆ ಹೊಳೆಯಿತು. "ರಾಮಣ್ಣ! ನಿನಗೆ ಈಜು ಬರುತ್ತದೊ?" ಎಂದು ಅಬ್ದುಲ್ಲ ಕೇಳಿದ. "ಬರುವುದಿಲ್ಲ"— ಎಂದೆ.

"ಹಾಗಾಗರೆ ಈ ದಿನ ಕಲಿಯುತ್ತೀಯೋ?" ಎಂದು ಅವನ ಪ್ರಶ್ನೆ. "ಓಹೊ! ಆಗಬಹುದು!" ಎಂದು ನನ್ನ ಉತ್ತರ. ನಮ್ಮ ಮುಂದೆ ಅರೆ ಮೈಲು ದೂರದಲ್ಲಿಯೇ ಒಂದು ತೊರೆಯಿತ್ತು. ಮಳೆಗಾಲವನ್ನು ಬಿಟ್ಟು ಬೇರೆ ದಿನಗಳಲ್ಲಿ ಈಜಾಡುವುದಕ್ಕೆ ಬೇಕಾದ ನಿಂತ ನೀರಿನ ಕೆರೆಯಂತೆ ಅದು ಆಕರ್ಷಕವಾಗಿತ್ತು. ಅಬ್ದುಲ್ಲ ಮೀನು ಹಿಡಿಯುವುದರಲ್ಲಿ ಗಟ್ಟಿಗ. ಹಿಡಿದ ಮೀನುಗಳಿಂದಲೇ ಈಜಾಟ ಕಲಿತಿದ್ದ. ನಾನು ತಾಯಿಯ ಮೋಹದ ಮಗು. ನೀರನ್ನು ಕಂಡರೆ ಹೆದರಬೇಕೆಂಬುದೇ ನಾನು ಕಲಿತ ಪಾಠ. ಅಂದು ನನಗೆ ಈಜುವ ವಿದ್ಯೆಯ ಆರಂಭವಾಯಿತು. ಮುಹೂರ್ತ ಮಾಡಿಸಿದ ಗುರು ಅಬ್ದುಲ್ಲ.

ನಾನು ಅಬ್ದುಲ್ಲನೂ ಆ ಶಾಲೆಯಲ್ಲಿ ಹೆಚ್ಚುಕಾಲ ಒಡನಾಡಿರಲಿಲ್ಲ. "ಇಂಗ್ಲೀಸು ಬರವಿ"ಗಾಗಿ ನನ್ನನ್ನು ಪುತ್ತೂರಿಗೆ ಕಳುಹಿಸಿದರು. ಅಬ್ದುಲ್ಲ ಏನು

ಮಾಡುತ್ತಿದ್ದನು—ಎಂದು ನಾನರಿಯೆ. ಆದರೆ ಮಾಸ್ತರರ ಬೆತ್ತದ ದ್ವಾರಾ ನಮ್ಮಲ್ಲಿ ಉಂಟಾದ ಪ್ರೇಮವು ಸರ್ವಥಾ ಕುಂದಲಿಲ್ಲ. ನಾನು ರಜೆಯಲ್ಲಿ ಮನೆಗೆ ಬಂದಾಗ ಒಂದು ದಿನವಾದರೂ ಅಬ್ದುಲ್ಲನನ್ನು ಕಾಣದೆ ಇಲ್ಲ. ಇಬ್ಬರೂ ಒಂದಾಗಿ ಕಾಡುಗುಡ್ಡಗಳಲ್ಲಿ ಅಲೆದಾಡುವುದು; ಮರಹತ್ತುವುದು; ದರೆಹಾರುವುದು; ಕಲ್ಲಾಟವಾಡುವುದು; ಸರಿಮುಗುಳಿ ಹಿಡಿಯುವುದು; ಬಾಳೆನಾರಿನ ಚೆಂಡನ್ನು ಒದೆಯುವುದು. ಇದೆಲ್ಲ ನಿತ್ಯಾಭ್ಯಾಸ. ಒಮ್ಮೊಮ್ಮೆ ಅಬ್ದುಲ್ಲನ ಮನೆಗೆ ನಾನೂ ನನ್ನ ಮನೆಗೆ ಅಬ್ದುಲ್ಲನೂ ಹೋಗುವುದೂ ಬರುವುದೂ ಇತ್ತು. ಪಾತುಮ್ಮ ನನಗೆ ಅವಲಕ್ಕಿ ತಾಳೆಬೆಲ್ಲಗಳನ್ನು ಕೊಟ್ಟರೆ ನನ್ನವ್ಮ ಅಬ್ದುಲ್ಲನಿಗೆ ಕಾಫಿ ದೋಸೆ ಕೊಡದೆ ಇರುತ್ತಿರಲಿಲ್ಲ. ಹೀಗೆ ವರ್ಷ ಗಳು ಸಂದುವು. ಪುತ್ತೂರಿನಲ್ಲಿ ಕಲಿಯಬಹುದಾದುದನ್ನು ಕಲಿತುದಾಯಿತು. ಕೆಲಸಕ್ಕಾಗಿ ಹೊರಡುವ ಕಾಲ ಬಂತು. ಈ ಸುದ್ದಿಯನ್ನು ಕೇಳಿ ಅಬ್ದುಲ್ಲ ನನ್ನ ಬಳಿಗೆ ಓಡಿಬಂದು "ರಾಮಣ್ಣ! ಒಮ್ಮೆ ನಮ್ಮ ಮನೆಗೆ ಬರಬೇಕಂತೆ!" ಎಂದ. ಆ ದಿನ ಸಂಜೆ ಅಲ್ಲಿಗೆ ಹೋದೆ. ಪಾತುಮ್ಮ ನನಗೆ ದಿವ್ಯವಾದ ಆರೋಗಣೆಗೆ ಅಣ್ಣಿ ಮಾಡಿದ್ದಳು. ಎಳನೀರು; ಸಕ್ಕರೆ; ಬಾಳೆಹಣ್ಣು; ಒಂದು ಪಿಂಗಾಣಿ ಬಟ್ಟಲಲ್ಲಿ ತುಂಬ ಹುರಿಗಡಲೆ! ನನಗೆ ಕೊಟ್ಟುದರಲ್ಲಿ ಒಂದಂಶ ಅಬ್ದುಲ್ಲನಿಗೂ ಸಿಕ್ಕಿತು. ಇಬ್ಬರೂ ತಿಂದು ತೇಗಿದೆವು. ತಿನ್ನುತ್ತಿ ದ್ದಾಗ ಪಾತುಮ್ಮ ಬಳಿಯಲ್ಲಿಯೇ ನಿಂತು ನಾನು ತಿನ್ನುತ್ತೇನೋ ಇಲ್ಲವೋ? ಉಪಚಾರಕ್ಕಾಗಿ ತಿನ್ನುತ್ತೇನೋ ಪ್ರೀತಿಯಿಂದ ತಿನ್ನುತ್ತೇನೋ ಎಂಬುದನ್ನು ಎವೆಯಿಕ್ಕದೆ ನೋಡುತ್ತಲೇ ಇದ್ದಳು. ನಾನು ತಿಂದು ಮುಗಿಸುವಾಗ ಅವಳ ಕಣ್ಣುಗಳು ಒದ್ದೆಯಾದುದನ್ನು ಕಂಡೆ. ನನ್ನ ಹೃದಯವೂ ಒದ್ದೆ ಯಾಯಿತು. ಅವಳು ಯಾರೋ ನಾನು ಯಾರೋ! ಹೀಗಿದ್ದರೂ ಪಡೆದ ತಾಯಿಗಿಂತ ಹೆಚ್ಚಾದ ಮಮತಾಪೂರ್ಣ ದೃಷ್ಟಿಯಿಂದ ನನ್ನನ್ನು ನೋಡು ತ್ತಾಳಲ್ಲ! ಯಾವ ಪೂರ್ವಜನ್ಮ ಸಂಬಂಧವೋ ಇದು! ಎಂದು ಮನಸ್ಸಿಗೆ ತೋರಿತು. ಹೋಗುತ್ತೇನೆ ಪಾತುಮ್ಮ! ಎನ್ನುವಾಗ ನನ್ನ ಧ್ವನಿ ನಡು ಗಿತು. ಹೊರಟು ಬರುವಾಗ ಪಾತುಮ್ಮ ಸಮೀಪಕ್ಕೆ ಬಂದು—"ನಿನ್ನ ತಮ್ಮ ಅಬ್ದುಲ್ಲನನ್ನು ಮರೆಯಬೇಡ ರಾಮಣ್ಣ. ನನಗೆ ಯಾರೂ ಗತಿ ಯಿಲ್ಲ. ಅಲ್ಲಿ ಅಲ್ಲನೊಬ್ಬ . . . . ಇಲ್ಲಿ ಇವನೊಬ್ಬ . . . . ನೀನು ನಾಲ್ಕು ಓದು ಕಲಿತವ. ಇವನು ಹೋದಲ್ಲಿ ಅದಿಲ್ಲ. ಬೊಂಬಾಯಿಗೆ ಹೋಗಿ ದೊಡ್ಡ ಚಾಕರಿನೋಡು ಮಗ . . . . ನೀನು ದೊಡ್ಡವನಾದಾಗ ಈ ಬಡ ತಮ್ಮನನ್ನು

ಮರೆಯಬೇಡ . . . . ಪಾತುಮ್ಮನಿಗೆ ಕಾಡು ಹತ್ತಿರವಾಯಿತು; ಊರು ದೂರವಾಯಿತು. ಈ ಹಾಳುಬುದ್ಧಿಯ ಪೋರನಿಗೆ ಏನಾದರೂ ಕೆಲಸ ಮಾಡಿಸಿಕೊಟ್ಟರೆ ನಾಲ್ಕು ವರ್ಷ ಹೆಚ್ಚು ಬದುಕಿಯೇನು. ಮತ್ತೇನೂ ಇಲ್ಲ ಇವನಿಗೆ . . . . ಕೈಕಾಲುಗಳಾದರೂ ಗಟ್ಟಿಯಾಗಿವೆ . . . . " ಎಂದು ನಡುಗುವ ಧ್ವನಿಯಲ್ಲಿ ಆಡಿದಳು.

"ಆಗಲಿ ಪಾತುಮ್ಮ! ಅಲ್ಲಿಗೆ ಹೋದಮೇಲೆ ತಿಳಿಸುತ್ತೇನೆ" ಎಂದೆ.

ನನ್ನನ್ನು ಕಳುಹಿಕೊಡುವುದಕ್ಕಾಗಿ ಅಬ್ದುಲ್ಲ ನಮ್ಮ ಮನೆಯ ಮುಂದಿನ ಸುಗ್ಗಿ ಗದ್ದೆಯ ಅಂಚಿನ ವರೆಗೆ ಬಂದ. "ಹೋಗುತ್ತೇನೆ ರಾಮಣ್ಣ . . . . ನನ್ನನ್ನು ಮರೆಯುವುದಿಲ್ಲವಷ್ಟೆ" ಎನ್ನುತ್ತ ಕಣ್ಣೀರು ಸುರಿಸಿದ. "ಹೇಗೆ ಮರೆತೇನು ಅಬ್ದುಲ್ಲ!" ಎಂದಾಗ ನನ್ನ ಮುಖವೂ ಕೆಂಪಾಗಿದ್ದಿರಬೇಕು.

ಬಾಲ್ಯದಲ್ಲಿ ಕುಡಿಬಿಟ್ಟ ಸ್ನೇಹ ಒಣಗಿಹೋಗುವುದುಂಟೇ? ನನ್ನಂತೆ—ಅಬ್ದುಲ್ಲನಂತೆ, ಹೊರಗಿನ ಭೇದಗಳನ್ನು ಮರೆತು ಸುಖದುಃಖಗಳನ್ನು ಹಂಚಿಕೊಂಡು ಒಡನಾಡಿದವರು ಒಬ್ಬರನ್ನೊಬ್ಬರು ಮರೆಯುವುದುಂಟೇ? ನನ್ನ ಪ್ರಯತ್ನದಿಂದ ಅವನಿಗೊಂದು ಕೆಲಸ ಸಿಕ್ಕಿತು. ಅದರಲ್ಲಿ ಅವನು ತೃಪ್ತಿ ಹೊಂದದೆ 'ಕಲಾಸಿ' ಯಾದನಂತೆ. ಏನು ಕಲಾಸಿಯೋ ಎಲ್ಲಿ ಸೇರಿದನೊ ನಾನರಿಯೆ. ನಾನು ಉಪಕಾರಕ್ಕೆಂದು ಮಾಡಿದ ಪ್ರಯತ್ನದಿಂದ ಪಾತುಮ್ಮನಿಗೆ ಅಪಕಾರವಾಯಿತು—ಎಂಬುದು ನನಗೆ ಮತ್ತೆ ತಿಳಿಯಿತು. ಅವನು ಕಲಾಸಿಯಾದ ಮೇಲೆ ನನ್ನ ಮುಖ ನೋಡಲಿಲ್ಲ. ಬೊಂಬಾಯಿಗೆ ಹೋದ ಮೇಲೆ ಮನೆಯಕಡೆ ಸುಳಿದು ಮೆಟ್ಟಲಿಲ್ಲ. ಪಾತುಮ್ಮ ಕರಗಿದಳು; ನೊರಗಿದಳು. ಮೊದಲೇ ಕ್ಷೀಣವಾಗಿದ್ದವಳು ಬಿಸಿಲಲ್ಲಿ ಬಿದ್ದ ಕಾಷ್ಠದಂತೆ ಒಣಗಿದಳು. ನಾನು ಊರಿಗೆ ಹೋದಾಗಲೆಲ್ಲ, ನನ್ನ ಸಮಯವನ್ನು ನಿರೀಕ್ಷಿಸಿ ನನ್ನ ಬಳಿಗೆ ಬಂದು ತನ್ನ ಹಂಬಲನ್ನೇ ಹೇಳುತ್ತಿದ್ದಳು. "ಅಬ್ದುಲ್ಲನನ್ನು ಕಂಡೆಯೋ ಮಗು . . . . ನಿನ್ನ ತಮ್ಮನನ್ನು ಒಮ್ಮೆ ಕರೆದುಕೊಂಡು ಬಾ ರಾಮಣ್ಣ. ಈ ಲೋಕದಲ್ಲಿ ಬೇರೇನೂ ಆಸೆಯಿಲ್ಲ. ಈ ಬಡಹೆಣ್ಣು ಏಕೆ ಬದುಕಬೇಕು? ನೀನು ವರ್ಷಗಟ್ಟಳೆ ಮುಖತೋರಿಸದಿದ್ದರೆ ಈ ಅಕ್ಕ (ನನ್ನ ತಾಯಿ) ಏನಾದಾಳು ಎಣಿಸಬಾರದೇ ರಾಮು! ನಿನ್ನ ತಾಯಿ ಬೇರೆ_ನಾನು ಬೇರೆಯೆ?" ಎಂದೆಲ್ಲ ಹೇಳುತ್ತಿದ್ದಳು. ಮಾತು ಸತ್ಯ; ಆದರೆ ಕೈತಪ್ಪಿಸಿ ಹೋದವನನ್ನು ತಂದುಕೊಡುವ ಶಕ್ತಿ ನನ್ನದೇ?

x x x x

ತಾಯಿಯ ಪತ್ರಬಂದ ಮೇಲೆ ಹಲವಾರು ಬಾರಿ ಕೆರೆಕೋಡಿ ಅಬ್ದುಲ್ಲನ ಪತ್ತೆಹಚ್ಚಲು ಪೇಚಾಡಿದೆ. ಪ್ರಯೋಜನವಾಗಲಿಲ್ಲ. ನಮ್ಮೂರವರಲ್ಲಿ ಒಬ್ಬೊಬ್ಬರು ಒಂದೊಂದು ಬಗೆಯಾಗಿ ಹೇಳುತ್ತಿದ್ದರು. ಅದನ್ನೆಲ್ಲ ಕೇಳಿ ಮಾಡುವುದಾದರೂ ಏನು? ನನ್ನನ್ನು ಆತ ಕಾಣದೆ ಆರು ವರ್ಷಗಳಾದರೂ ಆಗಿರಬೇಕು. ಈ ಅವಧಿಯಲ್ಲಿ ಅವನೇನಾಗಿದ್ದಾನೋ? ಶರೀರದಲ್ಲಿ ಹೇಗೆ ಬೆಳೆದಿದ್ದಾನೋ? ಮನಸ್ಸಿನಲ್ಲಿ ಹೇಗೆ ಬದಲಾವಣೆ ಹೊಂದಿದ್ದಾನೋ? ಈಗ ಆತನನ್ನು ಕಂಡರೆ ಗುರುತಿಸುವುದಾದರೂ ಸಾಧ್ಯವೇ? ಈಗ ನನಗೆ ಅಬ್ದುಲ್ಲನೆಂದರೆ ಭಾವನೆಯ ಒಂದು ಚಿತ್ರ ಮಾತ್ರ! ಎತ್ತರವಾದ ನಿಲವು; ಬಿಳಿ ಬಣ್ಣ; ತುಂಬಿದ ಒಡಲು; ಚಿಗುರು ಮೀಸೆ; "ಎಲ್ಲಿಗೂ ಹೋದೇನು; ಏನೂ ಮಾಡಿಯೇನು; ಕಲ್ಲು ತಿಂದಾದರೂ ಬದುಕಿಯೇನು" ಎನ್ನುವ ಎದೆಗಾರಿಕೆಯನ್ನು ಹೊಮ್ಮಿಸುವ ನೋಟದ ತುಳುಕು! ಯಾರು ನನಗೆ ತಮ್ಮನಾಗಿದ್ದನೋ ಅವನಿಂದು ಬರಿಯ ಅಬ್ದುಲ್ಲ!

ಬೊಂಬಾಯಿಯ ಜನಸಮುದ್ರದಲ್ಲಿ ಈ ಹನಿಯನ್ನು ಹುಡುಕುವುದು! ಯಾರಿಗೆ ಬೇಕು ಈ ಅಬ್ದುಲ್ಲ? ಹಕ್ಕಿಗೂಡುಗಳಂತೆ ಒತ್ತೊತ್ತಾಗಿರುವ ಮನೆಗಳಲ್ಲಿ ಒಂದು ಗೋಡೆಯಿಂದ ಆಚೆಗೆ ಯಾರು? ಈಚೆಗೆ ಯಾರು? ಎಂದು ಗೊತ್ತಿರುವುದೇ ಕಡಿಮೆ. ಈಗ ಪರಿಚಯ ಯಾರಿಗೂ ಬೇಕಾಗಿಲ್ಲ. ಬೇಕಾಗಿದ್ದರೆ ತಿವಿಯುವುದಕ್ಕೆ! ಹೊಡೆಯುವುದಕ್ಕೆ! ಕಿವಿಚುಚ್ಚಿಸಿಕೊಂಡಾತ ಚುಚ್ಚಿಸದವನನ್ನು ಹೊಡೆಯುತ್ತಾನೆ. ತಲೆ ಬೋಳಿಸಿದಾತ ಬೋಳಿಸದವನನ್ನು ಇರಿಯುತ್ತಾನೆ. ದೇವರು, ಧರ್ಮ, ನೀತಿ, ಸಂಸ್ಕೃತಿ ಯಾವುದೂ ಬೇಡ. ಎಲ್ಲವನ್ನೂ ಮರೆತಿದ್ದೇವೆ. ಕ್ರೂರಜಂತುಗಳಾಗಿರಲು ಒಪ್ಪಿದ್ದೇವೆ. ಅಲ್ಲ; ಸ್ಪರ್ಧಿಸುತ್ತಿದ್ದೇವೆ. ಅಬ್ದುಲ್ಲನೂ ನಾನೂ ನಮ್ಮ ಹಳ್ಳಿ ಮೂಲೆಯಲ್ಲಿಯೇ ಇರುತ್ತಿದ್ದರೆ ಅಣ್ಣ ತಮ್ಮ ಎಂದು ಪ್ರೇಮದ ಸಡಗರದಲ್ಲಿ ಕುಣಿಯಬಹುದಾಗಿತ್ತು. ಈಗಿನ ಈ ಬೊಂಬಾಯಿ ನಗರದಲ್ಲಿ ನಾವು ಪರಸ್ಪರವಾಗಿ ಕೊಳ್ಳೆ ಹೊಡೆಯುವ ಭಿನ್ನಪಂಥಗಳಿಗೆ ಸೇರಿದವರೆಂದು ಹಳ್ಳಿಯ ಹೆಂಗಸಾದ ನನ್ನ ಮುದಿತಾಯಿಗೆ ಹೇಗೆ ಗೊತ್ತಾಗಬೇಕು?

ಈ ಭಾವನೆಗಳನ್ನು ತಾಯಿಗೆ ತಿಳಿಸುವುದರಲ್ಲಿ ಔಚಿತ್ಯವಿರಲಿಲ್ಲ. ಬರೆದಿದ್ದರೆ ಅವಳ ಭೀತಿ ಮತ್ತೂ ಹೆಚ್ಚುತ್ತಿದ್ದಿತಷ್ಟೆ. "ಇನ್ನು ಕೆಲವು ದಿವಸಗಳಲ್ಲಿ ಖಂಡಿತವಾಗಿ ಬರುತ್ತೇನೆ. ಅಬ್ದುಲ್ಲನನ್ನು ಕರೆತರುವುದಕ್ಕೆ ವಿಶ್ವಪ್ರಯತ್ನ ಮಾಡುತ್ತೇನೆ" ಎಂದಿಷ್ಟೆ ಬರೆದೆ. ಇದಕ್ಕೆ ಅನುಕೂಲವಾಗಿ ಧನಿಗಳೂ ಬಂದು

ಬಿಟ್ಟರು. "ಮಿಸ್ಟರ್ ನಾಯಕ್! ಸದ್ಯಕ್ಕೆ ನಮ್ಮ ಹವಾಟುಗಳನ್ನು ನಿಲ್ಲಿಸಬೇಕೆಂದಿದ್ದೇವೆ. ಈ ಮಾರಾಮಾರಿ ಯಾರಿಗೆ ಬೇಕು? ಹೇಳಿ. ಅದು ನಮ್ಮಂಥವರಿಗಲ್ಲ. ದೇವರ ದಯೆಯಿಂದ ಒಂದಿಷ್ಟು ಕಾಸನ್ನು ಕೂಡಿಸಿಟ್ಟಿದ್ದೇವೆ. ಹೊಟ್ಟೆಗಾಗಿ ದುಡಿಯಬೇಕಾದವರು ದುಡಿಯಬೇಕು. ನಮಗೆ ಇದ್ದುದನ್ನು ಉಳಿಸಿಕೊಂಡರಾಯಿತು. ನಿಮಗೆ ಮೂರು ತಿಂಗಳ ಸಂಬಳವನ್ನು ಧರ್ಮಾರ್ಥವಾಗಿ ಕೊಡುತ್ತೇವೆ. ಹೋಗಿ; ಊರಿಗೆ ಹೋಗಿ; ತಾಯಿಯನ್ನು ಕಂಡು ಸಂತೋಷಪಡಿಸಿರಿ. ಈ ಉರಿ ನಂದಲಿ; ಆಗ ಮತ್ತೊಮ್ಮೆ ತೊಡಗುತ್ತೇವೆ. ಬಂದು ಸೇರಿಕೊಳ್ಳಿ. ನಿಮ್ಮ ಜಾಗ ನಿಮಗಾಗಿಯೇ ಕಾದಿರುವುದು!" ಎಂದು ನನ್ನ ಮೂರು ತಿಂಗಳ ಸಂಪತ್ತನ್ನು ಕೈಯಲ್ಲಿಟ್ಟು ಕಳುಹಿಸಿಕೊಟ್ಟರು. ಅವರು ಹೊಟ್ಟೆಗಾಗಿ ದುಡಿಯಬೇಕಾಗಿರಲಿಲ್ಲ. ದುಡಿಯಬೇಕಾದವರು ನನ್ನಂಥವರು. ಹೊಟ್ಟೆ ಕಾವಲಿಯಂತೆ ಕಾವೇರಿದ. ತಂಪಿಸಬೇಕು. ತಂಪಿಸುವ ಪ್ರಯತ್ನದಲ್ಲಿ ಸಾಯಬೇಕಾದರೆ ಸಾಯಬೇಕು ಎನ್ನುವ ಇವರ ಮಾತಿನ ಧ್ವನಿ ಕರ್ಕಶವಾಗಿ ಕೇಳಿದರೂ ಊರು ಬಿಟ್ಟೋಡುವ ಚಿಂತೆಯಲ್ಲಿದ್ದ ನನಗೆ ಬಿಡುಗಡೆ ಸಿಕ್ಕಿದುದರಿಂದ ಸಮಾಧಾನವಾಗದಿರಲಿಲ್ಲ. ಮರುದಿನವೇ ಟಿಕೇಟು ತೆಗೆದುಕೊಂಡು ಹೊರಡಬಹುದಾಗಿತ್ತು. ಆದರೆ ತಾಯಿಯ ಆಜ್ಞೆ. ಅಬ್ದುಲ್ಲನನ್ನು ಹುಡುಕಬೇಕು! ಈ ಮುಂಚೆ ಅವಕಾಶ ಮಾಡಿಕೊಂಡು ಹುಡುಕಬೇಕಾಗಿದ್ದರೆ, ಈಗ ಇರುವುದೆಲ್ಲ ಅವಕಾಶವೇ! ರಸ್ತೆ ರಸ್ತೆ ಹುಡುಕುವುದಕ್ಕೇನೂ ಆತಂಕವಿರಲಿಲ್ಲ. ತಾನು ಬರೆವ ಮಾತಿನ ಪರಿಣಾಮವೇನಾದೀತೆಂದು ಗೊತ್ತಿದ್ದರೆ ನನ್ನ ತಾಯಿ ಹಾಗೆ ಬರೆಯುತ್ತಿರಲಿಲ್ಲ. "ಹುಡುಕಿದ್ದೇನೆ; ಸಿಕ್ಕಲಿಲ್ಲ" ಎಂದು ನಂಬಿಸುವುದು ಸುಲಭವಾಗಿತ್ತು. ಆದರೆ ತಾಯಿಯ ಪತ್ರದಲ್ಲಿದ್ದ ಒಂದು ಒಕ್ಕಣೆ—ನನ್ನ ಹಾಗೆ ಪಾತುಮ್ಮನೂ ಒಬ್ಬನೇ ಮಗನ ಮೇಲೆ ಆಸೆಯಿಟ್ಟು ದಿನಗಳನ್ನು ನೂಕುತ್ತಿರುವ ಬಡ ವಿಧವೆಯಲ್ಲವೇ?—ಎಂಬುದು ನನ್ನ ಮನಸ್ಸನ್ನು ಕರಗಿಸಿತು. ಈ ತಾಯಿ ನನ್ನ ತಾಯಿ; ಆ ತಾಯಿ ಅಬ್ದುಲ್ಲನನ್ನು ಹೆತ್ತತಾಯಿ. ಇವಳು ಅವಳಲ್ಲಿ ಐಕ್ಯಗೊಂಡಿದ್ದಾಳೆ. ಈ 'ಮಗ' 'ಆ ಮಗ'ನಿಂದ ಭಿನ್ನನಾಗಿರುವುದು ಹೇಗೆ? ಅಬ್ದುಲ್ಲ ಮುಸಲ್ಮಾನ; ನಾನು ಹಿಂದು. ನಾವು ಪೂರ್ವಕ್ಕೆ ಮುಖ ತಿರುಗಿಸಿ ಪ್ರಾರ್ಥನೆ ಮಾಡುವವರಾದರೆ ಅವನ ಧರ್ಮದವರು ಪಶ್ಚಿಮಕ್ಕೆ ನೋಡಿ ನಮಾಜು ಮಾಡುವವರು. ನಾನು ಗೋಪೂಜಕ. ಆತ ಗೋಭಕ್ಷಕ. ಹೊರಗಿನ ಭೇದ ಇಷ್ಟಿದ್ದರೂ ನಾನು ನನ್ನ ತಾಯಿಯ ಮಗನಾಗಿರುವಂತೆ ಅಬ್ದುಲ್ಲ ತನ್ನ

ತಾಯಿಯ ಮಗ. ನನ್ನ ತಾಯಿಗೆ ನನ್ನಲ್ಲಿರುವ ವಾತ್ಸಲ್ಯವನ್ನೂ ಅವನ ತಾಯಿಗೆ ಅವನಲ್ಲಿರುವ ವಾತ್ಸಲ್ಯವನ್ನೂ ತೊಲೆಯಲ್ಲಿಟ್ಟು ತೂಗಿದರೆ ಹೆಚ್ಚು ಕಡಿಮೆ ಕಂಡೀತೆ? ಜೇನು ಯಾವ ಪುಷ್ಪಕೋಶದಲ್ಲಿದ್ದರೂ ಜೇನೆ. ಬಂಗಾರ ಯಾವ ಅದುರಲ್ಲಿದ್ದರೂ ಬಂಗಾರವೆ. ಆ ತಾಯಿಯ ಹಂಬಲು ಹಾರೈಕೆಗಳೂ ಕಣ್ಣೀರು ನಿಟ್ಟುಸಿರುಗಳೂ ಈ ತಾಯಿಯವುಗಳಿಂದ ಬೇರಾಗಿರಬಹುದೆ? ಆಕೆಯ ಪ್ರೀತಿ ಸಂಕಟದ ಎದೆ ಬಡಿತ ನನ್ನ ತಾಯಿಯದಕ್ಕಿಂತ ಕಡಿಮೆ ಆವೇಗವುಳ್ಳುದಾಗಿರಬಹುದೆ? ಎಂದೂ ಇಲ್ಲ. ಮಕ್ಕಳು ಮುಖಕ್ಕೆ ಮುಸುಕು ಹಾಕಿ ಗುಮ್ಮನಾಟವಾಡುವಂತೆ ನಾವು ಧರ್ಮದ ಮುಸುಕಿನಲ್ಲಿ ಪರಸ್ಪರವಾಗಿ ಬೆದರಿಸುತ್ತೇವೆ. ಬೊಂಬಯಿಯಲ್ಲಿ ನಾನು ಹಿಂದು; ಅಬ್ದುಲ್ಲ ಮುಸಲ್ಮಾನ. ನಾನು ಅವನನ್ನು ಹೊಡೆಯಬೇಕು; ಆತ ನನ್ನನ್ನು ತಿವಿಯಬೇಕು. ಆದರೆ ನಮ್ಮ ಹಳ್ಳಿಗೆ ಕಾಲಿಟ್ಟೊಡನೆ ನಾವು ಅಣ್ಣ ತಮ್ಮಂದಿರಲ್ಲವೆ? ನಾವು ಒಡಗೂಡಿದ ಶಾಲೆ; ಹಣ್ಣುತಿಂದ ಚೂರಿಮುಳ್ಳು ಗಿಡ; ಸುತ್ತಿದ ಮಜಲು; ಹಾರಿದ ದರೆ; ಏರಿದ ಗುಡ್ಡ—ಎಲ್ಲವೂ ನಮ್ಮನ್ನು “ಇಲ್ಲಿಯೇ ನಿಮ್ಮ ಮನೆ; ಇಲ್ಲಿಯೇ ನಿಮ್ಮ ಜೀವದ ಬೇರು; ಈ ಹೊಲದ ಮುದ್ದು ಕೂಸುಗಳು ನೀವು; ಒಂದೇ ಹೊಟ್ಟೆಯಿಂದ ಹೊರಟುಬಂದ ಅಣ್ಣ ತಮ್ಮಂದಿರು ನೀವು” ಎಂದು ಕೂಗಿ ಕರೆಯುವಾಗ “ಅಲ್ಲ” ಎನ್ನುವುದು ಸಾಧ್ಯವೇ? ಪಾತುಮ್ಮನಿಗೆ ಪುತ್ರದಾನ ಮಾಡುತ್ತೇನೆ—ಎಂದು ಹುಡುಕಾಡಲು ನಿರ್ಧರಿಸಿದೆ.

ಆದರೆ ಹುಡುಕುವುದು ಎಲ್ಲಿ ಹೇಗೆ? ನೈಬಿಟ್ಟು ಅಲೆಯುವ ಹಾಗಿಲ್ಲ. ಮನ ಬಂದ ಕಡೆ ವಿಚಾರಿಸುವ ಹಾಗಿಲ್ಲ. ನಾನು ಆ ಜಾತಿಯ ಒಬ್ಬನನ್ನು ಹುಡುಕುತ್ತೇನೆಂದರೆ ನನ್ನ ಪ್ರಾಣಕ್ಕೆ ಸಂಚಕಾರ ಆಗಲೂ ಬಹುದು ಅವನು ಇರುವನೋ ಎಲ್ಲಾದರೂ ಇರುವನೋ ಗೊತ್ತಿಲ್ಲ. ಒಂದು ವೇಳೆಗೆ ಗೊತ್ತಾದರೆ ಅವನಿರುವಲ್ಲಿಗೆ ಹೋಗುವುದಾದರೂ ಹೇಗೆ? ಯಾರಿಂದಲಾದರೂ ವಿಳಾಸ ತಿಳಿದು ಪತ್ರ ಬರೆದೆನೆಂದರೆ ಆತ ಉತ್ತರ ಕೊಡುವನೇ? ಒಂದು ವೇಳೆ ಕೊಟ್ಟನೆಂದರೆ ಅವನದೇ ಉತ್ತರ ಎಂದು ನಂಬುವುದು ಹೇಗೆ? ಆತನ ಸಜೀವ ಮೂರ್ತಿ ಕಣ್ಣಮುಂದೆ ಗೋಚರಿಸುವ ವರೆಗೆ ಅವನಿವನನ್ನು ಒಪ್ಪಿಕೊಳ್ಳುವುದಕ್ಕೆ ಆಸ್ಪದವುಂಟೆ? ಆತನಿಲ್ಲಿಗೆ ಬರುವುದುಂಟೆ? ಸಾಧ್ಯವೇ? ತಾಯಿ ದೊಡ್ಡ ಒಗಟನ್ನೆ ಕೊಟ್ಟಿದ್ದಳು. ಬಿಚ್ಚುವುದು ಹೇಗೆ? ತಿಳಿಯಲಿಲ್ಲ.

ನಮ್ಮ ಮಾಗಣೆ ಶ್ಯಾನುಭೋಗರು ಅಣ್ಣಪ್ಪಯ್ಯನವರ ಮಗ ನಾರ್ಣಪ್ಪಯ್ಯನವರು, "ಎ. ಎನ್. ಬಾಳೂರ್ ಕಂಪೆನಿ" ಎಂಬ ಹೆಸರಲ್ಲಿ ಪಿಂಗಾಣಿಯ ಹರದನ್ನು ಸಾಗಿಸುತ್ತಿದ್ದಾರೆಂದು ನನಗೆ ಗೊತ್ತು. ಹಲವು ವೇಳೆ ಅವರು ನನ್ನನ್ನು ಕಂಡುದೂ ಉಂಟು. ಮುಸುಲ್ಮಾನರ ಬೀದಿಯ ಒತ್ತಿನಲ್ಲಿಯೇ ಅವರ ಅಂಗಡಿ ಮಂಡಿ. ಹೋಗುವುದೂ ಬರುವುದೂ ಅಪಾಯಕರ. ನೇರವಾದ ದಾರಿಯನ್ನು ಬಿಟ್ಟು ಸುತ್ತಾಡಿಯಾದರೂ ಬಾಳೂರರಲ್ಲಿಗೆ ಹೋಗಿ ಬರೋಣ; ಎಂದು ತೋರಿತು. ಒಂದೆರಡು ವರ್ಷಗಳ ಹಿಂದೆ ಸಟ್ಟಾ ಆಡುತ್ತಿದ್ದ ಅಬ್ದುಲ್ಲನ ಕತೆಯನ್ನು ಅವರೇ ನನಗೆ ಹೇಳಿದ್ದರು. ವ್ಯಾಪಾರಿಗಳಿಗೆ ತಿಳಿಯದುದಿಲ್ಲ. ಅವರೋದದ ಜಾತಕಗಳಿಲ್ಲ. ಎಂಬ ಕಾರಣದಿಂದ ಬಾಳೂರರ ಪಿಂಗಾಣಿಯ ಮಂಡಿಗೆ ಹೋಗಿ, ಅವರನ್ನು ಕಂಡು ಸ್ವಲ್ಪಕಾಲ ಯೋಗಕ್ಷೇಮಗಳನ್ನಾಡಿ ಹೊರಡುವಾಗ ಮುಖ್ಯ ವಿಷಯವನ್ನೆತ್ತಿದೆ.

"ಯಾರು ಮೋಯಿಯುದ್ದಿನ್ ಬ್ಯಾರಿಯ ಮಗನೆ?" ಎಂದವರು ಅಪಹಾಸ್ಯದ ಸ್ವರದಲ್ಲಿ ಪ್ರಶ್ನಿಸಿದರು.

"ಹೌದು; ಅವನೇ!"

"ಅವನೇನು ರಕ್ತ ಸಂಬಂಧಿಯೆ?"

"ಸ್ನೇಹ ಸಂಬಂಧಿ!"

"ಒಳ್ಳೆಯ ಸ್ನೇಹಿತರನ್ನು ಇಟ್ಟುಕೊಂಡಿದ್ದೀರಿ ನಾಯಕರೆ!" ಎಂದವರು ವಿಕಟವಾಗಿ ನಕ್ಕರು.

"ಹಿಂದಿನ ಪರಿಚಯ ನಾರ್ಣಪ್ಪಯ್ಯಾ! ಹಳೆಯ ಚಟ—ಹಳೆಯ ರೋಗ—ಹಳೆಯ ಸ್ನೇಹ . . . . ಇವುಗಳನ್ನು ಬಿಡುವುದು ಕಷ್ಟವಲ್ಲವೆ?"

"ಅದು ನಿಜವೆ. ಆದರೆ ಈ ಕಾಲ ಹಳತಲ್ಲವಷ್ಟೆ? ಈ ಬೊಡ್ಡಿ ಮಕ್ಕಳು ಪಾಕಿಸ್ತಾನಕ್ಕೆ ಹೋಗುತ್ತಾರೆ. ಹೋಗುವ ಮುಂಚೆ ಹಿಂದುಸ್ಥಾನವನ್ನು ಹಾಳುಗೆಡವಿ ಹೋಗುತ್ತಾರೆ. ಸಾಧ್ಯವಿರುವಷ್ಟು ಜನಗಳನ್ನು ಕೊಂದು ಹೋಗುತ್ತಾರೆ. ಮತ್ತೆ ನಿನ್ನ ಅಬ್ದುಲ್ಲನನ್ನೇನು ಮಾಡುವೆ? ಕೊರಳಿಗೆ ಕಟ್ಟಿಕೊಳ್ಳುವೆಯೊ? ಅಥವಾ ಪಾಕಿಸ್ಥಾನಕ್ಕೆ ವಲಸೆ ಹೋಗುವೆಯೊ?" ಎಂದು ಜಬರ್ದಿನಿಂದ ನನ್ನನ್ನು ಪ್ರಶ್ನಿಸಿದರು.

"ಎಲ್ಲ ಧರ್ಮಗಳಲ್ಲಿಯೂ ತಿಳಿಗೇಡಿಗಳಿದ್ದಾರೆ!"

"ನಿಜ; ಆದರೆ ಹೀಗೂ ಮಾಡಬೇಕೆ? ಹಿಂದುಗಳು ಹೀಗೆಂದೂ ಮಾಡಿಯಾರೇ?" ಎಂದು ಬಾಳೂರರು ನೂರಾರು ಉದಾಹರಣೆಗಳನ್ನಿತ್ತು ಮುಸಲ್ಮಾನ ಧರ್ಮವೊಂದೇ ಪಾತಕ ಧರ್ಮವೆಂದೂ, ಹಿಂದೂ ಧರ್ಮ ವೊಂದೇ ಪಾವನ ಧರ್ಮವೆಂದೂ ಸಿದ್ಧಾಂತ ಪಡಿಸಿದರು. ನಾನವರನ್ನು ಆಕ್ಷೇಪಿಸಲಿಲ್ಲ. ಅವರ ಸಿದ್ಧಾಂತ ನನಗೆ ಮೆಚ್ಚಲೂ ಇಲ್ಲ. ನಾನು ಬಂದುದು ಅಬ್ದುಲ್ಲನ ತುಬ್ಬಿಗೆ. ಅವನು ಬೇರೇನಾಗಿದ್ದರೂ ಚಿಂತೆಯಿಲ್ಲ. ಅಬ್ದುಲ್ಲ ನಾಗಿದ್ದರೆ ಸಾಕು. ನಾನು ಬೊಂಬಯಿಗೆ ಹೊರಟೆಂದು, ನನ್ನನ್ನು ಮನೆಗೆ ಬರಮಾಡಿ ಎಳೆನೀರು ತನಿಹಣ್ಣುಗಳನ್ನು ಕೊಟ್ಟು ಕಣ್ಣೀರಿನ ಸೇಸೆಯಿಂದ ಹರಸಿ ಕಳುಹಿಸಿದ ಪಾತುಮ್ಮನ ಮಗ ಅಬ್ದುಲ್ಲನೆಂದಾದರೆ ಸಾಕು. ಒಳ ಭಾವನೆಗಳನ್ನು ನಾನು ಪ್ರಕಟಿಸಲಿಲ್ಲ. ಒಂದು ನಿಮಿಷ ಮೌನಿಯಾಗಿದ್ದ ನನ್ನೆದೆಯನ್ನೋದಿ ಪಿಂಗಾಣಿಯ ವ್ಯಾಪಾರಿಗಳು ಹೀಗೆಂದರು:

"ಮಿಸ್ಟರ್ ನಾಯಕ್! ಈ ಹುಚ್ಚಾಟ ಬೇಡ. ಅಬ್ದುಲ್ಲ ಇದ್ದಾನೋ .... ಈ ಮುಂಚೆ ಯಾವುದಾದರೊಂದು ಚರಂಡಿಯಲ್ಲಿ ಬಿದ್ದು ಕೊಳೆತು ಹೋಗಿದ್ದಾನೊ? ಯಾರು ಬಲ್ಲರು? ಆತ ಶುದ್ಧ ಪೋಕರಿಯಾಗಿದ್ದಾನೆ. ಹಸಿ ಪುಂಡನಾಗಿದ್ದಾನೆ. ಇಂಥವರನ್ನು ಪುಸಲಾಯಿಸುವ ಪಾಕಿಸ್ಥಾನಿಗಳು ತುಂಬ ಇದ್ದಾರೆ. ದುಡ್ಡು ಕೊಡುತ್ತಾರೆ; ಹೆಂಡ ಕುಡಿಸುತ್ತಾರೆ. ಶಸ್ತ್ರ ಕೊಡುತ್ತಾರೆ. ಕಾಫರರನ್ನು ಕೊಲ್ಲಿ! ಸೂರೆ ಮಾಡಿ! ಸುಲಿಗೆ ಮಾಡಿ! ಎಂದು ಕಳುಹಿಸುತ್ತಾರೆ. ಇಂಥವರ ಕಾರಣದಿಂದ ಬೊಂಬಯಿ ದೊಡ್ಡ ರೌರವವಾಗಿದೆ. ದುಡ್ಡಿರುವವರು ಮದ್ದತ್ತು ಮಾಡಿ ಹಿಂದೆ ಉಳಿದುಬಿಡು ತ್ತಾರೆ. ಇವನಂತಹ ಅನ್ನದಾಸರು ಸಾವಿರಾರು ಮುಂದಿಯನ್ನಿಟ್ಟುಕೊಂಡು ತಮ್ಮ ಹಟವನ್ನು ಮೆರೆಯಿಸುತ್ತಾರೆ. ಹಾಗಾದರೆ ನನ್ನಂಥವರು ಮುಸಲ್ಮಾ ನರ ನೆರೆಯಲ್ಲಿಯೇ ಹೇಗೆ ವಾಸಿಸುತ್ತಾರೆ? ಎಂದು ನೀನು ಕೇಳಬಹುದಲ್ಲ. ನಮ್ಮದೂ ಅದೇ ವಿದ್ಯೆ. ಮುಳ್ಳನ್ನು ಮುಳ್ಳಿನಿಂದ ಚುಚ್ಚಿ ತೆಗೆಯಬೇಕು. ಒಂದೇಟಿಗೆ ಹತ್ತೇಟು ಕೊಡಬೇಕು ಎನ್ನುವುದೇ ನಮ್ಮ ಇಂದಿನ ಮಂತ್ರವಾ ಗಿರಬೇಕು. ನಿನ್ನ ಗಾಂಧಿಯ ಅಹಿಂಸೆ ಈ ಮೃಗಗಳ ಮಧ್ಯದಲ್ಲಿ ಅಲ್ಲ. ಅದು ಬ್ರಿಟಿಷರ ಮಧ್ಯದಲ್ಲಿ ಆಯಿತು. ಅವರು ದುಷ್ಟರಾದರೂ ಮನುಷ್ಯರಪ್ಪ . ." ಎಂದು ರಾಜಕೀಯಕ್ಕೂ ಇಳಿದರು. "ಹಾಗಾದರೆ ನಿಮಗೆ ಅಬ್ದುಲ್ಲನ ಸುಳಿವು ಹತ್ತಲಿಲ್ಲ!" ಎಂದು ಮಾತಿಗೆ ತಡೆ ಹಾಕುವುದರಲ್ಲಿದ್ದೆ.

"ನಿನ್ನ ಅಬ್ದುಲ್ಲನೋ .... ಅವನ ಪುರಾಣವನ್ನು ಬಿಚ್ಚುತ್ತೇನೆ"

ಎಂದವರು ಮೊದಲು ಮಾಡಿದರು: "ಒಂದು ತಿಂಗಳ ಹಿಂದಿನ ಕತೆಯಿದು. ರಾತ್ರಿ ಒಂಬತ್ತು ಘಂಟೆಯಾಗಿತ್ತು. ಅಂಗಡಿ ಬಾಗಿಲುಗಳು ಬೀಳುವುದರಲ್ಲಿದ್ದುವು. ಫಕ್ಕನೆ ಹತ್ತೆಂಟು ಜನ ಓಡಿಬಂದರು. ಬಾಗಿಲನ್ನೆಳೆದು ಬಲಾತ್ಕಾರದಿಂದ ನುಗ್ಗು ವುದರಲ್ಲಿದ್ದರು. ಕಾಯುತ್ತಿದ್ದ ಜವಾನನನ್ನು ಕೊರಳೊತ್ತಿ ರಸ್ತೆಗೆ ಒಗೆದರು. ಒಳಗೆ ಕಾಲಿಟ್ಟರು. ನನಗೀ ಮಕ್ಕಳ ಬುದ್ಧಿ ತಿಳಿಯದೇ? ನಾನು ಹತ್ತೆಂಟು ದಡಿಗರನ್ನು ಸಾಕುತ್ತೇನೆ. ಕೋವಿ ಗುಂಡುಗಳನ್ನು ಒದಗಿಸುವುದೇನೂ ಕಷ್ಟವಿಲ್ಲ. ಕರೆನ್ಸಿ ನೋಟುಗಳಿಂದ ಕೋವಿ ಗುಂಡುಗಳು ತಯಾರಾಗುತ್ತ ವಲ್ಲವೆ? ನನ್ನ ಕಡೆಯವರು ಬಂದು ಈ ಪುಂಡರ ಮೇಲೆ ಬಿದ್ದರು. ಎಂತಹ ಒಳ್ಳೆಯ ಮದ್ದು? ಸರಕಾರದಿಂದ ಸಹಾಯಪಡೆಯಬೇಕಾಗಿದ್ದರೆ, ಪುಂಡ ರಿಂದ ಸುಲಿಗೆ ಮಾಡಿಸಿಕೊಂಡು, ಕೊಲೆ ಮಾಡಿಸಿಕೊಂಡು, ಫಿರ್ಯಾದಿ 'ಹೂಡಬೇಕು' ನನ್ನದು ಸುಲಭೋಪಾಯ . . . . ಗುದ್ದಿಗೆ ಗುದ್ದು . . . ಸುಲಿಯ ಬಂದವರು ನನ್ನ ಜನಗಳನ್ನು ಕಂಡು ಅಲ್ಲಿಯೇ ಮಾಯವಾಗಿ ಬಿಟ್ಟರು. ಅವರ ಪೈಕಿ ಒಂದು ಜನಕ್ಕೆ ನಿನ್ನ ಅಬ್ದುಲ್ಲನ ಚಹರೆಯೇ ಇತ್ತು. ಹಿಂದೆ ಕೇಳಿದುದೂ ಅಂದು ಕಂಡುದೂ ಒಂದೇ ತರ. ಅವನೇ ಆತನೆಂಬುದ ರಲ್ಲಿ ನನಗಂತೂ ಸಂದೇಹವಿಲ್ಲ. ಅವಳ ಮಗ . . . ಇವನ ಮಗ ಎಂದು ನೋಡುವ ಕಾಲ ಇದಲ್ಲ. ಈ ದುಷ್ಟರ ಕತ್ತಿ ಕೋವಿಗಳಿಗೆ ಬಲಿಯಾಗಿ ಬಿದ್ದ ಈ ಬಡವಾಯಿಗಳಿಗೆ ತಾಯಿತಂದೆಗಳಿಲ್ಲವೆ? ಎಷ್ಟೋ ಜನರನ್ನು ಕೊಂದಿದ್ದಾರೆ. ಇವರ ತಾಯಿತಂದೆಗಳ ವಿಷಯದಲ್ಲಿ ಮರುಕಪಟ್ಟವರಾರ? 'ಶ್ಠರಂ ಪ್ರತಿ ಶಾರ್ಠ್ಯಂ!' ಶಾಸ್ತ್ರ ಹಳೆಯದಾದರೂ ಅದರಲ್ಲಿರುವ ಪ್ರತಿಯೊಂದು ಮಾತು ಹೊನ್ನಿಗಿಂತ ಮೇಲು. ಅವಿವೇಕಮಾಡಬೇಡಿನಾಯಕರೇ . . . . ನಿಮಗೂ ಒಬ್ಬಳು ತಾಯಿಯಿದ್ದಾಳೆ. ಪಾತುಮ್ಮನ ತಾಯಿಗೆ ಪಾಕಿಸ್ಥಾನದಲ್ಲಿ ಸ್ಥಳವುಂಟು; ನಿಮ್ಮ ತಾಯಿಗೆ?"

"ಹಾಗಾದರೆ ಆ ಆಸೆಯನ್ನು ಬಿಟ್ಟು ಬಿಡುತ್ತೇನೆ" ಎಂದು ಬಾಳೂರರ ಸಮಾಧಾನಕ್ಕಾಗಿ ಹೇಳಿ ಮನಸ್ಸಿನಲ್ಲಿ ಅಬ್ದುಲ್ಲನ ಸ್ಮರಣೆಯನ್ನೆ ಆತುಕೊಂಡು ಅಲ್ಲಿಂದ ಹೊರಟೆ. ಬಾಳೂರರು ನನ್ನನ್ನು ಒಬ್ಬನನ್ನೇ ಬಿಡಲಿಲ್ಲ. "ನಿಮಗೆ ಅಬ್ದುಲ್ಲನ ತಾಯಿಯ ಮೇಲೆ ಕನಿಕರವಾದರೆ ನನಗೆ ನಿಮ್ಮ ತಾಯಿಯ ಮೇಲೆ ಕನಿಕರ. ಇನ್ನು ಮುಂದೆ ನೀವಿಲ್ಲಿಗೆ ಬರಬೇಡಿ. ನಾನಾದರೊ ಸಭ್ಯರಿಗೆ ಸಭ್ಯರು . . . ಪುಂಡರಿಗೆ ಪುಂಡರು. ಬರೆಯುವ ಲೆಕ್ಕಣಿಕೆ ನಿಮ್ಮ ಎದೆ ಧೈರ್ಯವನ್ನೆಲ್ಲ ಹೀರಿಬಿಟ್ಟಿದೆ." ಎನ್ನುತ್ತಾ ಟ್ರಾಮು ಒಂದಿ ನಿಲ್ಲುವಲ್ಲಿಯವರೆಗೆ

ನನ್ನೊಡನೆಯೇ ಬಂದರು. ಒಂದು ಬಂಡಿ ಆಗಲೆ ಹೋಗಿತ್ತು. ಇನ್ನೊಂದು ಬರಲು ಸ್ವಲ್ಪ ತಡವಿತ್ತು. "ಜಾಗ್ರತೆ! ಜಾಗ್ರತೆ! ಸುತ್ತಲೂ ಕಣ್ಣು ತಿರುಗಿಸಿ ಕೊಳ್ಳಿ . . . ಅನೇಕ ವೇಳೆ ಇಂತಹ ಸ್ಥಳಗಳಲ್ಲೆ ರಕ್ತಪಾತವಾಗುತ್ತದೆ . . " ಎಂದವರು ಜಾಗ್ರತೆಕೊಟ್ಟರು. ಇರಬಹುದು. ಅಲ್ಲವೆನ್ನುವಷ್ಟು ಜ್ಞಾನ ಮೂಢ ಪ್ರಾಣಿಯಾದ ನನಗುಂಟೇ? ಬಾಳೂರರು ಹೇಳಿದಂತೆ ಸುತ್ತಲೂ ಕಣ್ಣು ಹೊರಳಿಸುತ್ತಾ ಇದ್ದೆ.

ಒಂದು ನಿಮಿಷ ಆಗಿರಲಿಲ್ಲ. ನನ್ನ ಕಣ್ಣಿಗೆ ಕಾಣುವಷ್ಟು ದೂರದಲ್ಲಿ ಏನೋ ಗಲಭೆಯಾದಂತೆ ತೋರಿತು. ಜನರು ಓಡತೊಡಗಿದರು ಅದೊಂದು ಕಿರಿಯೋಣಿ. ಹುಟ್ಟಿನಿಂದ ಜೇನು ನೊಣಗಳು ಹಾರುವಂತೆ ನೂರಾರು ಮಂದಿ ಓಡಿಬರುತ್ತಿದ್ದರು. ಸಿಳ್ಳುಗಳೂ ಕೇಳಿಸಿದುವು ಭಯವಿಲ್ಲ. ಓಡಬೇಡಿರಿ ನಾಯಕರೇ! ಈ ಪರಾರದ ಪೊಲೀಸು ಪಡೆಗಳಿಗೆಲ್ಲ ನನ್ನ ಗುರುತಿದೆ ನಾನು ಜತೆಯಲ್ಲಿರುವುದರಿಂದ ನಿಮಗೆ ಭಯವಿಲ್ಲ . . . ಎಂದವರು ಪರಿಸ್ಥಿತಿಯ ವಿಷಮತೆಯನ್ನು ತಿಳಿಸಿದರು. ಅವರ ಮಾತು ನನ್ನ ಎದೆಯನ್ನೂ ಕದಡಿತು. ಬಾಳೂರರ ಬಳಿಯಲ್ಲಿದ್ದೇನೆ ಎಂಬುದೊಂದೇ ನನ್ನ ಧೈರ್ಯಕ್ಕೆ ಕಾರಣ ವಾಗಿತ್ತು ಕದಲದೆ ನಿಂತೆ . . . . ಅಳುಕದವನಂತೆ ನಿಂತೆ . . . . ಗಲಭೆ ಅಲ್ಲಿಂದಲ್ಲಿಗೇ ನಿಲ್ಲುವ ಹಾಗೆ ತೋರಿತು. ಓಡುವ ಜನ ಆ ಕಡೆಗೇ ಓಡು ತ್ತಿದ್ದರಲ್ಲದೆ ಈ ಕಡೆಗೆ ಬರುತ್ತಿರಲಿಲ್ಲ. ಆದುದರಿಂದ ನನ್ನ ಧೈರ್ಯದ ಭಂಡವಳ ಹೆಚ್ಚುವುದಕ್ಕೆ ತೊಡಗಿತು. ಓಡುವವರನ್ನು ನೋಡುವುದರಲ್ಲಿ ಆಸಕ್ತಿಯೂ ಹುಟ್ಟಿತು. ಹಲವು ಟೊಪ್ಪಿಗಳು, ಹಲವು ಮುಂಡಾಸುಗಳು, ಕಂಡು ಕಾಣದಾದವು ಆದರೆ ಒಂದು ಮುಖ ಕಂಡು ಕಾಣದಾಗಲಿಲ್ಲ. ನನ್ನ ನೆನಪನ್ನು ಕೆದರುವ ಹಾಗೆ ತೋರಿತು. ಎಲ್ಲೊ ನೋಡಿರಬಹುದಾದ ಮುಖವೆಂಬ ಅನುಮಾನವಾಯಿತು ಓಡಿದ ನೂರಾರು ಮಂದಿಯಲ್ಲಿ ಅದೊಂದೇ ಮುಖ ನನ್ನ ಗಮನವನ್ನು ಸೆಳೆಯಬೇಕೆ? ಖಂಡಿತ . . . . ಈ ಮುಖವನ್ನು ಕಂಡಿದ್ದೇನೆ . . . ಅಬ್ದುಲ್ಲನನ್ನೇ ಹೋಲುವ ಮುಖ . . . ಎತ್ತರವೂ ಅಷ್ಟೆ . . . ನಡೆಯುವ ಹದನೂ ಹಾಗೆಯೆ . . . ಮುಖದಲ್ಲೇನೋ ಸ್ವಲ್ಪ ವ್ಯತ್ಯಾಸವಾದಂತಿದೆ. ಆದರೆ ಕೆರೆಕೋಡಿಯ ಪಾತುಮ್ಮನೆಂಬ ಬಡ ವಿಧವೆಯ ಮಗನ ಗುರುತುಕೊಡದಂತಹ ವ್ಯತ್ಯಾಸವೇನೂ ಆಗಿರಲಿಲ್ಲ. ಸಂದೇಹವಿಲ್ಲ, ಕೂಗಿಬಿಡುತ್ತೇನೆ, . . . ಆತನ ತಾಯಿಯ ಕರೆಯನ್ನು ಅವನ ಕಿವಿಗೆ ಮುಟ್ಟಿಸಿ ಬಿಡುತ್ತೇನೆ. ಇಷ್ಟಾದರೆ ಕೆಲಸ ತೀರಿತು. ತಾಯಿಯ

ಆಜ್ಞೆಯನ್ನು ನೆರವೇರಿಸಿದಂತಾಯಿತು . . . ಎಂದು ಎಣಿಸುತ್ತಾ ಬಳಿಯಲ್ಲಿದ್ದ ಬಾಳೂರರ ನೆನಪಿಲ್ಲದೆ, ಉಚ್ಚ ಸ್ವರದಲ್ಲಿ "ಅಬ್ . . ದು . ." ಎಂದೆರಡಕ್ಷರ ಗಳನ್ನು ಒದರಿವೆನೋ ಇಲ್ಲವೊ . . . ಬುಸುಗುಟ್ಟುವ ಸರ್ಪನಂತೆ ಪಿಂಗಾಣಿಯ ವ್ಯಾಪಾರಿಗಳು ನನ್ನ ಮೇಲೆ ನೆಗೆದರು. ಸೊಂಟಕ್ಕೆ ಬಲವಾಗಿ ಚಿವುಟಿದರು. "ಮುಚ್ಚು ಬಾಯಿ!" ಎಂದು ರೋಷಾವೇಶದಿಂದ ಗದರಿಸಿದರು. ಅವರ ಕೋಪವು ಅಬ್ದುಲ್ಲ ಎಂಬ ನಾಮದ ಕೊನೆಯಕ್ಷರವನ್ನು ನನ್ನ ಗಂಟಲಿನಿಂದ ಕಿತ್ತು ನುಂಗಿಬಿಟ್ಟಿತು. ಮಹಾಪರಾಧ ಮಾಡಿದವನಂತೆ ನಾನು ಬೆಪ್ಪನಾದೆ. ಬಾಳೂರರು "ಏನು ಅವಿವೇಕ ಇದು ನಾಯಕರೇ! ಆ ಹೆಸರನ್ನು ಎತ್ತಿದ್ದರೆ ಏನಾಗುತ್ತಿದ್ದಿತೆಂದು ಬಲ್ಲಿರಾ? ಆ ದುಷ್ಟರ ನೋಟ ನಮ್ಮ ಮೇಲೆ ಬೀಳ ಬಹುದಾಗಿತ್ತು. ಇಲ್ಲೆ ಬಂದು ನಿಂತ ಹಿಂದೂ ಪ್ರಯಾಣಿಕರು ಖತಿಗೊಂಡು ನಮ್ಮಮೇಲೆ ಬೀಳಬಹುದಾಗಿತ್ತು. ಹಿಂದಿನ ಕಾಲದಲ್ಲಿ ಅವರವರ ವೇಷದಿಂದ ಅವರವರ ಧರ್ಮವನ್ನು ಕಂಡುಹಿಡಿಯ ಬಹುದಾಗಿತ್ತು. ಈ ಮಾರಾಮಾರಿ ಆರಂಭವಾದ ಮೇಲೆ, ಹಿಂದುಗಳಾರು? ಮುಸಲ್ಮಾನರಾರು? ಶತ್ರುಗಳಾರು? ಮಿತ್ರರಾರು? ತಿಳಿಯುವುದು ಕಷ್ಟವಾಗಿದೆ. ಒಂದು ಜಾತಿ ಇನ್ನೊಂದು ಜಾತಿಯ ವೇಷದಲ್ಲಿ ಸಂಚರಿಸುತ್ತಿದ. ಇಷ್ಟೂ ತಿಳಿಯದೆ ನಿಮಗೆ? ನಿಮಗೆ ಅಬ್ದುಲ್ಲನ ಹುಚ್ಚು ಹಿಡಿದಿದೆ. ಊರಿಗೆ ಸುಖವಾಗಿ ತಲಪಿದ ಮೇಲೆ ಅಬ್ದುಲ್ಲನ ಸಹಸ್ರ ನಾಮವನ್ನು ಜಪಿಸಿದರಾಯಿತು" ಅವರಿಷ್ಟು ಹೇಳುವಷ್ಟ ರಲ್ಲಿ ಟ್ರಾಮು ಬಂತು. ಜನರ ಒತ್ತಾಟ ಬಹಳವಾಗಿತ್ತು. ಸ್ಥಳ ಸಿಕ್ಕಿದರೆ ಬದುಕಿದೆ ಎಂದು ಫಕ್ಕನೆ ಒಳಗೆ ಹಾರಿಬಿಟ್ಟೆ. ಟ್ರಾಮು ಹೊರಟಿತು. ಬಾಳೂರರಿಗೆ ಒಂದು ನಮಸ್ಕಾರಕೊಡುವುದಕ್ಕೂ ಅವಕಾಶವಿರಲಿಲ್ಲ.

ಟ್ರಾಮಿನ ಒಳಗಿದ್ದವರು ನಗುತ್ತಿದ್ದರು. ಯಾರೋ ತುಂಟ ಮಕ್ಕಳು ಪಟಾಕಿ ಸುಟ್ಟರೆಂದೂ ಆ ಧ್ವನಿಕೇಳಿ ಬೀದಿಯುದ್ದಕ್ಕೂ ಜನರು ಓಡಿದರೆಂದೂ, ಪೋಲೀಸರು ಬರಬೇಕಾಯಿತೆಂದೂ ಕೊನೆಗೆ ಯಾವ ಅವಾಂತರವೂ ಆಗಲಿಲ್ಲ ವೆಂದೂ ಒಳಗೆ ಕುಳಿತವರೊಬ್ಬರು ಆಡುತ್ತಿದ್ದರು. ನನಗೆ ಅದನ್ನು ಕೇಳುವ ಕುತೂಹಲವಿರಲಿಲ್ಲ. ಕೇಳಬಹುದಾಗಿದ್ದರೆ ಅಬ್ದುಲ್ಲನ ಸಮಾಚಾರವನ್ನು ಕೇಳುತ್ತಿದ್ದೆ. ಅಬ್ದುಲ್ಲ ಅಲ್ಲಿದ್ದನೇ? ಎಂದು ಪ್ರಶ್ನಿಸುತ್ತಿದ್ದೆ. ನನಗೆ ಅಬ್ದುಲ್ಲ ಬಾಲ್ಯಸ್ನೇಹಿತ, ಅವನಿಗೇನಾಗಬೇಕು? ಟ್ರಾಮಿನ ಒಳಗಿದ್ದವರೆಲ್ಲ ನನ್ನ ಧರ್ಮ ದವರು. ಆದರೂ ನನ್ನನ್ನು ಸಂದೇಹ ದೃಷ್ಟಿಯಿಂದ ನೋಡಿದರು; ಆಪಾದ ಮಸ್ತಕವಾಗಿ ನೋಡಿದರು. ವೇಷಪಲ್ಲಟಿಸಿದ ಕಳ್ಳನೇನೋ ಎಂದು ಪರೀಕ್ಷಿಸು

ವಂತೆ ನೋಡಿದರು. ನಾನು ಚಿಕ್ಕವನಾಗಿದ್ದಾಗ ತಾಯಿ ಪ್ರೀತಿಯಿಂದ ತೊಡಿಸಿದ ಒಂಟಿ ನನ್ನನ್ನು ಆ ದಿನ ಬದುಕಿಸಿತು.

ಬಾಳೂರರಲ್ಲಿಗೆ ಹೋದುದರಿಂದ ಮತ್ತೆ ಯಾವ ಲಾಭವಾಗದಿದ್ದರೂ ಒಂದು ತಿಳಿವಳಿಕೆಯಾಯಿತು. ದ್ವೇಷಭಾವ ಮೈಯನ್ನು ಮಾತ್ರ ಅಂಟಿರುವುದಲ್ಲ. ಹಲವರ ಜೀವದ ಆಳದಲ್ಲಿ ಬೇರುಬಿಟ್ಟಿದೆ. ಒಬ್ಬನಿಗೆ ಇನ್ನೊಬ್ಬನಲ್ಲಿ ನಂಬಿಕೆಯಿಲ್ಲ. ಒಂದು ಧರ್ಮದವನು ಇನ್ನೊಂದು ಧರ್ಮದವನು ಬದುಕಲು ಪಾತ್ರವಾದ ವ್ಯಕ್ತಿಯೆಂದು ಎಣಿಸಲಾರ. ಆತನಲ್ಲಿ ಗುಣವಿರಬಹುದೇ? ಹುಡುಕಲಾರ. ಇದ್ದರೆ ಆ ಗುಣವು ಗುಣವೆಂದು ಒಪ್ಪಲಾರ. ಅನ್ಯಧರ್ಮೀಯನಲ್ಲಿ ಗುಣವನ್ನರಸುವವನು ಸ್ವಧರ್ಮದ್ರೋಹಿ ಎನ್ನುವಂತಹ ಪಾಪ ಬುದ್ಧಿಯನ್ನು ಬೆಳೆಯಿಸಿಕೊಂಡಿದ್ದಾರೆ ಜನರು ಈ ಯಾತನಾಮಯವಾದ ಅನುಭವವು ನನಗಾದುದು ಇಂದೇ. ಶತ್ರುಗಳು ಅಭಿಯೋಗಿಸುವರೆಂಬ ನಿರೀಕ್ಷಣೆಯಿಂದ ಕೋಟೆಗಾವಲಿನ ಭಟರು ಎಚ್ಚರದಲ್ಲಿರುತ್ತಾರೆ. ಸೈನಿಕರು ಕೋವಿಮದ್ದುಗಳನ್ನು ಬೆಚ್ಚಗಾಗಿ ಇಡುತ್ತಾರೆ. ಹಾಗೆ ಹೆಚ್ಚು ಜನರೂ ತಮ್ಮ ದುರ್ಭಾವನೆಗಳನ್ನು ಬೆಚ್ಚಗಾಗಿ ಕಾದುಕೊಂಡಿದ್ದಾರೆ. ಇಷ್ಟಾದ ಮೇಲೆ ನನ್ನಂಥವರು ಮಾಡುವುದಕ್ಕೇನೂ ಇಲ್ಲ. ಸಾಧ್ಯವಾದರೆ ತಿವಿಯುವುದು. ಇಲ್ಲವಾದರೆ ಪಲಾಯನ ಮಾಡುವುದು. ನಾನಲ್ಲಿಗೆ— ಬಾಳೂರರಲ್ಲಿಗೆ, ಹೋಗಿದ್ದಾಗ ಅಬ್ದುಲ್ಲನಂಥವನೊಬ್ಬನನ್ನು ಕಂಡೆ. ನನ್ನ ಹುಚ್ಚು ಮುಮಂತೆ ಅಬ್ದುಲ್ಲನ ರೂಪವನ್ನು ಹೊಂದಿರಬಹುದು. ಮನಸ್ಸಿನೊಳಗೆ ಅಬ್ದುಲ್ಲನ ಚಿತ್ರವೊಂದೇ ಇರುವಾಗ ಕಂಡವರೆಲ್ಲಾ ಅಬ್ದುಲ್ಲರಂಗಿ ಕಾಣುತ್ತಿರುವುದು ಸೋಜಿಗವೇನೂ ಅಲ್ಲ. ಬಾಳೂರರ ಮಾತೇ ನಿಜವಿರಬಹುದು. ಸ್ವಧರ್ಮೀಯರ ಮಧ್ಯದಲ್ಲಿ ಎಂತಹ ಸ್ಥಿತಿಯಿದೆ ಎಂಬ ಅನುಭವ ನನಗಾಗಿದೆ. ಅಬ್ದುಲ್ಲನ ಧರ್ಮಬಂಧುಗಳ ಮಧ್ಯದಲ್ಲಿ ಎಂತಹ ಅಗ್ನಿಕುಂಡ ಉರಿಯುತ್ತಿದೆಯೊ? ಯಾರು ಬಲ್ಲರು? ನಾನು ಅವನನ್ನು ಕಾಣುವ ಹಾಗಿಲ್ಲ; ಅವನು ನನ್ನನ್ನು ಹುಡುಕಿ ಬರುವ ಹಾಗಿಲ್ಲ. ನಿರಪಾಯದ ಎಲ್ಲೆಯಿಂದತ್ತ ಕಾಲಿಡುವುದಕ್ಕೆ ನಾನು ಸಿದ್ಧನಾಗಿಲ್ಲ. ಅವನು ಹೇಗೆ ಸಿದ್ಧನಾಗಿದ್ದಾನು? ಅಥವಾ ಬಾಳೂರರು ಪ್ರತ್ಯಕ್ಷ ಜ್ಞಾನದಿಂದ ಹೇಳಿದುದು ಸತ್ಯವಾಗಿದ್ದರೆ ಆ ಅಬ್ದುಲ್ಲನಿಂದು ನರರೂಪದ ರಾಕ್ಷಸನಾಗಿಯೇ ಇರಬೇಕು. ಅವನ ತಳ್ಳಿ ನನಗೇಕೆ?

x x x x

ನಾನು ಬಾಳೂರರನ್ನು ಕಂಡುಬಂದ ಮರುದಿನವೇ ನಗರದ ಕೆಲಭಾಗ ಗಳಲ್ಲಿ ಅವಾಂತರಗಳಾದುವಂತೆ. ಅನಾಯು ಸ್ಥಳಗಳಿಂದ ಜನರು ಬುಡಕಿತ್ತು ಹೋಗತೊಡಗಿದರು. ಒಂದು ಮೋಟಾರ್ ಬಂಡಿಯನ್ನೇರಿದ ಕೆಲ ಹತ್ಯಾಕಾರಿ ಗಳು ಉಪ್ಪಕ್ಕೂ ಗುಂಡು ಹಾರಿಸುತ್ತಾ ನಡೆದರೆಂದೂ ಹತ್ತೆಂಟು ಜನರನ್ನು ಕೊಂದರೆಂದೂ ನೂರಾರು ಜನರನ್ನು ಗಾಯಗೊಳಿಸಿದರೆಂದೂ ಕಾರನ್ನು ಎಲ್ಲಿಯೋ ಒಗೆದು ಮಹಾನಗರದ ಸಂದಣಿಯ ಮಧ್ಯದಲ್ಲಿ ತಲೆತಪ್ಪಿಸಿಕೊಂಡ ರೆಂದೂ ಸುದ್ದಿ ಹರಡಿತು. ರಕ್ತ ಕುದಿಸುವ ಸುದ್ದಿ. ಇವರಾರು? ಎಂದು ಕೇಳಬೇಕಾಗಿಲ್ಲ. ಹೇಳಬೇಕಾಗಿಲ್ಲ ಒಂದು ಜಾತಿಯ ಜನರು — ಇನ್ನೊಂದು ಜಾತಿಯವರು, ಎಂದು ಸರಕಾರದವರು ಮರೆಮಾಜಲು ಯತ್ನಿಸಿದರು. ಈ ಪಾಪಿಗಳು ಹಿಂದುಗಳೆಂದು ಮುಸಲ್ಮಾನರಿಗೂ ಮುಸಲ್ಮಾನರೆಂದು ಹಿಂದು ಗಳಿಗೂ ಖಂಡಿತವಾಗಿ ಗೊತ್ತಿತ್ತು. ತಪ್ಪು ನಮ್ಮದಲ್ಲ ಎಂಬುದು ಮನುಷ್ಯರ ಮೊದಲಿನ ಸಿದ್ಧಾಂತ ಆ ಮೇಲೆ ಇತರರೇ ತಪ್ಪುಗಾರರೆಂದು ಹೇಳಬೇಕಾಗಿಲ್ಲ. ಇಂತಹ ಅಪರಾಧ ಮಾಡಿದವರಿಗೆ ಶಿಕ್ಷೆಯೇನೆಂಬುದೂ ವ್ಯವಹಾರ ನೀತಿಯಲ್ಲಿ ಬರೆದೇ ಇದೆ ಅಲ್ಲಿ ಅವರು ಕೊಲೆಪಾತಕ ಮಾಡಿದರೆ ಇಲ್ಲಿ ನಾವು ಕೊಲೆ ಮಾಡಬೇಕೆಂಬುದು ಈ ಶಾಸ್ತ್ರಕ್ಕೆ ಸಮ್ಮತವೇ ಆಗಿದೆ

ಮುಂದಿನ ದಿನಗಳು ಹೇಗೆ ಕಳೆದಾವೋ ನನಗೆ ಯೋಚನೆ ಹಿಡಿ ಯಿತು. ಜನರು ಓಡಾಟಕ್ಕೆ ತೊಡಗಿದ್ದಾರೆ ಪೋಲೀಸರೂ ದಂಡಾಳು ಗಳೂ ಸರ್ಪಗಾವಲನ್ನಿಟ್ಟಿದ್ದಾರೆ. ಅಪ್ಪಿತಪ್ಪಿ ಒಂದಡಿ ಅತ್ತಿತ್ತ ಇಟ್ಟರೆ ಅಪಾಯ. ಜೀವವನ್ನು ಉಳಿಸಿಕೊಳ್ಳಲು ಬಹಳ ಜಾಗ್ರತೆ ಬೇಕಾಗಿತ್ತು ಯಾವುದರ ಬಗ್ಗೆ ನಾವು ಹೆಚ್ಚು ಶ್ರಮಪಡಬೇಕಾಗುತ್ತದೋ, ಅದು ಭಾರ ವಾಗಿಯೂ ತೋರುತ್ತದೆ. ಭಾರವಾದ ಒಡವೆಯೂ ಜಾಗ್ರತೆಯಿಲ್ಲದೆ ಹೊರ ಬಹುದಾಗಿದ್ದ ಪಕ್ಷದಲ್ಲಿ ಹಗುರವಾಗಿಯೇ ತೋರುತ್ತದೆ. ಪ್ರಾಣವನ್ನು ಶ್ರಮದಿಂದ ಹೊರಬೇಕಾಗಿದೆ. ಬೊಂಬಾಯಿಯಲ್ಲಿ ನಾನೀಗ ಇರುವುದು ಅವಶ್ಯವಾಗಿರಲಿಲ್ಲ. ಇಲ್ಲದಿರಲು ಉಪಾಯವಿಲ್ಲ. ಹೋಗುವ ದಾರಿ ಕಟ್ಟಿ ಹೋಗಿದೆ. ಉಗಿಬಂಡಿಯಲ್ಲಿ ಸ್ಥಳವಿಲ್ಲ; ಬೇರೆ ಮಾರ್ಗವಿಲ್ಲ. ಜೀವವು ಸಿಡಿಯುತ್ತಿತ್ತು. ಕೀಯುತ್ತಿದ್ದ ಬೀಗಿನಂತೆ ಸಿಡಿಯುತ್ತಿತ್ತು. ಬೊಂಬಾಯಿ ಯನ್ನು ಹೇಗೂ ಬಿಡುತ್ತೇನೆ. ಬಿಡುವ ವರೆಗೆ ತಾಯಿಯ ಒಡವೆಯಾದ ನನ್ನೀ ಪ್ರಾಣವನ್ನು ಹೇಗಾದರೂ ಕಾಪಾಡುತ್ತೇನೆ ಎಂದು ಕೋಣೆಯಿಂದ ಹೊಟೇಲಿಗೂ ಹೊಟೇಲಿನಿಂದ ಕೋಣೆಗೂ ಮಾತ್ರ ಸುಳಿದಾಡಿ, ಉಳಿದ

ವೇಳೆಯನ್ನು ಬಾಗಿಲು ಬಲಿತ ಕೋಣೆಯೊಳಗೆ ಕಳೆಯುತ್ತಿದ್ದೆ. ನಿರುದ್ಯೋಗದ ದಿನ. ಇಡೀ ಹೊತ್ತನ್ನು ಹೇಗೆ ಕಳೆಯುವುದಕ್ಕಾಗುತ್ತದೆ? ಮೌನವಾಗಿ ಕುಳಿತು ಆಲೋಚಿಸುತ್ತಲೂ ವ್ಯಥೆಯ ಭಾರವನ್ನು ಹೆಚ್ಚಿಸುತ್ತಲೂ ಇದ್ದೆ. ಈ ವ್ಯಥೆಯಲ್ಲಿ ಅಬ್ದುಲ್ಲನಿಗೆ ಒಂದು ಪಾಲು ದೊರಯದಿರುತ್ತಿರಲಿಲ್ಲ ಅಬ್ದುಲ್ಲ ಬಂದಿದ್ದರೆ ಚೆನ್ನಾಗಿತ್ತು; ಕಂಡಿದ್ದರೆ ಚೆನ್ನಾಗಿತ್ತು. ಆದರೆ ಇದೆಲ್ಲ ಅಸಂಭವ; ಎಲ್ಲಿ ಸತ್ತನೋ, ಏನಾದನೋ ಯಾರು ಬಲ್ಲರು? ಆತ್ಮರಕ್ಷಣೆಯೊಂದೇ ಸದ್ಯದ ಕರ್ತವ್ಯ. ಸ್ವಾರ್ಥವು ಬಲಿಯಿತು. ಮನಸ್ಸು ಕಗ್ಗಲ್ಲ ಕೋಟೆಯಾಯಿತು. ವಜ್ರದ ಗೋಡೆಯಾಯಿತು. ಅದರೊಳಗೆ ಜೀವವು ಭದ್ರವಾಗಿ ಕುಳಿತಿತ್ತು!

ಸಾಯಂಕಾಲ ಘಂಟೆ ಎಂಟಾಗಿದೆ. ಹೊಟೇಲಿನಲ್ಲಿ ಊಟ ತೀರಿಸಿ ಕೋಣೆಯ ಕಡೆಗೆ ಹೆಜ್ಜೆಹಾಕುತ್ತಿದ್ದೆ. ಸುತ್ತುಮುತ್ತಲೂ ಕಣ್ಣುಹಾಯಿಸುತ್ತಾ ಯಾರಾದರೂ ಬರುವರೇ? ಏನಾದರೂ ಆಗುವುದೇ? ಎಂದು ಪರೀಕ್ಷಿಸುತ್ತಾ ಹೋಗುತ್ತಿದ್ದೆ. ಕಣ್ಣಾಳತೆಯ ವಿಸ್ತಾರದಲ್ಲಿ ದೃಷ್ಟಿಯನ್ನಿಟ್ಟು ಶೋಧಿಸ ತ್ತಲೇ ಇದ್ದೆ. ಚೂರಿಯೊಂದು ಸದಾ ಜೇಬಿನೊಳಗಿತ್ತು ನನ್ನ ಅಂಗರಕ್ಷಣೆಗಾಗಿ. ಬೀದಿಯ ಎರಡೂ ಕಡೆಗಳಲ್ಲಿ ಎತ್ತರ ಕಟ್ಟಡಗಳು. ವಿದ್ಯುಚ್ಛಕ್ತಿಯ ದೀಪ ಬೆಳಗುತ್ತಿದ್ದರೂ, ಅಲ್ಲಲ್ಲಿ ದಟ್ಟವಾದ ನೆರಳೂ ಬೀಳುತ್ತಿತ್ತು. ಜನರ ಓಡಾಟವೂ ಇತ್ತು. ಗುಂಪಾಗಿ ಹೋಗುವವರ ಮಧ್ಯದಲ್ಲಿ, ಬರುವವರ ಮಧ್ಯದಲ್ಲಿ ಮೃತ್ಯುವೇಕೆ ಅವಿತಿರಬಾರದು? ನಾನು ಬಲು ಎಚ್ಚರದಿಂದ, ಜನರ ಗುಂಪನ್ನು ದೂರವೇ ಬಿಟ್ಟು ಆದಷ್ಟು ತ್ವರಿತವಾಗಿ ಕೋಣೆಯ ಕಡೆಗೆ ಬರುತ್ತಿದ್ದೆ. ಇನ್ನೂರು ಗಜ ಬಂದೆನೋ ಇಲ್ಲವೊ! ರಸ್ತೆಯ ಪಕ್ಕದಲ್ಲಿದ್ದ ಒಂದು ಚಿಕ್ಕ ಮರದಡಿಯ ನೆರಳಿನಿಂದ ಇನ್ನೊಂದು ನೆರಳು ಒಡೆದು ಬೇರಾಗಿ ಚಲಿಸುವ ಹಾಗೆ ತೋರಿತು. ಚಲಿಸಿದುದು ಮಾತ್ರವಲ್ಲ; ನನ್ನ ಕಡೆಗೇ ಚಲಿಸುವಂತಿತ್ತು. ಕೂಲಂಕಷ ವಿಚಾರಿಸುವ ಅವಶ್ಯತೆಯೇನು? ಕಾಲಿನ ವೇಗವನ್ನು ಹೆಚ್ಚಿಸಿದರಾಯಿತು; ಹೆಚ್ಚಿಸಿದೆ. ಅದರ ವೇಗವೂ ಹೆಚ್ಚಿತು. ಆ ನೆರಳಿನ ಕೆಲ ಬಲಗಳಲ್ಲಿ ಜನರು ಹೋಗುವುದೂ ಬರುವುದೂ ತೋರುತ್ತಿತ್ತು. ಆದರೆ ಈ ನೆರಳು ಮಾತ್ರ ನನ್ನ ವೇಗದೊಡನೆ ವೇಗ ಹೆಚ್ಚಿಸುವುದಷ್ಟೆ? ಸೂಜಿಕಲ್ಲಿನ ಹಿಂದೆ ಬರುವ ಕಬ್ಬಿಣದಂತೆ ನನ್ನನ್ನೇ ಬೆಂಬತ್ತಿಬರುವುದಷ್ಟೆ! ಇದೇನು ಸೋಜಿಗ? ಅಪಾಯವನ್ನು ಶಂಕಿಸಲೇ? ಬೊಬ್ಬೆ ಹೊಡೆಯಲೇ? ಅವಿವೇಕವಾದೀತು. ಅಕಾರಣವಾಗಿ ಗಲಭೆಯೆದ್ದು, ರಕ್ತಪಾತ

ವಾಗುವ ಕಾಲವಿದು. ನನ್ನದು ಮಾನಸಿಕ ಭ್ರಾಂತಿಯಾಗಿರಲೂ ಬಹುದು; ಅಥವಾ ದೃಷ್ಟಿಭ್ರಮೆಯಾಗಿರಲೂ ಬಹುದು. ಬೊಬ್ಬೆಯೆಬ್ಬಿಸಿ ಅನಾಹುತ ವನ್ನು ಕರೆತರುವುದೇಕೆ? ಕಾಲುಗಳ ಮೇಲೆ ಅಂಕೆಯಿರುವಷ್ಟು ಕಾಲ ಅವುಗಳ ಮೇಲೆ ನಿರಂಕುಶಾಧಿಕಾರವನ್ನು ಪ್ರಯೋಗಿಸಿದರಾಯಿತು. ಓಡೋಣವೇ? ಚೆನ್ನಾಗಿಲ್ಲ. ದಾರಿಹೋಕರು ಏನೆಂದು ಭಾವಿಸಬಹುದು? ಓಡದಿರಲೇ? ಆ ನೆರಳು ನಮ್ಮಿಬ್ಬರ ನಡುವಣ ದೂರವನ್ನು ನುಂಗುತ್ತಾ ಬರುತ್ತಿದೆ. ಏನೂ ಆಗಲಿ, ಇಡುವ ಹೆಜ್ಜೆಗಳನ್ನೇ ದೂರದೂರವಾಗಿ ಇಡೋಣ . . . . ಎಂದು ಇಟ್ಟೆ . . . . . ಆ ನೆರಳೂ ಹಾಗೆಯೇ ಮಾಡಿದಂತೆ ತೋರಿತು. ಖಂಡಿತ ವಾಗಿ ಅಪಾಯವಿದೆ . . . . . ಅದೂ ನನಗೊಬ್ಬನಿಗೇ ಅಪಾಯ! ಆದ ರೇನು? ಕೋಣೆ ಸಮೀಪಿಸಿತು . . . . . ನಾಲ್ಕೇ ನೆಗೆತ! ನಮ್ಮ ಕಟ್ಟಡದ ಬುಡಕ್ಕೇ ಹಾರಬಹುದಷ್ಟೆ? ಹಾಗೆಯೇ ಮಾಡಿದೆ.

ನಾನಿರುವ ಕಟ್ಟಡ ಭಾರಿ ದೊಡ್ಡದು. ಅದರೊಳಗೆ ನೂರಾರು ಸಂಸಾರಗಳ ಚಿಕ್ಕ ಪ್ರಪಂಚವಿದೆ. ಒಬ್ಬರಿಗೊಬ್ಬರ ಮುಖಪರಿಚಯವೂ ಕಡಿಮೆ ಮಾತುನಡೆವಳಿಗಳು ಬೇರಾಗಿದ್ದರೆ ಮತ್ತೆ ಹೇಳಬೇಕೆ? ನಮಗೆ ನಮ್ಮ ಕೋಣೆಗಳ ಬೀಗದ ಕೈಗಳ ಪರಿಚಯ ಇರುವಷ್ಟು ಜನರ ಪರಿಚಯ ವಿರುವುದಿಲ್ಲ. ನನ್ನ ಕೋಣೆ ಆರನೆಯ ನೆಲೆಯಲ್ಲಿ. ಏರುವುದಕ್ಕೆ ಡೊಂಕು ಡೊಂಕಾಗಿ ಸುತ್ತುವ ಸೋಪಾನ. ರಸ್ತೆಯ ಅಂಚಿನಿಂದ ತಟ್ಟನೆ ಸೋಪಾ ನಕ್ಕೇ ಹಾರಿದೆ. ಹತ್ತು ಮೆಟ್ಟು ಮೇಲೇರಿ ಕೆಳಗೆ ನೋಡುತ್ತೇನೆ. ಆ ನೆರಳು ನನ್ನ ಕೆಳಗಡೆಯ ರಸ್ತೆಯಲ್ಲಿ ನಿಂತಂತಿದೆ. ಇನ್ನೇನು? ಸಂದೇಹ ಬೇಕಾಗಿಯೇ ಇಲ್ಲ. ನನ್ನನ್ನೇ ಓಡಿಸಿಕೊಂಡು ಬಂದಿದೆ ವಿಪತ್ತು. ಮೈ ನಡುಗಿತು; ಬಾಯಿ ಚೀರಿತು; ನನ್ನ ಕೈ ತಾನಾಗಿ ಜೇಬಿನೊಳಗಿದ್ದ ಚೂರಿ ಯನ್ನು ಬಿಚ್ಚಿ ನನ್ನನ್ನು ಅನುಸರಿಸುತ್ತಿದ್ದ ನೆರಳಿನ ಕಡೆಗೆ ಎಸೆಯಿತು. ಚೂರಿ ರಸ್ತೆಗೆ ಬಿದ್ದಿತು. ಠಣ್ ಎಂಬ ಸದ್ದಾಯಿತು. ನನ್ನ ಚೀರಾಟ . . . . ಚೂರಿಯ ರಣತ್ಕಾರ . . . . ಇಲ್ಲಿ ಏನೋ ದೊಡ್ಡ ದೊಂಬಿಯಾಗುತ್ತಿದೆ . . . ಎಂದು ರಸ್ತೆಯಲ್ಲಿ ಹೋಗುತ್ತಿದ್ದವರೂ, ಮನೆಯ ಒಳಗಿದ್ದವರೂ, ಹೊರಗಿ ದ್ದವರೂ ಎಲ್ಲರೂ ಒಂದಾಗಿ ದಿಗಿಲೆಬ್ಬಿಸಿದರು. ನೆರಳು ಓಡಿತು. ಹತ್ತೆಂಟು ಜನರೂ ಓಡಿದರು. ಹೊಡೆಯಿರೋ, ಬಡಿಯಿರೋ ಎಂಬ ಆರ್ಭಟೆ. ಮೇಲಿನವರು, ಕೆಳಗಿನವರು, ಆ ಕಡೆಯವರು, ಈ ಕಡೆಯವರು, ಎಲ್ಲರೂ ಕೂಡಿ, ಓಡುವ ವ್ಯಕ್ತಿಯ ಹಿಂದೆ, ಅದನ್ನು ಬೆಂಬತ್ತುವ ಜನರ ಹಿಂದೆ, ಓಡ

ತ್ತೊಡಗಿದರು. ಯಾರು, ಏನು? ಎಂದು ವಿಚಾರಿಸುವುದಕ್ಕೆ ಯಾರಿಗೂ ಅವಕಾಶವಿಲ್ಲ. ಬೊಬ್ಬೆಯ ಹಿಂದೆ ಜನರು! ಜನರ ಹಿಂದೆ ಬೊಬ್ಬೆ! ಜೀವವಿದ್ದ ಆ ನೆರಳು ಏನಾಯಿತೋ, ಎಲ್ಲಿಗೆ ಹೋಯಿತೋ ನಾನರಿಯೆ. ಕೆಲವೇ ನಿಮಿಷಗಳಲ್ಲಿ ಬೊಬ್ಬೆ ನನ್ನ ಕಿವಿಗೆ ಕೇಳದಷ್ಟು ದೂರಕ್ಕೆ ಹೋಗಿಬಿಟ್ಟಿತು. ನನಗೆ ಧೈರ್ಯಬಂತು. ಅಲ್ಲಿ ಏನಾಯಿತೋ ತಿಳಿಯುವ ಕುತೂಹಲವಿರಲಿಲ್ಲ. ನಾಳೆ ಬೆಳಗಾಗುವುದಿಲ್ಲವೆ? ಸಾವಕಾಶವಾಗಿ ತಿಳಿಯಬಹುದು; ಆ ರಾತ್ರಿ ನನ್ನದಾದರೆ, ಉಳಿದ ಹಗಲುರಾತ್ರಿಗಳೆಲ್ಲ ನನ್ನವು ಎಂಬ ಭಾವನೆಯಿಂದ ಕೋಣೆಯೊಳಗೆ ಭದ್ರವಾಗಿ ಕುಳಿತೆ.

ಬೆಳಗ್ಗೆ ನನ್ನ ಕೂಡೊಕ್ಕಲುಗಳಾಗಲಿ, ಬೀದಿಯಲ್ಲಿ ಸಂಚರಿಸುವ ಜನರಾಗಲಿ ಹೆಚ್ಚಿನ ವಾರ್ತೆಯನ್ನು ಹೇಳಲಿಲ್ಲ. ರಾತ್ರಿಯಲ್ಲಿ ಒಬ್ಬ ಕೊಲೆಪಾತಕಿ ಹೊಂಚುಹಾಕುತ್ತಾ ಬಂದ. ಅವನನ್ನು ಹತ್ತು ಜನ ಅಟ್ಟಿಕೊಂಡು ಹೋದರು. ನಾವಿರುವ ರಸ್ತೆ ರಾಜರಸ್ತೆಗೆ ಸೇರುವಲ್ಲಿ ಚಿಕ್ಕ ಪೆಟ್ಟಿನ ಹೊಡೆದಾಟವಾಯಿತು. ಒಂದೆರಡು ಹೆಣಗಳು ಬಿದ್ದಿರಬಹುದು. ದೊಡ್ಡ ಮಾತಲ್ಲ. ಈಗ ಎಲ್ಲ ಶಾಂತವಾಗಿದೆ ಎಂದು ಯಾರೋ ಒಬ್ಬರು ಹೇಳಿದರು. ನನಗೆ ಅಷ್ಟರಿಂದ ತೃಪ್ತಿಯಿಲ್ಲ. ಈ ಚಿಕ್ಕ ಘಟನೆಯಲ್ಲಿ ನನಗೂ ಒಂದು ಸ್ಥಾನವಿದೆ. ಯಾವುದೋ ಒಂದು ನೆರಳು ನನ್ನನ್ನು ಓಡಿಸಿಬಂದುದರ ಪರಿಣಾಮವಾಗಿಯೇ ಈ ಕೊಲೆಯಾದುದಾಗಿರಲಾರದೆ? ಸತ್ಯಸಂಗತಿ ಏನೆಂದು ತಿಳಿಯಲೇಬೇಕು. "ಕಳೆದ ರಾತ್ರಿ ನಗರವು ಸಾಮಾನ್ಯತಃ ಶಾಂತವಾಗಿತ್ತು. ಮೂಲೆ ಮುಡುರುಗಳಲ್ಲಿ ನಾಲ್ಕಾರು ಇರಿತಗಳಲ್ಲದೆ, ಬೇರೆ ಯಾವ ಅವಾಂತರಗಳೂ ಆಗಿರಲಿಲ್ಲ. ಈ ನಾಲ್ಕು ದಿನಗಳಲ್ಲಿ ಇಂತಹ ಶಾಂತರಾತ್ರಿಯ ಅನುಭವ ಇದೇ ಮೊದಲು"—ಎಂದು ಸರಕಾರದವರು ಪ್ರಕಟನೆ ಕೊಟ್ಟಿದ್ದರು. ರಾತ್ರಿಯಲ್ಲಿ ಶಾಂತಿಯಿದ್ದಿರಬಹುದು; ನನ್ನ ಮನಸ್ಸಿನಲ್ಲಿರಲಿಲ್ಲ. ಸುದ್ದಿಯ ಮೂಲವನ್ನು ಹುಡುಕಬೇಕಾಗಿತ್ತು. ಅದು ನನ್ನೆಡೆಗೆ ಬರುವ ಹಾಗಿಲ್ಲ. ನಾನು ಅದರೆಡೆಗೆ ಹೇಗೆ ಹೋಗಲಿ? ಆಲೋಚನೆಗಳ ಎಳೆದಾಟದಲ್ಲಿಯೇ ಸಮಯ ಕಳೆದುಹೋಯಿತು. ಪಕ್ಕದ ಚಹದ ಅಂಗಡಿಗೆ ಹೋಗಿ ಒಂದು ಲೋಟ ತೆಗೆದುಕೊಂಡು, ನನ್ನ ಕೋಣೆಗೆ ಏರುತ್ತೇನೆ. ಕೆಳಗೆ ರಸ್ತೆಯ ಮೇಲೆ ನಿಂತ ಕಾರಿನಿಂದ ಪಿಂಗಾಣಿಯ ವ್ಯಾಪಾರಿ ಬಾಳೂರರು ಇಳಿದು ನನ್ನೆಡೆಗೆ ಮುಖ ತಿರುಗಿಸಿ, ಕೈಯನ್ನೆತ್ತಿ ಸನ್ನೆಮಾಡುತ್ತಾರೆ!

ನನಗಾದ ಸಂತೋಷ ಅಷ್ಟಿಷ್ಟೆಂದು ಹೇಳುವ ಹಾಗಿರಲಿಲ್ಲ. ಕೂಡಲೆ

ಕೆಳಕ್ಕೆ ನೆಗೆದು "ಬನ್ನಿ ನಾರ್ಣಪ್ಪಯ್ಯ . . . ಬನ್ನಿ . . . ನನ್ನ ಗೂಡನ್ನು ಒಮ್ಮೆಯೂ ನೋಡಿದವರಲ್ಲ . . ." ಎಂದು ಕರೆದೆ.

"ನೀವು ಕರೆಯದಿದ್ದರೂ ನಾನು ಬರುತ್ತೇನೆ. ಹತ್ತಿ ಮೇಲೆ, ನಾನೂ ಬರುತ್ತೇನೆ" ಎಂದವರು ನನ್ನನ್ನೇ ಹಿಂಬಾಲಿಸಿದರು.

ನನ್ನ ಕೋಣೆಯಲ್ಲಿರುವುದು ಚೆಲುವಾದ ಕುರ್ಚಿ ಒಂದೆ. ಅದನ್ನು ಬಾಳೂರರು ಅಲಂಕರಿಸಿದರು. ರಾತ್ರಿ ನನ್ನ ಮಂಚವಾಗಿ ರೂಪಾಂತರ ಹೊಂದುತ್ತಿದ್ದ ಅಗಲ ಬೆಂಚಿನ ಮೇಲೆ ನಾನು ಕುಳಿತೆ. ಬಾಳೂರರು ಕರ ವಸ್ತ್ರದಿಂದ ಮುಖವೊರಸುತ್ತಾ "ನಿನ್ನೆಯ ಸಮಾಚಾರವೇನಾದರೂ ಗೊತ್ತೆ?" ಎಂದು ಪ್ರಶ್ನಿಸಿದರು.

"ಯಾವ ಸಮಾಚಾರ?"

"ಸಮಾಚಾರವು ಯಾವುದೆಂದೇ ಗೊತ್ತಿಲ್ಲದ ಮೇಲೆ ಕೇಳಬೇಕಾದು ದಿಲ್ಲ" ಎಂದವರು ನಕ್ಕರು.

"ಯಾವುದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಹೇಳಿದ್ದೀರಿ?"

"ನಿಮ್ಮ ಈ ಕಿರಿಬೀದಿ ರಾಜರಸ್ತೆಗೆ ಸೇರುವಲ್ಲಿ . . . ಆ ಮೂಲೆ ಯಲ್ಲಿ . . . ನಿನ್ನೆ ರಾತ್ರಿ ಏನಾಯಿತೆಂದು ಬಲ್ಲಿರಾ?

"ಒಂದೂ ಇಲ್ಲ!"

"ಎಂಟು ಗಂಟೆಗೇ ಕುಂಭಕರ್ಣ ನಿದ್ರೆಯೆ?"

"ಹೂಂ ಬೊಂಬಾಯಿ ನಗರದಲ್ಲಿ—ನನ್ನಂತೆ ನಿದ್ದೆ ಮಾಡುವವರು ಹೆಚ್ಚು ಮಂದಿ ಇದ್ದರೆ ಈ ಮಾರಾಮಾರಿ ಕಡಿಮೆಯಾಗಬಹುದಲ್ಲವೆ?" ಎಂದು ನಗುತ್ತಾ ಉತ್ತರ ಕೊಟ್ಟೆ. ರಸ್ತೆಯಲ್ಲಾದ ಘಟನೆಯ ಕೂಲಂಕಷ ವೃತ್ತಾಂತವನ್ನು ತಿಳಿಯಬೇಕೆಂಬ ಕುತೂಹಲವು ಆ ನಗೆಯಿಂದ ಇಣಿಕಿ ನೋಡುತ್ತಿತ್ತು. ಆದರೆ ಅದುದಕ್ಕೂ ನನಗೂ ಒಂದಿಷ್ಟು ಸಂಬಂಧ ಇದೆ ಯೆಂದು ತಿಳಿಸುವುದಕ್ಕೆ ನಾನು ಸಿದ್ಧನಾಗಿರಲಿಲ್ಲ.

"ಹಾಗೆಯೇ ಸರಿ. ನಿಮ್ಮಂಥವರೇ ಈ ನಗರದಲ್ಲಿ ಇರುವುದಾಗಿದ್ದರೆ ಆಳುವ ಸರಕಾರಬೇಕೆ? ಆದುದನ್ನು ತಿಳಿಸಿಬಿಡುತ್ತೇನೆ. ನಿನ್ನೆ ರಾತ್ರಿ ಪುಕಾರಿ ಮಾಡಿದಂತಹ ದುರ್ಜನರನ್ನು ಹುಟ್ಟಡಗಿಸುವುದಕ್ಕಾಗಿಯೇ ನಮಗೊಂದು ಸರಕಾರಬೇಕಾದುದು." ಎಂದು ಪ್ರಸ್ತಾವಿಸುತ್ತಾ ಹೀಗೆ ವಿವರಿಸಿದರು.

"ಯಾರೋ ಒಬ್ಬ ದುಷ್ಟ ಈ ವಠಾರದಲ್ಲಿ ಹೊಂಚುಹಾಕುತ್ತಿದ್ದ. ಈ ಸೋಗು ಯಾರಿಗೊ ತಿಳಿಯಿತು. ಅವರು ಸನ್ನೆಕೊಟ್ಟರು. ಹೋಗುತ್ತಿದ್ದ ದಾರಿ ಹೋಕರಿಗೆ ಗೊತ್ತಾಯಿತು. ಎಲ್ಲರೂ ಅಟ್ಟಿಕೊಂಡು ಬಂದರು. ಪ್ರಾಣವನ್ನು ಕೈಯಲ್ಲಿಟ್ಟುಕೊಂಡು ಓಡಿತು ಆ ಪ್ರಾಣಿ ಈ ರಸ್ತೆ—ಆ ರಸ್ತೆಗಳ ಸಂದಿನಲ್ಲಿ ಜನ ನಿಂತಿದ್ದಿರಬೇಕು. ತಡೆದರು. ಹಿಡಿದರು. ಆ ಜನ ಕೈಯಲ್ಲಿದ್ದ ಕತ್ತಿಯಿಂದ ಒಬ್ಬನನ್ನು ತಿವಿದ. ಮತ್ತೆ ಕೇಳುವುದೇನು? ನಿರಪರಾಧಿಯ ರಕ್ತವಲ್ಲವೇ? ಅದು ನೀರೆ? ಆತನ ಕೊರಳನ್ನು ಕೊಯಿದು ಅಲ್ಲೆ ಎಸೆದಿರಬೇಕು."

"ನಮ್ಮ ನೆರೆಗೂ ಈ ಮಾರಿ ಬಂತು!" ಎಂದು ಏನೂ ತಿಳಿಯದವನಂತೆ ಮುಖವನ್ನು ಮುದುಡಿಸಿದೆ.

"ಎಲ್ಲ ಆಗುವುದೇ . . . . . . ಆಗತಕ್ಕದ್ದೇ . . . . . . ನಿನ್ನಂತಹ ಅಂಜುಬುರುಕರಿಗೆ ಈ ಪ್ರಪಂಚವಲ್ಲ!" ಎಂದು ಹೆಮ್ಮೆಯಿಂದಾಡುತ್ತಾ ಮತ್ತೂ ಮುಂದುವರಿಸಿದರು:

"ನಿಮಗೆ ತಿಳಿಸಬೇಕಾದುದು ಇದಲ್ಲ. ಕಥೆಯೊಳಗೆ ಒಂದು ಉಪಕಥೆಯಿದೆ. ನನ್ನ ಮಂಡಿಯ ಸಮೀಪದಲ್ಲಿ ಒಂದು ಆಸ್ಪತ್ರೆಯಿದೆ ಗೊತ್ತೊ?"

"ಇರಬಹುದು"

"ಇದೆ; ಅಲ್ಲೊಂದು ಅನಾಥ ಶವವಿದೆ!" ಈ ಮಾತನ್ನು ಕೇಳಿದಾಗ ನೆತ್ತರು ಬಿಸಿಯೇರತೊಡಗಿತು.

"ಅನಾಥ ಶವ!"

"ಹೌದು"

"ನಾವದರ ಸಂಸ್ಕಾರ ಮಾಡಬೇಕಾಗಿರುವುದೇ?"

"ಆ ಕೆಲಸವನ್ನು ನಮಗೆ ಯಾರು ಕೊಡುತ್ತಾರೆ? ಕೊಟ್ಟರೆ ಮಾಡುವ ಬೋಡ್ಡಿ ಮಗ ಯಾರು? ಆದದ್ದೇನೋ ಚೆನ್ನಾಯಿತು. ಆದರೆ ಹೆಣ ಯಾರದೆಂದು ಗೊತ್ತಾಗಲಿಲ್ಲ ಪೋಲೀಸರಿಗೆ . . ಸಾಧ್ಯವಾದರೆ ಗುರುತಿಸಬೇಕಾಗಿದೆ!"

"ನಾನು ಶವ ಪರೀಕ್ಷೆಯಲ್ಲಿ ನಿಪುಣನಲ್ಲ!"

"ಲೋಕಕ್ಕೇ ಗೊತ್ತಿದೆ ಈ ವಿಷಯ. ಆ ಹೆಣಕ್ಕೆ ನಿನಗೆ ಪರಿಚಿತವಾದ ಹೆಸರಿದೆ!"

"ನನಗೆ ಪರಿಚಿತವಾದ ಹೆಸರು!"

"ಹೌದು; ಸೊಂಟದಲ್ಲಿ ಬಿಗಿದಿದ್ದ ಜಟ್ಟಿಯಲ್ಲಿ ಅಬ್ದುಲ್ಲ—ಎಂದು ಬರೆದಿತ್ತು!"

"ಏನು ಅಬ್ದುಲ್ಲ!" ಎಂದು ಬೆಚ್ಚಿ ಬಿದ್ದೆ.

"ಏಕಿರ ಬಾರದು? ಆ ಹೆಸರಿನಲ್ಲಿ ಏನಿದೆ? ನಾರ್ಣಪ್ಪಯ್ಯ ಎಂಬ ಹೆಸರಿನಲ್ಲಿ ಏನಿದೆಯೋ ಅಷ್ಟೆ ಅದರಲ್ಲಿಯೂ! ಸರಕಾರದವರಿಗೆ ಈ ಹೆಣದ ತುದಿಬುಡ ತಿಳಿದಿಲ್ಲ. ದಾಖಲೆಗೆ ಇದು ಬೇಕಾಗಿದೆಯಂತೆ. ಹಿಂದು ವೇಷ ಹಾಕಿಕೊಂಡು ಬಿದ್ದಿತ್ತಂತೆ ಆ ಹೆಣ. ಪೋಲೀಸರು ತಂದು ನೋಡುತ್ತಾರೆ . . ಏನು ಹೇಳೋಣ . . ಆ ಮುಂಡಾಸು . . ಕಚ್ಚೆ . . ಶಾಲು . . ಇವುಗಳೊಳಗೆ ಶುದ್ಧ ಮುಸಲ್ಮಾನನ ಶರೀರ . . ನಾನು ಆಗಲೇ ಹೇಳಿರಲಿಲ್ಲವೆ? ಈ ದುಷ್ಟರು ಮಾಡುವುದೇ ಹೀಗೆ . . ವೇಷ ಬದಲಾಯಿಸಿ ಕೊಲೆಮಾಡುವುದು."

ಬಾಳೂರರ ಮುಂದಿನ ವಾಕ್ಯಗಳನ್ನು ಕೇಳುವ ತವಕ ನನ್ನಲ್ಲಿರಲಿಲ್ಲ. ಹೇಳುವ ತವಕ ಅವರಿಗಿತ್ತೆಂಬುದು ಸ್ಪಷ್ಟ. ಆ ಜಾತಿಯನ್ನು ಅವರು ಮನವಾರೆ ಬೈದರು. ಎಷ್ಟು ಅಪಶಬ್ದಗಳನ್ನಾಡಬಹುದೋ ಅಷ್ಟನ್ನೂ ಆಡಿದರು. ಆ ಅಬ್ದುಲ್ಲ ಕೆರೆಕೋಡಿ ಅಬ್ದುಲ್ಲನಾಗಿರಬಹುದೇ? ಎಂಬುದನ್ನು ಶೋಧಿಸುವುದಕ್ಕಾಗಿ ನನ್ನನ್ನು ಬರಹೇಳಿದುದೆಂಬುದು ಸ್ಪಷ್ಟವಾಯಿತು. ಕರೆಯದಿದ್ದರೂ ನಾನು ಹೋಗುತ್ತಿದ್ದೆ. ನನಗೆ ಆ ಹೆಸರು ಅಷ್ಟು ಮೋಹಕ! ಮತ್ತೆಲ್ಲಿ ಹುಡುಕಿದರೂ ಇಲ್ಲ ಆ ಹೆಣದೊಳಗಾದರೂ ಅಬ್ದುಲ್ಲ ಕುಳಿತಿರುವನೋ ನೋಡೋಣ ಎಂದು ಅವರ ಕಾರಿನಲ್ಲಿಯೇ ಆಸ್ಪತ್ರೆಗೆ ಹೋದೆ. ಬಾಳೂರರು ಜೊತೆಯಲ್ಲಿದ್ದರು.

ಹೆಣ ಸ್ಮಶಾನಕ್ಕೆ ಹೊರಡಲು ಸಿದ್ಧವಾಗಿತ್ತು. ಹೆಚ್ಚು ಪರೀಕ್ಷಿಸಬೇಕಾಗಿರಲಿಲ್ಲ. ಅದೇ ಮುಖ; ಅದೇ ಮೈಕಟ್ಟು, ಹಿಂದೆ ಇದ್ದ ಕಿರುಮೀಸೆಯ ಸ್ಥಾನದಲ್ಲಿ ದಪ್ಪ ಮೀಸೆ. ನುಣುಪಾಗಿದ್ದ ಮೈ ಒರಟಾಗಿ ಸ್ಥೂಲವಾಗಿತ್ತು. ಬಣ್ಣದಲ್ಲಿ ಸ್ವಲ್ಪ ಕಂದಿಹೋಗಿದ್ದ. "ಏನೂ ಮಾಡಿಯೇನು! ಎಲ್ಲಿಗೂ ಹೋದೇನು!" ಎನ್ನುವ ನಿರ್ಭೀತಿಯ ಮುಖ ಮುದ್ರೆ ಈಗಲೂ ಇತ್ತು. ಏನೋ ಮಾಡಿದ; ಮಸಣಕ್ಕೆ ನಡೆದ. ಪಾತುಮ್ಮನ ಕನಸಿನ ದೈವ ಅಲ್ಲಿ ಬಿದ್ದಿತ್ತು. ಕುತ್ತಿಗೆ ಅರ್ಧ ಕತ್ತರಿಸಿ ಹೋಗಿತ್ತು. ಸುರಿದ ರಕ್ತ ಇನ್ನೂ ಆರಿರಲಿಲ್ಲ. ರಕ್ತದ ದಾರಿಯಲ್ಲಿಯೇ ಜೀವ ತಪ್ಪಿಸಿಕೊಂಡು ಹೋಗಿತ್ತು.

"ರಾಮಣ್ಣ! ನಿನ್ನ ತಮ್ಮನನ್ನು ಮರೆಯ ಬೇಡ!" ಎಂದು ಎಂಟು ವರ್ಷಗಳ ಹಿಂದೆ ಪಾತುಮ್ಮನಾಡಿದ್ದ ಕಣ್ಣೀರಿನ ಮಾತುಗಳು ಕಿವಿಯಲ್ಲಿ ರಣರಣಿಸು ತ್ತಿದ್ದವು. ನಾನು ಮರೆತೆನೇ? ಇಲ್ಲ. ಅಬ್ದುಲ್ಲ ಈ ಪ್ರಪಂಚವನ್ನು ಬಿಟ್ಟು ಹೋದಾಗ ಹೋದ ಜನ ಯಾರೆಂದು ಗುರುತಿಸುವುದಕ್ಕೆ ರಾಮಣ್ಣನೇ ಬರ ಬೇಕಾಯಿತು. ಕನ್ನಡ ಜಿಲ್ಲೆಯ ಮಣ್ಣು ಬೊಂಬಾಯಿಯ ಮಣ್ಣನ್ನು ಕೂಡಿತು. ಇದು ಕನ್ನಡದ ಮಣ್ಣೆನ್ನುವುದಕ್ಕೆ ರಾಮಣ್ಣನೇ ಸಾಕ್ಷ್ಯ ಕೊಡಬೇಕಾಯಿತು.

ಅಲ್ಲಿದ್ದ ಅಧಿಕಾರಿಗಳು "ಈತನ ಪರಿಚಯವಿದೆಯೋ" ಎಂದು ಕೇಳಿದರು.

"ಇದೆ; ಈತನೇ ಕರೆಕೋಡಿ ಅಬ್ದುಲ್ಲ;"

"ತಂದೆಯ ಹೆಸರು?"

"ಮೋಯಿದ್ದಿನ್"

"ಕಸಬು!"

"ಇಲ್ಲಿಯೇ ಏನೋ ಮಾಡುತ್ತಿದ್ದ!"

"ಉತ್ತರಾಧಿಕಾರಿಗಳು?"

"ಪಾತುಮ್ಮ. . . . ತಾಯಿ!"

"ವಿಳಾಸ ಕೊಡಬಹುದೇ?"

ಕೂಡಲೇ ಒಂದು ಚೀಟಿನಲ್ಲಿ ಬರೆದು ಕೊಟ್ಟೆ. "ನಿಮ್ಮಿಂದ ಆಗ ಬೇಕಾದ ಉಪಕಾರವಿಷ್ಟೆ!" ಎಂದು ಅಧಿಕಾರಿಗಳು ನಾವು ಹೋಗಬೇಕೆಂದು ಸನ್ನೆಕೊಟ್ಟರು.

ನಾವು ಹೊರಟೆವು. ಮುಖವನ್ನೀಕಡೆಗೆ ತಿರುಗಿಸುವಾಗ ಅಲ್ಲಿ ಚಿಕ್ಕ ದೊಂದು ಚೂರಿ ಕಾಣಿಸಿತು. ಚೂರಿ. . . . ಹೌದು . . . . ನನ್ನ ಚೂರಿ ಯಂತೆಯೇ ಇದೆಯಲ್ಲ . . . . ನೆತ್ತರ ಕೆಸರನ್ನು ಮೆತ್ತಿದ ಹಾಗಿದೆ . . . . ಅಬ್ದುಲ್ಲನ ನೆತ್ತರು . . . . ಅವನ ಕೆಸರು . . . . ನನ್ನ ಚೂರಿ . . . ಫಕ್ಕನೆ ಕಾಲು ತಡೆಯಿತು. ಮುಖ ವಿವರ್ಣವಾಯಿತು. ಕಣ್ಣು ಕತ್ತಲಿಸುವಂತಾ ಯಿತು. ಇದನ್ನೆಲ್ಲ ನೋಡುತ್ತಿದ್ದ ಅಧಿಕಾರಿಗಳು "ನೀವು ಒಂದು ಕೊಲೆ ಯನ್ನು ಕಂಡು ಹೀಗಾದರೆ ದಿನಕ್ಕೆ ಹತ್ತಾರನ್ನು ಕಾಣುವ ನಮ್ಮ ಗತಿಯೇನು?" ಎಂದು ನಕ್ಕರು. ನಾನು ಉತ್ತರಕೊಡಲಿಲ್ಲ. ಹೆಣವನ್ನು ಕಂಡು ವ್ಯಸನ

ವಾಗಿತ್ತು; ಅಷ್ಟೆ . . . . ಚೂರಿಯು ಮಾತ್ರ ನನ್ನ ಮರ್ಮವನ್ನೆ ತಿವಿಯಿತು.. ನನ್ನ ಕೈಯಿಂದ ತಾನಾಗಿ ರಸ್ತೆಗೆ ಹಾರಿದ ಚೂರಿಯುದು . . . . ಬೇಕೆಂದು ಎಸೆದುದಲ್ಲ. ತಾನಾಗಿ ಬಿದ್ದುಹೋಗಿತ್ತು. ನೆಲದ ಮೇಲೆ ಬಿದ್ದು ರಣ್ ಎಂದು ಶಬ್ದವಾದುದನ್ನು ಕೇಳಿದ್ದೆ . . . . ಅದು ಇಲ್ಲಿಗೆ ಹೇಗೆ ಬರಬೇಕು? ಆಗ ಹೆಚ್ಚಿನ ವಿಚಾರಕ್ಕೆ ಎಡೆಗೊಡಲಿಲ್ಲ ಬಾಳೂರರು "ಬಾ ಬಾ" ಎಂದು ಕರೆಯುತ್ತಿದ್ದರು. ನನ್ನ ಹಜ್ಜೆ ಅವರ ಹಜ್ಜೆಯನ್ನು ಅನುಸರಿಸುತ್ತಿತ್ತು.

ಕಾರಿನ ಕಡೆಗೆ ಬಂದುದಾಯಿತು. ಕಾರಿನಲ್ಲಿ ಕುಳಿತುಕೊಳ್ಳುವ ವರೆಗೆ ಅವರ ತುಟಿ ಎರಡಾಗಿರಲಿಲ್ಲ. ಕಣ್ಣಿಟ್ಟು ನನ್ನ ಮುಖಭಾವ ಭಂಗಿಗಳನ್ನು ಪರಿಕಿಸುತ್ತಿದ್ದರೆಂದು ತೋರುತ್ತದೆ. ಕಾರಿನೊಳಗೆ ಕುಳಿತೊಡನೆ "ನನ್ನ ಮಾತು ಸತ್ಯವೆ ರಾಮಣ್ಣ?" ಎಂಬು ಕೇಳಿದರು.

"ಸಂದೇಹವೇನು? ನಿಮ್ಮದೇ ಸತ್ಯ . . . . ನನ್ನದೇ ಸುಳ್ಳು!" ಎಂಬ ಒಂದೇ ಒಂದು ಉತ್ತರದಿಂದ ಅವರ ಬಾಯಿಯನ್ನು ಮುಚ್ಚಿಸಬೇಕೆಂದಿದ್ದೆ? ಆದರೆ ಆ ಬಾಯಿ ಅಷ್ಟು ಸುಲಭವಾಗಿ ಮುಚ್ಚೀತೇ? "ನಂಬಕೂಡದು ನಂಬ ಕೂಡದು . . . . ಸರ್ವಥಾ ಆ ಜಾತಿಯನ್ನು ನಂಬ ಕೂಡದು. ನಿನ್ನ ಸ್ನೇಹಿತ ಶುದ್ಧ ಲುಚ್ಚ . . . . . ನೀನು ಆತನ ದೃಷ್ಟಿಗೆ ಬಿದ್ದಿದ್ದರೆ ಖಂಡಿತ ವಾಗಿ ನಿನ್ನ ಚರ್ಮ ಸುಲಿಯುತ್ತಿದ್ದ" ಎಂದರು.

ಇರಬಹುದು; ನಾನು ಇದಿರಾಡಲಿಲ್ಲ. ಇದಿರಾಡುವ ಧೈರ್ಯವಾದರೂ ಎಲ್ಲಿ?

ಕಾರು ಬಾಳೂರರ ಅಂಗಡಿಯ ಸಮೀಪಕ್ಕೆ ಬಂದು ನಿಂತಿತು. ಅವರು ಇಳಿದರು. ನನ್ನನ್ನು ಮುಟ್ಟಿಸುವಂತೆ ಡ್ರೈವರನಿಗೆ ಹೇಳಿದರು. "ರಾಮ ನಾಯಕರೆ! ನಿಮಗೆ ಈ ಬೊಂಬಾಯಿಯ ತಂಟೆ ಬೇಡ . . . . ಕಾಲು ಕೀಳಿರಿ ನೋಡೋಣ . . . . ದುಡ್ಡೊಂದು ಇದ್ದರೆ, ತಂದೆತಾಯಿಗಳ ಹೊರತು ಮತ್ತೆಲ್ಲ ಸಿಕ್ಕುತ್ತದೆ ಈ ಬೊಂಬಾಯಿಯಲ್ಲಿ. ಬಂಡಿಯ ಟಿಕೇಟು ಸಿಕ್ಕೀತೇ? ಎಂದು ಸಂಶಯ ಪಡಬೇಡಿ . . . . ಒಂದಕ್ಕೆ ಹತ್ತುಕೊಟ್ಟರಾಯಿತು. ನಿಮ್ಮ ಜೇಬಿಗೆ ಬಂದು ಬೀಳುತ್ತದೆ ಟಿಕೇಟು . . . . ನಡೆಯಿರಿ . . . ನಡೆಯಿರಿ . . . ಸಮುದ್ರದಲ್ಲಿ ಈಜಬೇಕಾದರೆ ಮೀನೇ ಆಗಬೇಕು. ಬೊಂಬಾಯಿಯಲ್ಲಿ ಇಂತಹ ಸಮಯದಲ್ಲಿ ಬಾಳುವುದಕ್ಕೆ ನನ್ನಂಥವರೇ ಸಮರ್ಥರು . . . ನಿನಗೆ ಈ ಕೆಲಸ ಬೇಡ" ಎಂದು ಬೋಧಿಸಿದರು.

"ಆಗಬಹುದು" ಎಂದು ನನ್ನ ಉತ್ತರ.

"ಹಾಗಾದರೆ ನಿಮ್ಮನ್ನು ಒಯ್ಯುವ ಟೀಕೇಟು ನಾಳೆ ನಿಮ್ಮ ಕೋಣೆಗೆ ತಲಪುವುದು. ಕೂಡಲೇ ಹೊರಡಿರಿ. ನನ್ನ ತಂದೆಯನ್ನು ಕಂಡರೆ ಕ್ಷೇಮವಾಗಿದ್ದಾನೆ ಎಂದುಬಿಡಿ. ಬೊಂಬಾಯಿ ಪಟ್ಟಣ ಸುಟ್ಟು ಭಸ್ಮವಾದರೂ ನಿಮ್ಮ ಮಗ ಆ ಬೆಂಕಿಕೆಂಡದ ರಾಶಿಯೊಳಗಿನಿಂದ ಎದ್ದು ಬಂದಾನು; ಎಂದು ಭರವಸೆ ಕೊಟ್ಟುಬಿಡಿ"—ಎನ್ನುತ್ತಾ ನನ್ನನ್ನು ಕಾರಿನಲ್ಲಿರಿಸಿ ಕೋಣೆಗೆ ಕಳುಹಿಸಿದರು.

x x x x

ಮರುದಿನ ಉಗಿಬಂಡಿಯಲ್ಲಿ ನನ್ನ ಶರೀರವೇನೋ ಕುಳಿತಿತ್ತು. ಆದರೆ ಧ್ಯಾನವೆಲ್ಲ ಆ ಘಟನೆಯದೆ . . . . ಅಬ್ದುಲ್ಲ ಕೊಲೆಪಾತಕಿಯಾಗುವುದು! ವೇಷಪಲ್ಲಟಿಸುವುದು! ನನ್ನ ಮೇಲೆ ಹೊಂಚುಹಾಕುವುದು! ನಮ್ಮ ಕೋಣೆಯ ಸಮೀಪದಲ್ಲಿ ಕೊಲೆಯಾದವನು ಅವನೇ ಆಗಿದರೆ, ನಾನು ಊಟ ಮುಗಿಸಿ ಬರುತ್ತಿದ್ದಾಗ ಪ್ರಾಚೀನ ಕರ್ಮದಂತೆ ಬೆಂಬತ್ತಿ ಬಂದ ನೆರಳು ಅವನದೇ ಆಗಿರಬೇಕು. ಅವನದೇ ಆಗಿದ್ದರೆ ಹತ್ತು ಜನ ಓಡಿಸಿದ ಜನವೂ ಅವನೆ. ರಾಜರಸ್ತೆಯೂ ಕಿರುಬೀದಿಯೂ ಕೂಡುವ ಸಂದಿನಲ್ಲಿ ಕೊರಳುಕೊಯಿಸಿಕೊಂಡಾತನೂ ಅವನೇ! ಇದು ನಿಶ್ಚಯವಾದರೆ ಬಾಳೂರರು ಅವನ ವಿಷಯವಾಗಿ ಹೇಳಿದ ಕತೆಯೂ ಸತ್ಯವಾಗಿರಬೇಕು. ಎಂದರೆ ಅಬ್ದುಲ್ಲನನ್ನು ಬಾಲ್ಯಸ್ನೇಹಿತನೆಂದು ಮಮತೆಯಿಂದ ನೋಡಿದ ನಾನೇ ಹುಚ್ಚ! ಇರಬಹುದು; ಎಂಥೆಂಥವರು ಏನೇನು ಆಗುವುದಿಲ್ಲ! ಅಬ್ದುಲ್ಲ ಬೊಂಬಾಯಿಯ ಈಗಿನ ಕಸುಬನ್ನು ಚೆನ್ನಾಗಿ ಅಭ್ಯಾಸಿಸಿರಬಹುದು. ಹಣದ, ಸುರೆಯ ಮೋಹದಿಂದ ತನ್ನನ್ನು ತಾನೇ ಮರೆತು ಆಡಿಸುವ ಕೈಗಳ ಬೊಂಬೆಯಾಗಿ ಎಷ್ಟೋ ಜನರನ್ನು ಕೊಂದ ಮೇಲೆ ತಾನೆ ಹೆಣವಾಗಿ ಬಿದ್ದುದಾಗಿರಬಹುದು. ಆದರೆ ಆತನಿಗೂ ಪಾತುಮ್ಮನಿಗೂ ನನ್ನಲ್ಲಿದ್ದ ಪ್ರೇಮ ಮಮತೆಗಳನ್ನೆಣಿಸುವಾಗ, ಹೀಗಾಗಬಹುದೆಂಬುದಕ್ಕೆ ಕಾರಣ ದೊರೆಯುವುದಿಲ್ಲ. ಆದುದಕ್ಕೆ ಅರ್ಥವಾಗುವುದಿಲ್ಲ. ಬಾಳೂರರನ್ನು, ಕೊನೆಗೆ ನನ್ನನ್ನು ನಾನೇ—ನಂಬಲಾಗುವುದಿಲ್ಲ. ಪ್ರಕೃತಿಯಲ್ಲಿ ನಡೆಯುವ ಪ್ರತಿಯೊಂದಕ್ಕೂ ಅರ್ಥವಾಗುವುದಿದ್ದರೆ, ಈ ಪ್ರಪಂಚದಲ್ಲಿ ಸ್ವಾರಸ್ಯವೇನಿದೆ? . . . . ಇದೊಂದು ಅರ್ಥವಾಗದ ಘಟನೆ.

x x x x

ಮಂಗಳೂರಿನಲ್ಲಿ ಬಂದಿಳಿದಾಗ ಮೃತ್ಯುವಿನ ಸಾಮ್ರಾಜ್ಯದಿಂದ ತಪ್ಪಿಸಿ

ಕೊಂಡು ಬಾಳಿನ ಬುಡಕ್ಕೆ ಕಾಲಿಟ್ಟಂತಹ ಸಂತೋಷವಾಯಿತು. ಆ ಗಿನ ಪರಿಚಿತರೊಬ್ಬರಲ್ಲಿ ಉಳಿದುಕೊಂಡು ಮರುದಿನವೇ ಊರಿಗೆ ಹೊರಟೆ. ಮಧ್ಯಾಹ್ನ ಹಳ್ಳಿಯನ್ನು ಸೇರಿದುದಾಯಿತು. ತಾಯಿಯನ್ನು ಕಂಡು ಉದ್ದಂಡ ವಾಗಿ ಅವಳ ಪಾದಗಳ ಮೇಲೆ ಕೆಡೆದೆ.

"ಬದುಕಿ ಬಂದೆಯೋ ಮಗನೇ" ಎನ್ನುತ್ತ ತಾಯಿ ಗದ್ಗದ ಧ್ವನಿಯಿಂದ ನನ್ನನ್ನು ಸ್ವಾಗತಿಸಿದಳು ಮತ್ತೆ ದುಃಖದ ಅಣೆಕಟ್ಟನ್ನು ಕಿತ್ತ ಹಾಗಾಯಿತು. ತಂದೆ ಸತ್ತಾಗಲೂ ಅಮ್ಮನು ಈ ಪರಿ ಅತ್ತುದಿಲ್ಲ. ಒಣಗಿದ ಮರಕ್ಕೆ ಬೆಂಕಿ ಹತ್ತಿದ್ದರೆ ಅದು ಕೂಡಲೆ ಭಸ್ಮವಾಗುತ್ತದೆ. ಹಸಿ ಮರಕ್ಕೆ ಹಿಡಿದರೆ ಬೆಂಕಿಯೇ ನಂದಿಹೋಗುತ್ತದೆ. ಐವತ್ತೈದು ವರ್ಷಗಳಾಗಿದ್ದರೂ ನನ್ನ ತಾಯಿ ಒಣಗಿ ಹೋಗಿರಲಿಲ್ಲ. ಹಸಿಮರದ ಹಾಗೆ ನೆಲವನ್ನು ಆತುಕೊಂಡಿದ್ದಳು. ಪುತ್ರ ವಾತ್ಸಲ್ಯವೇ ಆ ಒಡಲಲ್ಲಿ ಸಂಚರಿಸುತ್ತಿದ್ದ ರಸ! ಜೀವನ ರಸ!

ಕ್ಷೇಮ ಸಮಾಚಾರವಾಯಿತು; ಊಟವಾಯಿತು; ನಾನು ಮರಳಿ ಬಂದೆನಲ್ಲ; ತನ್ನ ಒಡವೆ ತನ್ನ ಮುಷ್ಟಿಯೊಳಗೆ ಬಂತಲ್ಲ! ಎಂಬ ಹಿಗ್ಗಿನಿಂದ ತಾಯಿ ಅತ್ತಿತ್ತ ಓಡಾಡುತ್ತಿದ್ದಳು. ಅಬ್ದುಲ್ಲನ ಮಾತನ್ನು ಎತ್ತುವಳೋ ಎಂದು ನನ್ನ ಹೆದರಿಕೆ! ಕೇಳದೆ ಬಿಡುತ್ತಾಳೆಯೇ ಆಕೆ? ಅವಳಂತೆ ಪಾತುಮ್ಮನೂ ಒಬ್ಬಳು ಬಡವಿಧವೆ. ನನ್ನಂತೆ ಅಬ್ದುಲ್ಲನೂ ಬಡವಿಧವೆ ಯೊಬ್ಬಳ ಮಗ .... "ಅಬ್ದುಲ್ಲ ಬಂದನೇ?" ಎಂದು ಕೇಳಿಯೇ ಬಿಟ್ಟಳು.

"ಅಬ್ದುಲ್ಲ!" ಎಂದಿಷ್ಟೆ ಹೇಳಿ ಮಾತನ್ನು ನಿಲ್ಲಿಸಿದೆ.

"ಹೌದು; ಅಬ್ದುಲ್ಲ! ಪಾಪ .... ಆ ಮುದಿ ಹೆಂಗಸು ಮೊನ್ನೆಯ ವರೆಗೆ ದಾರಿನೋಡುತ್ತಲೇ ಇದ್ದಳು. ಪಾಪ .... ಮೊನ್ನೆ ಅವನ ಕಾಗದ ವನ್ನು ಎದೆಯ ಮೇಲಿಟ್ಟುಕೊಂಡು ಕಣ್ಣುಗಳನ್ನು ಮುಚ್ಚಿದಳು. ಉಸಿರು ಗಾಳಿಯಲ್ಲಿ ತೇಲಿಹೋಯಿತು."

"ಪಾತುಮ್ಮ ಸತ್ತಳೇ!"

"ಸಾಯದಿರುತ್ತಾಳೆಯೆ .... ಯಾವ ಒಂದು ಜೀವದ ಮೇಲೆ ಆಸೆ ಯಿಟ್ಟು ಇದುವರೆಗೆ ಎಕ್ಕುವ ಉಸಿರನ್ನು ಇಟ್ಟುಕೊಂಡಳೋ, ಆ ಜೀವ ಇದ್ದರೂ ಇಲ್ಲದಂತಾಗಿರುವಾಗ ಆ ಹೆಣ್ಣು ಸಾಯದೇನು ಮಾಡುತ್ತಾಳೆ?"

ಪಾತುಮ್ಮನನ್ನು ಇದಿರಿಸುವ ಸಂದರ್ಭ ತಪ್ಪಿತೆಂಬುದರಿಂದ ನನಗೆ

ಬೆಂದಿಷ್ಟು ಸಮಾಧಾನವಾಗದಿರಲಿಲ್ಲ. ಆದುದನ್ನೆಲ್ಲ ತಾಯಿಗೆ ಬಿಚ್ಚಿಹೇಳುವುದಕ್ಕೆ ಮನಸ್ಸು ಅಳುಕದಿರಲೂ ಇಲ್ಲ. "ಹೌದು, ನೀನು ಹೇಳಿದುದು ನಿಜ" ಎಂದಿಷ್ಟೇ ಹೇಳಿದಾಗ ನನ್ನ ಮುಖ ಕತ್ತಲಿಸಿತು.

ತಾಯಿ ಮುಂದುವರಿಸಿದಳು: ಅವನ ಕಾಗದ ಬಂದು ಎಂಟು ದಿವಸಗಳಾದುವು. ನಿನ್ನ ಮಾವಯ್ಯನೇ ಓದಿಹೇಳಿದರು. ಆ ಪತ್ರದ ಸಂಗತಿಯನ್ನು ಏನು ಹೇಳಲಿ? ಬೊಂಬಾಯಿ ಒಂದು ನರಕವಂತೆ. ಹಿಂದೂ-ಮುಸಲ್ಮಾನರು ಒಬ್ಬರೊಬ್ಬರಿಗೆ ಚೂರಿಹಾಕುವುದಂತೆ. ಅಬ್ದುಲ್ಲನಿಗೆ ಬದುಕು ಕಷ್ಟವಾಗಿದೆಯಂತೆ. ಅವನ ಧನಿಗಳು ದೊಡ್ಡ ಪುಂಡರಾಗಿದ್ದರಂತೆ. ಅವರ ಹೇಳಿಕೆಯಂತೆ ನಡೆಯಲು ಒಪ್ಪದ ಕಾರಣ, ಅಬ್ದುಲ್ಲ ಕೆಲಸ ಕಳೆದುಕೊಂಡ. ಕೈಯಲ್ಲಿದ್ದ ಪುಡಿಕಾಸುಗಳನ್ನು ವೆಚ್ಚಮಾಡಿ ದಿನ ನೂಕಿದ. ಬರುವಾಗ ಏನಾದರೂ ತರಬೇಕು—ಎಂದು ಸಂಪಾದನೆಗಾಗಿ ಒಂದೆರಡು ತಿಂಗಳು ಅಲೆದ. ಈಗ ಈ ಕಿಚ್ಚು ಹಿಡಿಯಿತು. ತಾಯಿಗೆ ಯಾರ ಕೈಯಿಂದಲೋ ಒಂದು ಪತ್ರ ಬರೆಯಿಸಿದ. ಈಗ ಹಿಂದುಗಳ ಮರಾಠಕ್ಕೆ ಮುಸಲ್ಮಾನರೂ, ಮುಸಲ್ಮಾನರ ಮರಾಠಕ್ಕೆ ಹಿಂದುಗಳೂ ಹೋಗುವುದು ಅಪಾಯಕರ. ಹೀಗಿದ್ದರೂ ಏನಾದರೂ ಮಾಡಿ ರಾಮಣ್ಣನನ್ನು ನೋಡುತ್ತೇನೆ. ಕೈಯಲ್ಲಿರಬಹುದಾದುದನ್ನು ಅವನ ವಶಕ್ಕೆ ಒಪ್ಪಿಸುತ್ತೇನೆ. ಕೆಟ್ಟವರ ಸಹವಾಸದಿಂದ ಕೆಡುಕನಾದೆ. ಬೊಂಬಾಯಿಯ ಹಣವನ್ನು ಅಲ್ಲಿಯೇ ಹಾಳುಮಾಡಿದೆ. ಈಗ ಉಳಿದುದೇನೂ ಇಲ್ಲ. ಒಡಲನ್ನು ಸವೆಯಿಸಿ ಏನಾದರೂ ದೊರೆತರೆ ಅದನ್ನು ಉಗಿಬಂಡಿಗಾಗಿ ವೆಚ್ಚಮಾಡಿ ಬರಿಕೈಯಲ್ಲಿ ಊರಿಗೆ ಬರಬೇಕೆ? ಅಬ್ದುಲ್ಲ ಸಾಯಲಾರ. ಆತನ ತಲೆಗೆ ಬಂಡೆಕಲ್ಲುಗಳನ್ನು ಹೊತ್ತುಹಾಕಿದರೂ ಸಾಯಲಾರ. ಅಲ್ಲನು ನನಗೆ ಆಯುಷ್ಯ ಕೊಟ್ಟಿದ್ದಾನೆ. ನಿನಗೂ ಒಂದೆರಡು ವರ್ಷಗಳ ಜೀವಮಾನವನ್ನು ಕೊಟ್ಟರೆ, ಹಣವಂತನಾದ ಅಬ್ದುಲ್ಲನನ್ನು ಕಾಣುವೆ. ಕೊಡದಿದ್ದರೆ ಮಾಡುವುದೇನು? ಸತ್ತುಬೀಳುವ ಒಡಲು ತಾನು ಹುಟ್ಟಿಬಂದ ಮಣ್ಣನ್ನು ಸೇರಬೇಕಾದರೂ ದುಡ್ಡು ಬೇಕಲ್ಲವೆ? ದುಡ್ಡುಕೊಡದ ಹೆಣವನ್ನು ಮಣ್ಣೂ ಮುಟ್ಟದು. ಮಣ್ಣುಕೂಡಿಸುವುದಕ್ಕೆ ಬೇಕಾದಷ್ಟು ಹಣವನ್ನಾದರೂ ರಾಮಣ್ಣನ ಕೈಗೆ ಕೊಡುತ್ತೇನೆ . . . . ಎಂದಿತ್ತು ಪತ್ರದಲ್ಲಿ. ಪಾತುಮ್ಮನಿಗೆ ಈ ಲೋಕದ ನೀರು ಮುಗಿಯಿತು ಮಗು . . . . ಮುಗಿಯದಿರುತ್ತಿದ್ದರೆ, ಒಳ್ಳೆಯ ದಾರಿಯನ್ನು ಹಿಡಿದ ಬಡಹುಡುಗನನ್ನು ಕಂಡು ಸಂತೋಷದಿಂದ ಸಾಯುತ್ತಿದ್ದಳ

ಲ್ಲವೇ? ಎಂದು ತಾಯಿ ಕತೆಯನ್ನು ನಿಲ್ಲಿಸಿ, "ಅಬ್ದುಲ್ಲ ಬರುವುದಿಲ್ಲ! ಎಂದನೆ?" ಎಂದು ಪ್ರಶ್ನಿಸಿ ಕಣ್ಣೀರು ಸುರಿಸಿದಳು.

"ಹಾಗೆ ಹೇಳಲಿಲ್ಲ!"

"ಅವನು ಕಣ್ಣಿಗೆ ಸಿಕ್ಕಲಿಲ್ಲವೆ?"

"ಸಿಕ್ಕಿತು ಅವನ ಹೆಣ!"

"ಇದರರ್ಥವೇನು ಮಗು?" ಎಂದು ತಾಯಿ ಉದ್ವೇಗದಿಂದ ಕೇಳಿದಳು.

"ತಿವಿಯಿಸಿಕೊಂಡು ಬೀದಿಯಲ್ಲಿ ಬೀಳುತ್ತಾರಲ್ಲ! ಅವರಂತೆ ಅವನೂ ಆದ!"

"ಹೀಗೂ ಆಯಿತೆ? ಚಿನ್ನದಂಥ ಹುಡುಗನಾಗಿದ್ದನಲ್ಲ . . ಪಾತುಮ್ಮ! ನೀನೆ ಪುಣ್ಯವಂತೆ. ಮಗನ ಸಾವಿನ ಸುದ್ದಿ ಬರುವ ಮುಂಚೆ ಈ ಹಾಳು ಲೋಕವನ್ನು ಬಿಟ್ಟೆಯಲ್ಲ!" ಎನ್ನುತ್ತಾ ತಾಯಿ ಕಣ್ಣೀರು ಸುರಿಸಿದಳು. ಪಾತುಮ್ಮನ ಸ್ಥಾನದಲ್ಲಿ ತನ್ನನ್ನಿರಿಸಿ ತಾಯಿ ಆಡಿದ ಮಾತಿದು. ಅವಳ ಅಂತಃಕರಣವು ಕರಗಿದುದು ಯಾರೊ ಒಬ್ಬಳ ಮಗನ ಕರುಣ ಕಥೆಯಿಂದಲ್ಲ. ತಾನೇ ಅನುಭವಿಸಿ ತನ್ನ ಕರುಳೇ ಬೆಂದು ಕುದಿದ ಬೇಗೆಯಿಂದ. ನನ್ನ ಕಣ್ಣ ಮುಂದೆ ಒಬ್ಬಳೇ ಒಬ್ಬಳು ತಾಯಿಯಿದ್ದಳು; ಅಬ್ದುಲ್ಲನಿಗೂ ನನಗೂ ಒಬ್ಬಳೇ ತಾಯಿಯಾಗಿ ಕಣ್ಣ ಮುಂದೆ ಗೋಚರಿಸುತ್ತಿದ್ದಳು. ಹಿಂದುಸ್ಥಾನ ಪಾಕಿಸ್ಥಾನ ಎಂದು ಒಬ್ಬರು ಇನ್ನೊಬ್ಬರನ್ನು ತಿವಿಯಬೇಕೇ? ಮಗು . . . ಇದರಿಂದ ಆಗುವುದು ಪಾಕಿಸ್ಥಾನವೂ ಅಲ್ಲ; ಹಿಂದುಸ್ಥಾನವೂ ಅಲ್ಲ— ಭೂತಸ್ಥಾನ!" ಎಂದು ಒದರುತ್ತಾ ಅವಳು ತನ್ನ ಕೆಲಸಕ್ಕೆ ನಡೆದಳು.

ಆಕೆ ಒಳಗೆ ಹೋದ ಮೇಲೆ ನನ್ನ ಹೃದಯದ ಯಾತನೆ ಸಹನಾತೀತವಾಯಿತು. ಅಬ್ದುಲ್ಲ ಸತ್ತ . . . ತಿವಿಸಿಕೊಂಡು ಸತ್ತ . . . ನಾನು ತಿವಿಯದಿದ್ದರೂ ನನ್ನ ಚೂರಿಯೇ ಅವನಿಗೆ ಮೃತ್ಯುವಾದಂತಿತ್ತು. 'ಅಣ್ಣ'ನ ಚೂರಿ 'ತಮ್ಮ'ನೆದೆಗೆ . . . . . . ಇದು ಹೇಗಾಯಿತೆಂಬುದನ್ನು ತಿಳಿಯುವುದೂ ಬೇಕಾಗಿರಲಿಲ್ಲ; ತಾಯಿಗೆ ತಿಳಿಸುವುದೂ ಬೇಕಾಗಿರಲಿಲ್ಲ. ಇಂದು ಅಬ್ದುಲ್ಲನ ದಿನ. ನಾಳೆ ನನ್ನದೂ . . . ಅವನ ಮರಣದಿಂದ ನನ್ನ ಮರಣದವರೆಗೆ ಕೆಲವು ದಶವರ್ಷಗಳಿರಲೂ ಬಹುದು. ಪಾತುಮ್ಮ ಸತ್ತಳು . . . ತನ್ನ ಮಗನ ಉದ್ಧಾರಕನು ರಾಮಣ್ಣನೆಂಬ ಧೃಢ ವಿಶ್ವಾಸದಿಂದ ಸತ್ತಿರಬಹುದು.

ಪಾತುಮ್ಮನೂ ಪ್ರೇತವಾಗುತ್ತಾಳೆ. ಪ್ರೇತವಾಗಿ ಚೂರಿಯ ಕತೆಯ ಮೂಲವನ್ನು ತಿಳಿಯುತ್ತಾಳೆ. ಆ ರಾತ್ರಿ; ನಾನು ಊಟ ತೀರಿಸಿ ಮನೆಗೆ ಬರುತ್ತಿದ್ದುದು; ಒಂದು ನೆರಳು ನನ್ನನ್ನು ಹಿಂಬಾಲಿಸಿದುದು; ನಾನು ಸಂದೇಹ ದಿಂದ ಓಡಿದುದು; ಕೊನೆಗೆ ಅದೇ ಅಬ್ದುಲ್ಲನಿಗೆ ಮೃತ್ಯುವಾಗಿ ಪರಿಣಮಿಸಿದುದು . . . ಈ ಗುಟ್ಟು ಆ ಮುದುಕಿಯ ಪ್ರೇತಕ್ಕೆ ತಿಳಿಯದಿರವುದೇ? ಆಗ— ನನ್ನ ಒಬ್ಬನೇ ಒಬ್ಬ ಕಂದಯ್ಯನನ್ನು ಏನು ಮಾಡಿಬಿಟ್ಟೆ ರಾಮಣ್ಣ . . . ನನ್ನಲ್ಲಿ ಹೇಳಿದುದೇನು? ಮತ್ತೆ ಮಾಡಿದುದೇನು?— ಎಂದು ಕೇಳಿದರೆ ನಾನು ಕೊಡತಕ್ಕ ಉತ್ತರವೇನು?



# ತೂರಿ ಬಂದ ತಾರೆ

(ಶ್ರೀ ಕೃಷ್ಣಮೂರ್ತಿ ಪುರಾಣಿಕ, ಬಿ. ಎ., (ಆನರ್ಸ) ಬಿ ಟಿ, ಗೋಕಾಕ.)

೧

ತಡಸಲಿನ ತುಷಾರದ ಹನಿಗಳು ದಂಪತಿಗಳನ್ನು ತೋಯಿಸತೊಡಗಿದವು. ತನ್ಮೆದುರಿಗೆ ಅಬ್ಬರದಿಂದ ಬೀಳುವ ಜಲಪ್ರಪಾತದ ಅದ್ಭುತ ರಮ್ಯ ದೃಶ್ಯದಲ್ಲಿ ಮೈಮರೆತ ಅವರಿಗೆ ಇದರರಿವು ಇರಲಿಲ್ಲ. ರಭಸದಿಂದ ಬೀಳುವ ಜಲಾಶಯು, ಅದರ ಸುತ್ತಲೂ ಹಚ್ಚಗೆ ಹಸುರು ಮುಡಿಯನ್ನುಟ್ಟ ವನದೇವಿ, ಈ ನಾಡು ನಮ್ಮದೆಂಬ ಹೆಮ್ಮೆಯಿಂದ ಕಿಲಿಕಿಲಿಸುವ ಪಕ್ಷಿಗಳ ಕಳರವ ಮನಮೋಹಕ ವಾಗಿದ್ದುವು ಈ ಸೌಂದರ್ಯದ ಸೃಷ್ಟಿಯಲ್ಲಿ ಆ ದಂಪತಿಗಳು ವಿಶ್ವಸೌಂದ ರ್ಯವನ್ನೇ ಕಂಡುಕೊಂಡರು. ಈ ನಿಸರ್ಗಸುಂದರಿಯ ಭವ್ಯನೋಟದಲ್ಲಿ ದಿವ್ಯಸಮಾಧಿ ಹತ್ತಿದವರಂತೆ ಮೌನವಾಗಿ ಅದೆಷ್ಟು ಕಾಲಕಳೆದರೊ! ಅದೆಷ್ಟು ಸಮಯ ಈ ಸೌಂದರ್ಯ ಸಾಗರದಲ್ಲಿ ಬೆರೆತು ಹೋದರೊ! ಬಣ್ಣದ ಚಿಟ್ಟೆ ಯೊಂದು ಸೌಂದರ್ಯದ ಹನಿಯಂತೆ ತೇಲಿಬಂದು ಪರಿಮಳಾನ ಹತ್ತರವಿದ್ದ ಹಾಲುಬಳ್ಳಿಯ ಎಲೆಯ ಮೇಲೆ ಕುಳಿತು ಗಾಳಿಯ ಕೆನೆಯಂತಿರುವ ತನ್ನ ರೇಸಿಮೆ ಪಕ್ಕವನ್ನು ಅಲಗಿಸುತ್ತ ಕುಳಿತಿತು. ದಂಪತಿಗಳ ಸಮಾಧಿ ಭಂಗ ವಾಯಿತು. "ಈ ಬಣ್ಣದ ಚಿಟ್ಟೆ ಎಷ್ಟು ಚಂದವಾಗಿದೆ ನೋಡಿದಿರಾ?" ಎಂದಳು ಪರಿಮಳಾ. "ಅವಕ್ಕೆ ನಿನ್ನ ಉಸಿರೇ ಜೀವಕಳೆಯಾಗಿರಬೇಕು" ಮೂರ್ತಿ ನುಡಿದು ನಕ್ಕನು. "ನಿಮ್ಮ ಒಲುವಿನ ಮಾತೇ ಚೆಲುವಾಗಿ ಅದರ ಮೈಮೇಲೆ ಸಾರಣೆಯಾಗಿರಬೇಕು" ಅಭಿಮಾನದಿಂದ ನುಡಿದಳು ಪರಿಮಳಾ.

"ನೀನು ಮಾತನಾಡಿದೆಯೆಂದರೆ ಜೇನಿನ ಮಳೆ ಸುರಿದಂತೆ ನೋಡು ಪರಿಮಳಾ" ಹೆಂಡತಿಯ ತುಂಬಿದ ಮುಖವನ್ನು ನೋಡುತ್ತ ನುಡಿದ ಮೂರ್ತಿ.

"ಹಾಲಿನ ಹೊಳೆ ಈಸುವವಳು ಜೇನಿನ ಮಳೆ ಸುರಿಸುವದರಲ್ಲಿ ಅಚ್ಚರಿ ಏನಿದೆ;" ಪತಿಯ ಹಸ್ತವನ್ನು ಗಟ್ಟಿಯಾಗಿ ಹಿಡಿಯುತ್ತ ಕಣ್ಣು ಕುಣಿಸಿದಳು ಮೂರ್ತಿಯ ಪತ್ನಿ.

"ನಿನ್ನ ಮಾತೇ ಮುದ್ದು ಪರಿಮಳಾ!" ಅವಳ ಹಸ್ತವನ್ನು ತಟ್ಟುತ್ತ ಮೂರ್ತಿ ಮಂದಸ್ಮಿತನಾದ.

"ನಿನ್ನ ಮುದ್ದು ಮಾತಿನಕಿಂತ ನಿಮ್ಮ ಮಾತಿನ ಸದ್ದೇ ಹೆಚ್ಚಾದಂತೆ ತೋರುತ್ತದೆ"

ಮೂರ್ತಿ ಹೆಂಡತಿಯ ಮುಖವನ್ನು ಕಣ್ಣುತುಂಬಾ ನೋಡುತ್ತ "ನಿನ್ನ ಮಾತು ಮುದ್ದು ಅದಕ್ಕಿಂತಲೂ ನಿನ್ನ ತುಟಿ ಮುದ್ದು . . . .

ಪರಿಮಳಾನ ಲಜ್ಜೆ ಮುಖದ ಬಣ್ಣವನ್ನು ತಿರುಗಿಸಿತು.

. . . . . . ಸಕ್ಕರೆಯು ಸವಿನೋಡು ಪರಿಮಳಾ" ಎಂದು ನುಡಿದು ಒಲುವನ್ನು ಸೂಸಿದ.

ದಂಪತಿಗಳಿಬ್ಬರೂ ನಕ್ಕರು. ಅವರ ನಗೆಯು ತೆರೆ ಬಡಿಯಿತೇನೊ, ಆ ಬಣ್ಣದ ಚಿಟ್ಟೆ ಹಾರಿಹೋಯಿತು. ಆಕಾಶದಲ್ಲಿ ತುಂಡು ಮೋಡವೊಂದು ತೇಲಿಬಂದು ಸೂರ್ಯರಶ್ಮಿಯನ್ನು ಮಂದವಾಗಿ ಮಾಡಿತು. ತಡಸಲ ಅಬ್ಬರ ದಿಂದ ಬೀಳುತ್ತಿತ್ತು. ಸಮಾಧಿ ತಿಳಿದ ದಂಪತಿಗಳಿಗೆ ಈ ಅಬ್ಬರವೀಗ ಕಿವಿಗಡಚಾಗಿ ಕೇಳಹತ್ತಿತು. ಏಳಲಾರದೆ ಎದ್ದರು. ಮೋಡ ಮತ್ತೆ ಮರೆ ಯಾಯಿತು. ಮತ್ತೆ ಸೂರ್ಯನ ಕಿರಣ ತಡಸಲಿನ ಜಲರಾಶಿಯ ಮೇಲೆ ಬಿದ್ದಾಗ ಮೂಡಿದ ಕಾಮನಬಿಲ್ಲು ದಂಪತಿಗಳನ್ನು ಕುಣಿಸಿತು.

ನವೀನ ದಾಂಪತ್ಯದ ಹೊಂಗನಸುಗಳ ಹುಚ್ಚು ಹೊಳೆಯಲ್ಲಿ ಹಗಲು ಗನಸುಗಳನ್ನು ಕಟ್ಟುತ್ತಿದ್ದ ಮೂರ್ತಿ ಮದುವೆಯಾದ ಮೂರು ದಿನಗಳಲ್ಲಿಯೇ ರಳಕವಾಡಿಯ ಸುಂದರವಾದ ಬಂಗಲೆಯೊಂದರಲ್ಲಿ ಹೊಸ ಸಂಸಾರಹೂಡಿಯೇ ಬಿಟ್ಟ. ಅವನ ರಸಿಕ ಜೀವನಕ್ಕೆ ಕವಲೊಡೆದಂತೆ ಬಂದ ಹೆಂಡತಿ ತುಂಬಾ ರಸವಂತಿ. ಅನುರೂಪನಾದ ಮೂರ್ತಿಗೆ ತಕ್ಕ ಮಡದಿ ಪರಿಮಳಾ. ಅವಳ ತುಂಬಿದ ಮುಖ, ಬೆಡಗಿನ ಚೆಲುವು, ಮುದ್ದು ಮೋಹನ ತರಂಗಿಣಿಯಂತಿರುವ ಅವಳ ಮೃದುಮಧುರ ಮಾತುಗಳು ಮೂರ್ತಿಯ ರಸಿಕ ಜೀವನದಲ್ಲಿ ತೇಲಾಡುವ ಸವಿರಸದ ಹನಿಗಳಾದುವು. ಅವನಿಗೆ ಜಗತ್ತು ಸವಿಗನಸಿನ ಅಮರಲೋಕವಾಗಿ ಬಿಟ್ಟಿತು. ಪರಿಮಳಾ ಆ ದಿವ್ಯಲೋಕದ ಬಿನದದ ರಾಣಿಯಾದಳು. ಅವಳ ಪ್ರೀತಿಯ ತುಂಬು ತಾವರೆಮೊಗದಲ್ಲಿ ಮೂರ್ತಿಯ ರಸದುಂಬಿ ಪಕ್ಕಪಡೆಯುತ್ತ ಗುಂಜಾರವಮಾಡತೊಡಗಿತು. ಇಂತಹ ರಸ ನಿಮಿಷಗಳ ರಸಾವೇಶದಲ್ಲಿರುವ ಮೂರ್ತಿ ಈ ಭಾನುವಾರ ಗೋಕಾವಿಯ ತಡಸಲಕ್ಕೆ ಹೆಂಡತಿಯನ್ನು ಕರೆದುಕೊಂಡು ಬಂದುದು ಅವರ ರಸಿಕತನ ಕ್ಕೊಂದು ನಿದರ್ಶನ.

ತಡಸಲಿನ ಮೇಲೆ ಮೂಡಿದ ಕಾಮನಬಿಲ್ಲು ಮೂರ್ತಿಯ ಹೃದಯ ದಲ್ಲಿ ಕಾವ್ಯಸ್ಫೂರ್ತಿನ್ನೇ ತಂದಿತೇನೊ. ಅವನ ಕಂಠದಿಂದ ತುಂಡು ಪದ್ಯ ವೊಂದು ಹೊರಸೂಸಿತು. ಪರಿಮಳಾನ ಮುಖವನ್ನು ತೀರ ಹತ್ತಿರ ಎಳೆದು ಕೊಂಡು ಮೂರ್ತಿ ಹಾಡತೊಡಗಿದ.

ಸುತ್ತಲು ಮತ್ತಲು ಮಂದಸ್ಮಿತವೇ
ತಾವರೆಮೊಗದೊಳು ತುಂಬಿತ್ತು
ತಂಬಿದ ಮೊಗದೊಳು ತುಂಬಿಯು ಸರವೇ
ಸರಾಗವಾಗಿಯೆ ಸೂಸಿತ್ತು.

"ಮುಂದಿನ ಪದ್ಯವನ್ನಿಷ್ಟು ಹೇಳಬೇಡಿರಿ" ಅಂಗಲಾಚಿದಳು ಪರಿಮಳಾ. ಮೂರ್ತಿಗೆ ಅವಳ ಬಿನ್ನಹದ ಅವಶ್ಯಕತೆ ಇರಲಿಲ್ಲ ಅವನ ಹೃದಯ ಹಾಡಿನ ಹೊಳೆಯಾಗಿತ್ತು. ಪರಿಮಳಾನ ಸಾನ್ನಿಧ್ಯ ಅವನ ಸ್ಫೂರ್ತಿಯ ಸವಿಜಲದ ಸೆಲೆಯನ್ನು ಸೂಸಿತ್ತು. ಮತ್ತೆ ಹಾಡತೊಗಿದ.

ಜೀವನ ವರಸುವ ಜೀವದ ಹಾಡೇ
ಜೇನಿನ ಮಳೆಯನು ಕರೆದಿತ್ತು
ಭಾವ ಕನ್ನಿಕೆಯ ಜೀವದ ಜೋಡೇ
ಹಾಲಿನ ಹೊಳೆಯನು ಹರಿಸಿತ್ತು.

ಈ ಪದ್ಯಗಳನ್ನು ಮೂರ್ತಿ ಹಾಡಹತ್ತಿದಂತೆ ಪರಿಮಳಾನ ಹೃದಯದ ವೀಣೆ ನುಡಿಯತೊಡಗಿತು. ಅದರ ಪರಿಣಾಮವಾಗಿ ಅವಳ ತಾವರೆಗಣ್ಣು ಒಂದೆರಡು ಹನಿಗಳನ್ನು ಉದುರಿಸಿದವು. ಅವಳಿಗೆ ಬಾಳು ಸಾರ್ಥಕವೆನಿಸಿತು.

ತಡಸಲಿನ ರಮ್ಯ ವಾತಾವರಣದಲ್ಲಿ ಮನಸ್ವಿಯಾಗಿ ಈಜಾಡಿ ಹರುಷ ದುಂಬಿದ ದಂಪತಿಗಳು ಮರಳಿ ಬೆಳಗಾವಿಯ ನಿಲ್ದಾಣದಲ್ಲಿಳಿದಾಗ ಚಂದಿರ ಆಗಸದಲ್ಲಿ ಕುಲುಕುಲು ನಗುತ್ತಿದ್ದ. ಬೆಳದಿಂಗಳ ಹಿತವಾದ ಆ ಸಮಯದಲ್ಲಿ ನಡೆದುಹೋಗುವದೇ ಮೇಲೆಂದು ದಂಪತಿಗಳಿಬ್ಬರೂ ರಳಕವಾಡಿಯ ಭವ್ಯ ಬೀದಿಯಗುಂಟ ಸಾಗಿದರು. ಹಾಲುಗಡಲಿನ ಸೀಮೆಯಲ್ಲಿ ಚಂದಿರಸ್ವಾಮಿ ಹಾಲು ಸುರಿಯುತ್ತಲಿದ್ದಾನೆ. ಸೃಷ್ಟಿದೇವಿ ಬೆಳದಿಂಗಳ ವಸನವನ್ನುಟ್ಟು ಶುಭ್ರಳಾಗಿ ನಿಂತಿದ್ದಾಳೆ. ಹಾಲು ಜೇನಿನ ರಸವುಂಡ ರಸದುಂಬಿಗಳೆರಡು ಝೇಂಕರಿಸುತ್ತ ಬೀದಿಗುಂಟ ನಡೆದಿವೆ. ಚಂದಿರನಿಗೆ ಈ ಜೀವಿಗಳಿಗಾಗಿ

ಮತ್ಸರವಾಯಿತೇನೋ ಮೋಡದ ಮರೆಸೇರಿದ. ಮೂರ್ತಿ ಆ ವೇಳೆಯಲ್ಲಿ ಪರಿಮಳಾನ ಹಸ್ತವನ್ನು ಬಿಡಿಸಿಕೊಳ್ಳದೆ ಹೇಳಿದ. "ಧಾರವಾಡಕ್ಕೆ ವರ್ಗವಾದರೆ ಎಷ್ಟು ಚೆನ್ನ ಪರಿಮಳಾ! ನನಗೆ ಧಾರವಾಡವೆಂದರೆ ಅಚ್ಚುಮೆಚ್ಚು" ಎಂದ.

"ಈ ಊರಿಗೆ ಏನಾಗಿದೆಯೋ ನಾ ಕಾಣೆ. ನೀವು ಹಗಲೆಲ್ಲ ಕನಕರಿಸುವ ಧಾರವಾಡವೇನು ಅಮರಾವತಿಯಲ್ಲ" ಉತ್ತರವಿತ್ತಳು ಪರಿಮಳಾ.

"ದಾರವಾಡದ ಸವಿ, ಆ ಸಂಸ್ಕೃತಿಯನ್ನು ನೀನು ಅನುಭವಸಿಯೇ ತಿಳಿಯಬೇಕು"

"ನಿಮಗೆ ಧಾರವಾಡವೆಂದರೆ ಹುಚ್ಚು"

"ಅದಕ್ಕೆ ಕಾರಣವಿಲ್ಲದಿಲ್ಲ ಪರಿಮಳಾ!" ಮೂರ್ತಿಗೆ ಧಾರವಾಡದ ನೆನಪಿನಿಂದ ಬಹಳ ಸಂತೋಷವಾದಂತೆ ಕಂಡು ಬಂದಿತು. ಈ ಸಂತೋಷ ಪ್ರದರ್ಶನವನ್ನು ಅವನು ಸಿಳ್ಳಿನ ದನಿಯಲ್ಲಿ ವ್ಯಕ್ತಮಾಡುತ್ತಿರುವಾಗ ಮನೆ ಬಂದಿತು.

ಬೆಳುದಿಂಗಳ ಆ ಹಾಲು ರಾತ್ರಿಯಲ್ಲಿ ದುಂಬಿಗಳೆರಡು ಬಿರಿದಲರಿನ ಪರಿಮಳಕ್ಕಾಗಿ ಹಾತೊರೆಯುವಂತೆ ಆ ದಂಪತಿಗಳು ತಮ್ಮ ಸಿಂಗಾರವಾದ ಸಜ್ಜೆಮನೆಯನ್ನು ಆತುರದಿಂದ ಹೊಕ್ಕರು.

ಒಂದು ತುಂಬಿ ನಕ್ಕಿತು. ಇನ್ನೊಂದು ತುಟಿ ಕುಕ್ಕಿತು.

೨

ಬೆಳಗಾವಿಯ ನಿಲ್ದಾಣದ ಮೇಲಿನ ಅಂದಿನ ಜನಸಂದಣಿ ವಿಪರೀತವಾಗಿತ್ತು. ಸಂಸಾರ ಸಾಮಗ್ರಿಗಳೊಂದಿಗೆ ಧಾರವಾಡಕ್ಕೆ ನಡೆದ ಮೂರ್ತಿಗೆ ಈ ಗದ್ದಲ ನೋಡಿ ದಿಕ್ಕೇ ತೋಚದಂತಾಯಿತು. ಪರಿಮಳ ಅದೇ ಸಮಯ ಸಾಧಿಸಿ 'ನಿಮ್ಮ ಧಾರವಾಡದ ಹುಚ್ಚಿಗೆ ಇದೇ ಮದ್ದು' ಎಂದು ಬಿಟ್ಟಳು.

"ನಾನು ನಮಗಾಗಿ ಚಿಂತಿಸುವದಿಲ್ಲ ಪರಿಮಳಾ! ನಾವು ಎರಡನೆಯ ವರ್ಗದ ಪ್ರವಾಸಿಗಳು. ಪಾಪ! ಈ ಜನಜಂಗುಳಿ ಉಸಿರು ಕಟ್ಟಿ ಸಾಯುತ್ತಿದೆ. ಅದಕ್ಕಾಗಿ . . . . .

"ಮಹಾತ್ಮಾಜಿಯ ಪರಮ ಶಿಷ್ಯರಲ್ಲವೆ ತಾವು?" ಪರಿಮಳಾ ಕೊಂಕು ನೋಟದಲ್ಲಿ ಮೂರ್ತಿಯನ್ನು ಮೂದಲಿಸಿದಳು. ಅವಳಿಗೂ ನಿಜವಾಗಿ ಆ

ಜನದಟ್ಟಣೆ ಅಸಹ್ಯವಾಗಿತ್ತು, ತಮ್ಮ ಸಾಮಾನುಗಳೆಲ್ಲ ವ್ಯವಸ್ಥಿತವಾಗಿ ಹೇಗೆ ಸಾಗಬಹುದೆಂಬ ಚಿಂತೆ ಅವಳನ್ನು ಬಾಧಿಸಿತ್ತು. ಮೂರ್ತಿ ಅನೇಕ ಬಾರಿ 'ಹಮಾಲ'ನನ್ನು ಎಚ್ಚರಿಸುತ್ತಿದ್ದ. ಗಾಡಿ ಬರುವ ವೇಳೆಯಾದಂತೆ ಜನ ಇನ್ನೂ ಧುಮುಕಹತ್ತಿತು. 'ಈ ಜನ ನಾಳೆ ಹೊರಡಬಾರದಾಗಿತ್ತೆ?' ಎಂದು ಮೂರ್ತಿ ಗುಣುಗುಟ್ಟಿದ. 'ಇದು ದಿನದ ಪಾಡು' ಪರಿಮಳಾ ಮಾತು ಮುರಿದಳು.

ಈ ಮಧ್ಯೆ ಮೂರ್ತಿ ಅನೇಕ ಬಾರಿ ಅತ್ತಿತ್ತ ಸುಳಿದು ಬರತೊಡಗಿದ. ಅವನ ಈ ಅಧೀರತನವನ್ನು ಕಂಡ ಪರಿಮಳಾ ಒಳಗೊಳಗೇ ನಗುತ್ತಿದ್ದಳು. ಆದರೂ ಹೀಗೆ ಸುಮ್ಮಸುಮ್ಮನೆ ಅತ್ತಿತ್ತ ಓಡಾಡುವ ಮೂರ್ತಿ ಅವಳಿಗೆ ಆ ದಿನ ಸೋಜಿಗದ ಮೂರ್ತಿಯಾದನು. ಅವಳಿಗೇನು ಗೊತ್ತು ಅವನು ಆಗಾಗ ರೇಲ್ವೆ ಗಡಿಯಾರವನ್ನು ನೋಡಲಿಕ್ಕೆ ಹೋಗುತ್ತಿದ್ದನೆಂದು! ಕೈಯೊಳಗೆ ವಾಚ ಕಟ್ಟಿಕೊಂಡ ಈ ಮಹಾ ಮೂರ್ತಿಗೆ ರೇಲ್ವೆ ಗಡಿಯಾರವನ್ನೇ ನೋಡುವ ಕುತೂಹಲ. ಅವನ ಕಾತರವನ್ನು ನೋಡಿದ ಪರಿಮಳಾ ನಗುತ್ತ 'ದಯುವಿಟ್ಟು ಒಂದು ಕಡೆ ನಿಲ್ಲಬಾರದೇ?" ಎಂದು ನಕ್ಕಳು. ಮೂರ್ತಿ ಅವಳ ಮಾತಿಗೆ ತಾನೂ ಹಲ್ಲು ಕಿರಿದ

ಆ ದಿನ ರೈಲು ಇಷ್ಟೇಕೆ ವಿಲಂಬಮಾಡಿತೆಂದು ಮೂರ್ತಿ ಚಿಂತಿಸುತ್ತಿರುವಾಗ ಆ ಗೊಂದಲ ಮೋಡದೊಳಗಿಂದ ತೂರಿ ಬಂದ ತಾರೆಯಂತೆ ನವ ಬೆಡಗಿನ ಯುವತಿಯೊಬ್ಬಳು ಧಾವಿಸಿ ಬಂದು ಮೂರ್ತಿಗೆ ಪೂರ್ವ ಪರಿಚಿತಳ ಹಾಗೆ 'ದಯುವಿಟ್ಟು ಧಾರವಾಡಕ್ಕೊಂದು ಎರಡನೆಯ ವರ್ಗದ ಟಿಕೇಟು ತೆಗೆದು ಕೊಡುವಿರಾ?" ಎಂದು ಅಂಗಲಾಚಿ ಬೇಡುತ್ತ ಹತ್ತು ರೂಪಾಯಿಗಳ ನೋಟೊಂದನ್ನು ಕೈಗಿತ್ತಳು. ಮೂರ್ತಿಗೆ ದಿಗ್ಭ್ರಮೆಯಾಯಿತು. ಆ ಅವಸ್ಥೆಯಲ್ಲಿ ಅವನು ಹೆಂಡತಿಯ ಕಡೆಗೆ ನೋಡಿದ. ಅವಳ ಗಲ್ಲದ ಕೆಂಪು ಗುಲಾಬಿಯ ಬಣ್ಣವನ್ನು ಮೀರಿತ್ತು. ಮೂರ್ತಿಗೆ ಮಿಂಚು ಹೊಡೆದಂತಾದರೂ ಸೌಜನ್ಯದಿಂದ ಬಂದವಳಿಗೆ 'ವಿಪರೀತ ಗದ್ದಲವಲ್ಲವೆ? ಅವಶ್ಯವಾಗಿ ತಂದು ಕೊಡುವೆನು' ಎನ್ನುತ್ತ ಸರ್ರನೇ ಹೋಗಿ ಬಿಟ್ಟನು. ಅವನ ಈ ವಿಧೇಯತೆಯು ಪರಿಮಳಾನ ಹೃದಯುವನ್ನು ಕಲಕಿತು. ಮೂರ್ತಿ ಅತ್ತಿತ್ತ ಅಡ್ಡಾಡುತ್ತಿದ್ದ ಸಂದರ್ಭವು ಅವಳಿಗೆ ಆಗ ಅರ್ಥಪೂರ್ಣವಾಗಿ ತೋರಿತು. ಅವಳಿಗೆ ಒಂದರೆ ನಿಮಿಷ ಮೂರ್ಛೆಯೇ ಬಂದಂತಾಯಿತು.

ಹತ್ತಿರ ನಿಂತ ಗುಲಾಬಿ ಪತ್ತಲವುಟ್ಟ ತಿಳಿನೀಲಿ ರೌಕೆ ಧರಿಸಿದ ಆ

ಸುಂದರಿ ,ಪರಿಮಳಾನನ್ನು ಮಾತನಾಡಿಸಲಿಲ್ಲ. ಗದ್ದಲಕ್ಕಾಗಿ ಹೌಹಾರಿ ಹೋದಂತಿದ್ದಳವಳು. ಇತ್ತ ಪರಿಮಳಾ ಕೂಡ ಅವಳೊಡನೆ ಮಾತನಾಡುವ ಸೌಜನ್ಯ ತೋರಿಸಲಿಲ್ಲ. ಅವಳ ಸೌಂದರ್ಯ ಅವಳಲ್ಲಿ ಇಲ್ಲದ ಮತ್ಸರವನ್ನು ಹುಟ್ಟಿಸಿತೇನೊ ಒಂದು ನಿಮಿಷಕ್ಕೆ ಮೊದಲು ಹಾಲುಗಡಲಿನಂತಿದ್ದ ಅವಳ ಹೃದಯುದಲ್ಲಿ ಹುಳಿಯ ಹನಿ ಬೆರೆತಿತು.

ಗಾಡಿ ಕೂಗಿತು. ಮೂರ್ತಿ ಓಡುತ್ತ ಬಂದು ಆ ಯುವತಿಗೆ ಟಿಕೇಟು ಕೊಟ್ಟ. ಅವಳು ಮಂದಹಾಸವನ್ನು ಬೀರುತ್ತ 'ಉಪಕಾರವಾಯಿತು' ಎಂದಳು. ಯುವತಿಯ ಮಂದಹಾಸವು ಮೂರ್ತಿಯ ಮುಖದಲ್ಲಿಯೂ ಮೂಡಿತು. ಪರಿಮಳಾ ಇವರಿಬ್ಬರ ಮಂದಹಾಸವನ್ನು ಗ್ರಹಿಸಿದಳು. ಅವಳಿಗೆ ತಡೆಯುವದಾಗಲಿಲ್ಲ.' ಹಮಾಲನನ್ನಷ್ಟು ಕೂಗಬಾರದೇ' ಎಂದಳು. ಮೂರ್ತಿ ಗಡಬಡಿಸಿದ.

ಎರಡನೇ ವರ್ಗದ ಒಂದೇ ಡಬ್ಬಿಯಲ್ಲಿ ಏಳು ಜನ ಕುಳಿತುಕೊಳ್ಳ ಬೇಕಾಯಿತು. ಮೂರ್ತಿಯ ಎದುರಿಗೆ ಆ ಯುವತಿ ಮಂಡಿಸಿದಳು. ಗಾಡಿ ಹೊರಡುವ ಹೊತ್ತಿಗೆ ಮೂರ್ತಿ ಸಾಮಾನುಗಳನ್ನೆಲ್ಲ ವ್ಯವಸ್ಥಿತವಾಗಿರಿಸಿ ತನ್ನ ಆಸನದ ಮೇಲೆ ಕುಳಿತುಕೊಂಡು ಬೆವರೊರಿಸಿಕೊಳ್ಳುತ್ತ ಹೆಂಡತಿಯುನ್ನುದ್ದೇಶಿಸಿ "ಸಾಮಾನುಗಳೆಲ್ಲ ಬಂದಂತಾಯಿತಷ್ಟೆ" ಎಂದ ಪರಿಮಳಾ ಗೋಣು ಅಲ್ಲಾಡಿಸಿ ಒಪ್ಪಿಗೆಯನ್ನು ಸೂಚಿಸಿದಳು.' 'ಜೀವನಕ್ಕಿಂತ ಜೀವನದ ಸಾಮಗ್ರಿ ರಕ್ಷಣೆಯಲ್ಲಿಯೇ ಸಂಸಾರಿಕ ಹಾಳಾದ' ಎಂದು ಉಕ್ಕೆಂದು ನುಡಿದ. ಆ ಮಾತು ಯಾರನ್ನೂ ಉದ್ದೇಶಿಸಿ ಮಾತನಾಡಿದುದಲ್ಲ. ಅದು ಮೂರ್ತಿಯ ಸ್ವಗತಪರ ಭಾಷಣವಾಗಿತ್ತು.

ಎದುರಿಗೆ ಕುಳಿತ ಯುವತಿಗೆ ಮೂರ್ತಿಯ ಮಾತು ಮನಸ್ಸನ್ನು ಹೊಕ್ಕಿತೇನೋ ಕಿಲಕಿಲನೆ ನಕ್ಕಳು. ಆ ನಗೆಯು ತೆರೆ ತೇಲಿ ಬಂದು ಮೂರ್ತಿಯ ಬಗೆಯನ್ನು ಕದಡಿದಾಗ ಅವನು ಅವಳ ಅಪ್ರತಿಮ ಸೌಂದರ್ಯವನ್ನು ಕಂಡು ಅಪ್ರತಿಭನಾದ. ಅವಳು ನಕ್ಕದ್ದೂ ತನ್ನ ಪಾಡಿಗೆ. ಪರಿಮಳಾ ಮಾತ್ರ ಆ ನಗೆಯ ಚೆಲ್ಲಾಟದಲ್ಲಿ ಮೂರ್ತಿಯ ಮಾತೇ ಚೈತನ್ಯಕೊಟ್ಟಿತೆಂದು ಬಗೆದಳು. ಗಾಡಿ ಸಿಳ್ಳುಹಾಕಿ ಹೊರಟಿತು.

ಕೆಲ ಹೊತ್ತು ಎಲ್ಲ ಕಡೆಗೂ ಮೌನವಾಗಿದ್ದರಿಂದ ಗಾಡಿಯ ಧಡಿಕೆ ಮಾತ್ರ ಕೇಳಬರುತ್ತಿತ್ತು. ಆ ಯುವತಿ ವೃತ್ತ ಪತ್ರ ಬಿಚ್ಚಿದಳು, ಮೂರ್ತಿ

ಸಾಮಾನುಗಳ ಪುನರ್ನಿರೀಕ್ಷಣದಲ್ಲಿ ತೊಡಗಿದ. ಪರಿಮಳಾ ಒಂದೇ ಸವನೇ ಆ ಯುವತಿಯನ್ನೇ ನೋಡ ಹತ್ತಿದಳು, ಅವಳ ಅಂತರಂಗದಲ್ಲಿ ಯಾವುದೋ ಕಿರಳಿಕೆ ತಲೆದೋರಿದಂತೆ ಅವಳ ಇಳಿದ ಮುಖ ಸೂಚಿಸುತ್ತಿತ್ತು.

ಆ ಯುವತಿಯು ಗುಲಾಬಿ ಪತ್ತಲ ನೋಡುತ್ತಲಿದ್ದ ಪರಿಮಳಾ ತನ್ನ ಮುಗಿಲು ಬಣ್ಣದ ಸೀರೆಯನ್ನು ನೋಡಿಕೊಂಡಳು. ಆ ಬಣ್ಣ ಹೆಚ್ಚು ಆಕರ್ಷಣೀಯವೆಂದು ತೋರಿತವಳಿಗೆ. ಅವಳ ತಿಳಿ ನೀಲಿ ಬಣ್ಣದ ರೌಕೆ ತನ್ನ ಹೂವಿನ ಝುಂಪರನ್ನು ವಿರಾರಿಸಿ ನಿಂತಿರುವದೆಂದೇ ಅವಳ ಅಭಿಪ್ರಾಯ. ಅವಳಿಗೆ ಆಕ್ಷಣ ತಾನೊಂದು ಕಾಡುಪ್ರಾಣಿಯೆಂದೆನಿಸಿತೇನೋ ಹೌಹಾರಿ ಅವಳ ಮುಖ ನೋಡಲು ಮತ್ತೆ ಕಣ್ಣರಳಿಸಿದಳು ಆ ತುಂಬು ಮುಖ ಹುಣ್ಣಿಮೆಯ ಚಂದಿರನಂತಿತ್ತು. ತನ್ನ ಮುಖ . . . . ? . . . . ಅವಳಿಗೆ ತನ್ನ ಸೌಂದರ್ಯದ ಅಸ್ತಿತ್ವವೇ ತತ್ತರಿಸಿತೊಡಗಿದ ಭಾವನೆಯಾಗಿ ಆ ಬೆಡಗಿನ ಯುವತಿಯನ್ನು ಮತ್ತೆ ಮತ್ತೆ ನೋಡತೊಡಗಿದಳು. ಪ್ರತಿ ಸಲ ಪರಿಮಳಾ ನಿಗೆ ಅವಳು ಹೆಚ್ಚೆಚ್ಚು ಸುಂದರಿಯಾಗಿಯೇ ಕಾಣಹತ್ತಿದಳು. ತನಗೇ ಅವಳು ಇಷ್ಟು ಆಕರ್ಷಣೀಯಳಾಗಿರುವಾಗ . . . . . ಮೂರ್ತಿಯ ಮಂದಹಾಸ ಅವಳೆದುರು ಸುಳಿಯಿತು. "ಟಿಕೇಟನ್ನು ತರಲು ಇವರಿಗೆ ಏಕೆ ಅವಳು ಕೇಳಬೇಕಾಗಿತ್ತು? ಪೂರ್ವ ಪರಿಚಯವಿಲ್ಲದ, ಯಾವ ಹೆಂಗಸು ಅರಿಯದ ಗಂಡಸಿನೊಡನೆ ಮಾತನಾಡುವಳು? ಅವಳ ಆ ನಗೆಯ ಚೆಲ್ಲಾಟದ ಅರ್ಥ ವೇನು? ನಿಲ್ದಾಣದಲ್ಲಿ ಇವರು ದಾರೀ ಕಾಯುತ್ತ ಅತ್ತಿತ್ತ ಓಡಾಡುತ್ತಿರುವ ಸಂದರ್ಭ ಇವಳಿಗಾಗಿಯೇ ಇರಬಹುದಲ್ಲವೆ? ಇವರಿಗೆ ಧಾರವಾಡದ ಹುಚ್ಚು ಹಿಡಿಸಿದ . . . . . " ರೈಲು ಕೊಂಕುದಾರಿಗೆ ಹೊರಳಿದ್ದರಿಂದ ಜನವೆಲ್ಲ ಓರೆ ಯಾಗಿ ಅಲುಗಿದರು. ಪರಿಮಳಾನ ವಿಚಾರ ಲಹರಿಯ ತೆರೆಯು ಈ ಮೂಲಕ ಅಷ್ಟಕ್ಕೆ ನಿಲ್ಲಬೇಕಾಯಿತು. ಅವಳು ಒಮ್ಮೆಲೇ ಮೂರ್ತಿಯ ಕಡೆಗೆ ಕಕ್ಕಾಬಿಕ್ಕಿಯಾಗಿ ನೋಡಿದಳು. ಅವನು ತೂಕಡಿಸುತ್ತಿದ್ದ. ಅವನ ಕಾಲಬೆರಳಿಗೂ ಅವಳ ಕಾಲಬೆರಳಿಗೂ ಒಂದಗುಲದಷ್ಟು ಮಾತ್ರ ಸ್ಥಳವಿದ್ದು ದನ್ನು ಕಂಡ ಪರಿಮಳಾ ಗಾಬರಿಯಾದಳು. ಮೂರ್ತಿಯನ್ನು ಅಲುಗಾಡಿಸಿ ದಳು. ಮೂರ್ತಿ ಸರ್ರನೆ ಕಾಲು ಹಿಂದಕ್ಕೆ ಎಳೆದುಕೊಂಡ. ಆ ಯುವತಿ ತನ್ನ ಕಾಲಬೆರಳನ್ನೂ ಹಿಂದೆ ಸರಿಸಿದಳು. ಪರಿಮಳಾನ ಎದೆ ಡುಬುಡುಬು ಹಾರ ಹತ್ತಿತು. "ಪಾಪ! ಸಂಸಾರ ಸಾಮಗ್ರಿಗಳ ವ್ಯವಸ್ಥೆಯಲ್ಲಿ ಬಳಲಿ ಹೋಗಿದ್ದಾರೆ. ತಂಗಾಳಿಗೆ ಜಂಪು ಬರವಂತಿದೆ ಮಲಗಗೊಡಬಾರದೆ?" ಎಂದು ಆ ಯುವತಿ

ನಗೆಯಾಡಿದಳು, ಮೂರ್ತಿಗೆ ಈ ಸಂದರ್ಭದ ಅರಿವು ಇದ್ದಂತೆ ಕಾಣಲಿಲ್ಲ. ಅವನು ಸುಮ್ಮನೆ ನಗುತ್ತ ಹೌದು . . . . ಹೌದು . . . . ನನಗೆ . . . . ಜಂಪು" ಎಂದ.

ಪರಿಮಳಾನ ಎದೆ ಝಲ್ಲೆಂದಿತು. ಈ ಪ್ರವಾಸದಲ್ಲಿ ಬೇಡಾದ ವ್ಯಕ್ತಿ ಯೆಂದರೆ ತಾನೇ ಎಂದು ನಿರ್ಧರಿಸಿ ಅವಳು ಕೂಡಲೇ ದೂರಸಿಡಿದು ಕುಳಿತಳು. ಆ ಯುವತಿ ಮಂದಸ್ಮಿತಳಾಗಿ ಪರಿಮಳಾನನ್ನು ನೋಡಿದಳು. ಪರಿಮಳಾ ಕಣ್ಣು ತಪ್ಪಿಸಿದಳು. ಅವಳ ಮಂದಸ್ಮಿತದ ಸೊಂಕು ತನಗೆ ಬೇಡವೆಂದು ಬಗೆದಳೇನೊ? ಯುವತಿಗೆ ನಿರಾಶೆಯಾಯಿತು. ಅವಳು ಮತ್ತೆ ವೃತ್ತ ಪತ್ರ ಓದತೊಡಗಿದಳು.

"'ಲೋಂಡಾ' ಸ್ಟೇಶನ್ ಬರುವಂತಿದೆ ಪರಿಮಳಾ! ಚಹಾ ತರಿಸೋಣ ವಷ್ಟೆ!" ಮೂರ್ತಿ ಹೆಂಡತಿಯನ್ನು ಕೇಳಿದ.

ಅವಳು ಗೋಣು ಅಲ್ಲಾಡಿಸಿ ಮಾತ್ರ ಒಪ್ಪಿಗೆ ಸೂಚಿಸಿದಳು.

"'ಸ್ಪೆನ್ಸರ್' ಚಹ ತರಿಸುವುದೇ ಮೇಲು." ಆ ಯುವತಿ ನಡುವೆ ಬಾಯಿ ಹಾಕಿದಳು "ಆಗಬಹುದು" ಮೂರ್ತಿ ಆ ಯುವತಿಯ ಮುಖ ನೋಡುತ್ತ ಮುಗುಳು ನಗೆ ನಕ್ಕ.

ಲೋಂಡಾ ಸ್ಟೇಶನ್‌ದಲ್ಲಿ 'ಬಟ್ಲೆರ'ನೊಬ್ಬನು 'ಸರ್ವೀಸ ಟಿ' ಉಪಕರಣಗಳನ್ನು ತಂದು ಇಟ್ಟು ಹೋದ. ಆ ಯುವತಿ ಮೂರು ಕಪ್ಪುಗಳಲ್ಲಿ ಚಹಾ ಸಿದ್ಧಮಾಡಿ ಒಂದನ್ನು ಎತ್ತಿ ಮೂರ್ತಿಯ ಕೈಗಿತ್ತಳು. ಇನ್ನೊಂದನ್ನು ಪರಿಮಳಾನಿಗೆ ಕೊಡುವ ಮೊದಲೇ ಮೂರ್ತಿ ತನ್ನದನ್ನು ಅವಳಿಗೆ ಕೊಟ್ಟು ಬಿಟ್ಟಿದ್ದ. ಯುವತಿ ನಗುತ್ತ ಎರಡನೆಯ ಬಟ್ಟಲವನ್ನೂ ಮೂರ್ತಿಯ ಕೈಗಿತ್ತಳು.

ಈ ಸನ್ನಿವೇಶದ ಪರಿಣಾಮವಾಗಿ ಪರಿಮಳಾನಿಗೆ ಚಹ ಹೋಗದಾಯಿತು ಯುವತಿ ಅದನ್ನು ನೋಡಿ "ಸಕ್ಕರೆ ಕಡಿಮೆಯಾಗಿದ್ದರೆ ಮತ್ತೆ ಅದನ್ನು ಕೂಡಿಸಿಕೊಳ್ಳಬಹುದು" ಎಂದು ಸೂಚಿಸಿದಳು. ಚಹಕ್ಕೆ ಸಕ್ಕರೆ ಕಡಿಮೆ ಯಾಗಿರಲಿಲ್ಲ. ಆದರೂ ದಾಕ್ಷಿಣ್ಯಕ್ಕಾಗಿ ಪರಿಮಳಾ ಸಕ್ಕರೆ ಬೆರಸಿಕೊಂಡಳು.

ಗಾಡಿ ಮತ್ತೆ ಹೊರಡಲು ಎರಡು ನಿಮಿಷಗಳಿರುವಾಗ ಆ ಯುವತಿ ಕೆಳಗಿಳಿದು ನಿಂತಳು. ಹೊರಗಿನ ಶುದ್ಧ ಹವೆಗಾಗಿಯೇ ಎಂಬಂತೆ ತೋರುತ್ತದೆ. ಈ ಸಮಯವನ್ನು ಸಾಧಿಸಿ ಪರಿಮಳಾ ಅವಳ ಪರಿಚಯವನ್ನು ಮೂರ್ತಿಯಿಂದ

ಕೇಳಿ ತಿಳಿದುಕೊಳ್ಳಬೇಕೆಂದು ಹವಣಿಸಿದಳು. ಅವಳ ನಾಲಿಗೆ ಏಳಲಿಲ್ಲ. ಮೂರ್ತಿಗೆ ಹೆಂಡತಿ ಹೀಗೇಕೆ ಮೌನವನ್ನು ತಾಳಿರುವಳೆಂಬುದು ತಿಳಿಯಲಿಲ್ಲ.

"ಪರಿಮಳಾ! ಹೀಗೇಕೆ ಮೌನತಾಳಿದ್ದೀಯೆ. ನೋಡು ಅವರೆಷ್ಟು ಚೇತನಾಮಯರಾಗಿದ್ದಾರೆ" ಎಂದು ನುಡಿದು ಮೂರ್ತಿ ಆ ಯುವತಿಯ ಕಡೆಗೆ ನೋಡತೊಡಗಿದ.

ಪರಿಮಳಾನಿಗೆ ಉಗುಳು ನುಂಗುವಂತಾದರೂ ಅವಳು ಉತ್ತರ ಕೊಟ್ಟಳು.

"ಹೌದು ಅವಳು ಚೇತನಾಮಯಳಾಗಿದ್ದಾಳೆ"

"ರೈಲಿನಲ್ಲಿ ಹೊಸ ಪರಿಚಯಕ್ಕೆ ಬೇಕಾದಷ್ಟು ಅವಕಾಶವಿರುತ್ತದೆ. ಆ ಯುವತಿಯೊಡನೆ ಬೇಕಾದರೆ . . . . ."

"ಪೂರ್ವ ಪರಿಚಯದವರಾದ ನೀವೇ ಮಾತನಾಡುವದು ಒಳಿತು . . . ಅವಳೊಡನೆ ನನ್ನದೇನು ಕೆಲಸ?" ಮಾತಿನಲ್ಲಿ ತುಸು ಕಾವು ಏರಿ ಬಂದಂತಿತ್ತು.

"ಯಾರ ಪೂರ್ವ ಪರಿಚಯವೇ ಪರಿಮಳಾ?" . . . . . .

ಗಾಡಿ ಹೊರಟಿತು. ಆ ಯುವತಿ ಧಡಾರೆಂದು ಬಾಗಿಲು ಹಾಕುತ್ತ ಒಳನುಗ್ಗಿದಳು. ಅವಸರದಲ್ಲಿ ಅವಳ ಕಿರಿಬೆರಳು ಬಾಗಿಲ ಸಂದಿನಲ್ಲಿ ಸಿಕ್ಕಿ ತೇನೋ "ಅಯ್ಯೋ" ಎಂದು ಕಿರುಚಿದಳು. ಮೂರ್ತಿ ಗಾಬರಿಯಿಂದ "ಏನಾಯಿತು?" ಎನ್ನುತ್ತ ಎದ್ದು ನಿಂತು ನೋಡುತ್ತಿರುವಾಗ ಅವಳ ಕಿರಿ, ಬೆರಳಿನಿಂದ ನೆತ್ತರು ಸೋರುತ್ತಿತ್ತು. "ಅಯ್ಯೋ! ಪಾಪ. ಪರಿಮಳಾ ಸ್ವಲ್ಪ ಅರಿವೆಯ ಚೂರನ್ನು ಕೊಡಬಾರದೆ?" ಎಂದ. ಆ ಯುವತಿ ಬೆರಳನ್ನು ಹಿಡಿದುಕೊಂಡು ತನ್ನ ಆಸನದ ಮೇಲೆ ಕುಪ್ಪರಿಸಿದಳು. ಮೂರ್ತಿ ಕೂಡಲೇ ತನ್ನ ಜೇಬಿನೊಳಗಿನ ಕರವಸ್ತ್ರವನ್ನು ಹರಿದು ನೀರಿನಲ್ಲಿ ತೋಯಿಸಿದ. ಆ ಯುವತಿ ಕೈ ಚಾಚಿದಳು. ಮೂರ್ತಿ ಆ ಸುಕೋಮಲ ಕರವನ್ನು ಹಿಡಿದು ಅರಿವೆ ಸುತ್ತ ತೊಡಗಿದ.

ಮೂರ್ತಿಯ ಕರದಲ್ಲಿ ಪ್ರತಿಷ್ಠಾಪನೆಗೊಂಡಿದ್ದ ಯುವತಿಯ ಕಿರಿಬೆರಳನ್ನು ನೋಡುವಾಗ, ಪರಿಮಳಾ ಅವಳ ಸುಂದರವಾದ ನಿಡಿತೋಳನ್ನು ನೋಡಿದಳು. ಅವಳಿಗೆ ಆ ತೋಳು ತನ್ನ ತೋಳಿನಕ್ಕಿಂತ ಹೆಚ್ಚು ಸುಂದರವಾದುದೆಂದು ಭಾಸವಾಯಿತು. ಆ ಯುವತಿಯ ತೆರವಾದ ತೋಳು,

ಅರೆಜಾರಿದ ಸೆರಗು, ಅರಿವೆ ಸುತ್ತುತ್ತಿರುವಾಗ ಮೂರ್ತಿಯ ತೀರ ಸನಿಯಕ್ಕೆ ಹೋದ ಅವಳ ದುಂಡುಮುಖ ಪರಿಮಳಾನಿಗೆ ದಿಗ್ಭ್ರಮೆಯನ್ನುಂಟುಮಾಡಿ ದವು. ಮೂರ್ತಿ ದೀಕ್ಷಾಬದ್ಧನಾದ ಸೇವಕನ ಹಾಗೆ ಅವಳ ಸೇವೆಮಾಡು ತ್ತಿರುವಲ್ಲಿ ಅವಳಿಗೆ ಅಚ್ಚರಿಯಾಗಲಿಲ್ಲ, ಮತ್ಸರವೆನಿಸಿತು. ಅರಿವೆ ಸುತ್ತಿ ಆದ ಮೇಲೆ ಮೂರ್ತಿ, ಅವಳ ದುಂಡುಮೊಗವನ್ನು ಸಂಪೂರ್ಣವಾಗಿ ನೋಡುತ್ತ, "ಅಷ್ಟು ಅವಸರವೇನಿತ್ತು?" ಎನ್ನುತ್ತ ಕೈತೊಳೆದುಕೊಂಡ.

"ವಿಷಮ ವೇಳೆ" ಎಂದಾಯುವತಿ ಮೂರ್ತಿಯ ಕಣ್ಣುಗಳನ್ನು ಎದು ರಿಸಿ ಮಂದಸ್ಮಿತ ಬೀರಿದಳು.

"ಈಗ ನೋವಿಲ್ಲವಷ್ಟೆ?" ಎಂದು ಮೂರ್ತಿ ನುಡಿದು, ಮೇಲಿನ ಜೇಬಿ ನೊಳಗಿನ ಕರವಸ್ತ್ರದಿಂದ ಕೈ ಒರಸಿಕೊಳ್ಳಹತ್ತಿದ. ಜೇಬಿನೊಳಗಿನ ಕರವಸ್ತ್ರ ವನ್ನು ತೆಗೆಯುತ್ತಿರುವಾಗ, ಒಂದೆರಡು ದಪ್ಪಕಾಗದದ ತುಣುಕಿನಂತಹವು ಕೆಳಗೆ ಬಿದ್ದುದನ್ನು ಮೂರ್ತಿ ಗಮನಿಸಲಿಲ್ಲ. ಪರಿಮಳಾನ ಲಕ್ಷ್ಯವೂ ಅತ್ತ ಇರಲಿಲ್ಲ. ಆ ಯುವತಿ ಆಕ್ಷಣ ಬಗ್ಗಿ, ಆ ತುಣುಕುಗಳಲ್ಲಿ ಒಂದನ್ನು ತೆಗೆದು ಕೊಂಡಳು. ಈ ಸಂದರ್ಭವು ಮಿಂಚಿನಂತೆ ಆಗಿಹೋಗಿದ್ದರಿಂದ, ಯಾರಿಗೂ ಅದರ ಅರಿವಾಗಲಿಲ್ಲ.

"ತಮಗೆ ಸುಮ್ಮನೆ ತೊಂದರೆಯಾಯಿತು. ಕ್ಷಮಿಸಬೇಕು," ಆ ಯುವತಿ ಮುಖದಲ್ಲಿ ಮುಗುಳು ಬಿರಿಯುತ್ತಿರಲು ಮೂರ್ತಿಯ ಆಭಾರ ಮನ್ನಿಸಿದಳು.

"ಇದೆಂತಹ ತೊಂದರೆ. ಪಾಪ! ನಿಮಗೆ ನೋವಾಯಿತು." ಮೂರ್ತಿಯ ಮುಖವರಳಿತ್ತು.

ನೋವಿನ ವಾತಾವರಣದಲ್ಲಿಯೂ ಸೂಸಿಬರುವ ಈ ನಗೆಯು ಪರಿಮಳಾ ನಿಗೆ ವಿಚಿತ್ರವೆನ್ನಿಸಿ, ಅವಳ ಬಗೆಗಡಲನ್ನು ಕದಡಿತು.

ಧಾರವಾಡ ನಿಲ್ದಾಣದಲ್ಲಿ ಇಳಿದುಹೋಗುವಾಗ, ಆ ಯುವತಿ ಮೂರ್ತಿಗೆ ತನ್ನ ಕೃತಜ್ಞತೆಯನ್ನು ಮತ್ತೆ ಸೂಚಿಸಿ, ಅರ್ಥಪೂರ್ಣವಾದ ನೋಟವನ್ನು ಬೀರಿ ಮಿಂಚಿನಂತೆ ಮಾಯುವಾದಳು. ಮೂರ್ತಿಯ ಕಣ್ಣು ಅವಳತ್ತ ತೇಲಿ ಹೋಯಿತು. ಅವನ ಕಣ್ಣುಗಳಲ್ಲಿ ಪರಿಮಳಾ ಅದಾವುದೋ ನೋವು ಮಿಂಚಿ ಮಾಯುವಾಯಿತೆಂಬುದಾಗಿ ಭಾವಿಸಿದಳು ಅವಳ ಕಣ್ಣ ಮುಂದೆಯೂ ಆ ಯುವತಿ ಕುಣಿಯತೊಡಗಿದಳು. ಅವಳ ಆ ಚಂಚಲನೋಟ, ಇವಳಲ್ಲಿ

ಚಿತ್ತಚಾಂಚಲ್ಯವನ್ನುಂಟುಮಾಡಿತು. ಅವಳ ಆ ಸುಂದರವಾದ ಆಕೃತಿ ಇವಳ ಹೃದಯದಲ್ಲಿ ನೆಟ್ಟುನಿಂತಿತು. ಅವಳು ಮರೆಯಾದರೂ ಅವಳ ಅರಿವು ಮಾಯವಾಗಲಿಲ್ಲ. ಪರಿಮಳಾ ಗಾಸಿಯಾದಳು.

ತನ್ನ ಅಚ್ಚುಮೆಚ್ಚಿನ ಧಾರವಾಡದಲ್ಲಿ ಹೆಂಡತಿಯೊಡನೆ ಹೊಸ ಸಂಸಾರ ಹೂಡಿದ ಮೂರ್ತಿಯ ಹಿಗ್ಗು ಹಿಡಿಸದಾಯಿತು. ಒಂದೆರಡು ದಿನಗಳಲ್ಲಿಯೇ ಹೆಂಡತಿಗೆ ಧಾರವಾಡದ ಪರಿಚಯಮಾಡಿಕೊಟ್ಟ. ತಾನು ಕಲಿತ ಕಾಲೇಜಿನ ಭವ್ಯ ಕಟ್ಟಡವನ್ನು ಅವಳಿಗೆ ತೋರಿಸಿದ. ಕಾವ್ಯಮಯವಾದ ಸಾಧನಕೇರಿಯ ದಿವ್ಯ ವಾತಾವರಣದಲ್ಲಿ ಅವಳೊಡನೆ ಸುತ್ತಾಡಿಬಂದ. ತನ್ನ 'ತಯಾರಿ ರಜ' ಮುಗಿಯುವ ಹೊತ್ತಿಗೆ ಹೆಂಡತಿಗೆ ಧಾರವಾಡ ಜೀವನದ ಸಮಗ್ರ ಪರಿಚಯ ಮಾಡಿಕೊಟ್ಟ. ಮೂರ್ತಿಯ ಹಿಗ್ಗನ್ನು ಕಂಡ ಅವನ ಹೆಂಡತಿ ಪೂರಾ ಹಿಗ್ಗಿದಳು. ಮೂರ್ತಿಯ ಜೀವನದಲ್ಲಿಯೇ ಬೆರೆತುಹೋದ ಸಾಧುಜೀವಿಯವಳು! ಈ ಮಧ್ಯೆ ಆ ಯುವತಿಯ ನೆನಪು ಆಗಾಗ ತೂರಿಬರುವದು. ಅವಳ ಪರಿಚಯುವನ್ನು ಕೇಳಿಕೊಳ್ಳಬೇಕೆಂದು ಪರಿಮಳಾ ಅನೇಕ ಬಾರಿ ಹಾತೊರೆದಳು. ಆದರೆ ಈ ಮಾತಿನಿಂದ ಅವನ ಹೃದಯದ ಹಾಲುಕೆನೆ ಎಲ್ಲಿ ಕದಡುವದೋ ಎಂದು ಧೈರ್ಯಸಾಲದೆ ಆ ವಿಷಯವನ್ನು ಮುಂದೂಡಿದಳು. ಒಮ್ಮೊಮ್ಮೆ ಆ ಯುವತಿ ಅವಳನ್ನು ಪೂರಾ ಕಂಗೆಡಿಸುವಳು.

ದಿನಾಲು ಸಂಜೆಯ ಐದು ಗಂಟೆಗೇ ಸರಿಯಾಗಿ ಮನೆಯಲ್ಲಿರುತ್ತಿದ್ದ ಮೂರ್ತಿ, ಇತ್ತೀಚೆಗೆ ರಾತ್ರಿ ಒಂಭತ್ತು ಗಂಟೆಯಾದರೂ ಮನೆಯನ್ನೇ ಕಾಣದಾದ. ಯುದ್ಧಮೂಲಕ ಪರಿಸ್ಥಿತಿಯಿಂದ ಹದಗೆಟ್ಟ ಆಫೀಸಿನ ಕೆಲಸ ಸ್ವಾತಂತ್ರ್ಯ ಸಿಕ್ಕಮೇಲೆ ವಿಪರೀತವಾಗಿ ಬೆಳೆದಿತ್ತು. ತಾನು ಸಮರ್ಥಕಾರ್ಯ ಕುಶಲನೆಂದು ಹೆಸರು ಗಳಿಸಿಕೊಂಡು, ಅದರಲ್ಲಿ ತನ್ನ ಭವಿಷ್ಯದ ಭವ್ಯಜೀವನದ ರೂಪರೇಷೆಗಳನ್ನು ಗುರುತಿಸಿಕೊಂಡಿದ್ದ ಮೂರ್ತಿ, ಅನೇಕ ಗಂಟೆಗಳ ಕಾಲ ಕೆಲಸಮಾಡುವದು ಅನಿವಾರ್ಯವಾಗಿಬಿಟ್ಟಿತು. ಮನೆಯಲ್ಲಿ ಪರಿಮಳಾ ಒಬ್ಬಳೇ ಇರುವದರಿಂದ, ಅವಳಿಗೆ ಇದು ತುಂಬಾ ತೊಂದರೆಗಿಟ್ಟುಕೊಳ್ಳುತ್ತದೆ ಎಂಬ ಮಾತನ್ನು ಅವನು ಅರಿತರೂ, ಕೆಲವು ದಿನ ಕಳೆದ ಮೇಲೆ ಎಲ್ಲವೂ ಸರಿಯಾಗುವುದೆಂದು ಭಾವಿಸಿದ. ಮೇಲಾಗಿ ತನ್ನ ಜೀವನದ ಉತ್ತರೋತ್ತರ ಏಳಿಗೆಯಲ್ಲಿ ಹಿಗ್ಗುವ ಅವಳು ಇದನ್ನು ಕೆಲದಿನಮಟ್ಟಿಗೆ ಸಹಿಸುವಳೆಂದೇ ತಿಳಿದ. ತನ್ನ ಮುಂದಿನ ಸುಖ ಅವಳಿಗಾಗಿಯೇ ಎಂದು ಭಾವಿಸಿದ ಮೂರ್ತಿ

ಪರಿಮಳಾನ ಅಂತರಂಗವನ್ನು ಗುರುತಿಸಲಿಲ್ಲ. ಅವನ ಪ್ರೇಮಜ್ಯೋತಿ ನಂದಾ ದೀಪವಾಗಿ ಬೆಳಗುತ್ತಿತ್ತು.

ಮೂರ್ತಿಯಲ್ಲಾದ ಈ ಅನಿರೀಕ್ಷಿತ ಮಾರ್ಪಾಟನ್ನು ಕಂಡ ಪರಿಮಳಾ ತಳಮಳಗೊಂಡಳು. ಮನೆಗೆ ಬಂದ ಮೂರ್ತಿ ಕೆಲಸದ ಭಾರದಲ್ಲಿ ಹೈರಾಣ ವಾಗಿರುತ್ತಿದ್ದುದರಿಂದ, ಅವನು ಹೆಚ್ಚು ಮಾತನಾಡದೆ ವಿಶ್ರಾಂತಿ ತೆಗೆದುಕೊಳ್ಳು ತ್ತಿದ್ದ. ಮೂರ್ತಿಯ ಈ ಮಾತಿನ ಬಿಗುವು ಅವಳಿಗೆ ತೀರ ವಿಚಿತ್ರವೆನ್ನಿಸ ತೊಡಗಿತು. ನಾಲ್ಕೆಂಟು ದಿನ ಹೀಗೆ ಕಳೆದಮೇಲೆ ಅವಳಿಗೆ ಧಾರವಾಡದ ಜೀವನವೇ ಅಸಹ್ಯವೆನ್ನಿಸತೊಡಗಿತು. ಮೂರ್ತಿಯ ಈ ಮಾರ್ಪಾಟಿಗೆ ಆ ಯುವತಿ ಕಾರಣಳಾಗಿರಬಹುದೇ ಎಂದೊಮ್ಮೆ ಅವಳು ಚಿಂತಿಸಿ ಭಯಗ್ರಸ್ತ ಳಾಗುವಳು. ಈ ಭಯದ ಗರ ಹಿಡಿದಂತೆ ಅವಳು ತೀರಾ ಕಂಗೆಡ ಹತ್ತಿದಳು. ಅವಳ ತೇಜಃಪುಂಜವಾದ ಕಣ್ಣುಗಳಲ್ಲಿಯ ಕಾಂತಿ ದಿನದಿನವೂ ಮಂದವಾಗ ತೊಡಗಿತು. ತಾನೊಂದು ಸಂಸಾರಚಕ್ರ ತಿರುಗಿಸುವ ಮೂರ್ತಿಯ ಕೇವಲ ಅನುಕೂಲದ ಗೊಂಬೆಯೆಂಬ ಭಾವನೆಯಿಂದ ಅವಳ ಅಭಿಮಾನಕ್ಕೆ ಬರೆ ಎಳೆದಂತಾಯಿತು. ಮೂರ್ತಿಯ ಪ್ರೇಮದ ಅಂದಿನ ಹುಚ್ಚು ಹೊಳೆ ಯನ್ನೂ ಇಂದಿನ ನೀರಸ ಜೀವನವನ್ನೂ ಅವಳು ತೂಗಿ ನೋಡಿದಾಗ ಅವಳಿಗೆ ತಾನೊಂದು ಗಂಡಾಂತರ ಪ್ರಸಂಗವನ್ನು ಎದುರಿಸಬೇಕಾದ ಸಂದರ್ಭವು ಬಂದಿದೆಯೆಂದು ನಿರ್ಧರಿಸಿದಳು. ಅವಳ ಹೃದಯದಲ್ಲಿ ಹೊಗೆಯಾಡಿತು. ಆ ಹೊಗೆ ಆಗಾಗ ಕಣ್ಣು ತುಂಬುತ್ತಿದ್ದಂತೆ ಕಣ್ಣೀರುಗಳು ಚೆಲ್ಲವರಿದು, ಸೂಸುತ್ತಿದ್ದವು. ಆರಳಿದ ಹೂವಿನಂತಿದ್ದ ಅವಳ ಮುಖವಿಂದು ಹುಳ ಕೊರೆದ ಹೂವಿನಂತಾಯಿತು. ಈ ಪರಿಸ್ಥಿತಿಯನ್ನು ಹಾಗೆಯೇ ಮುಂದು ವರಿಸಿದರೆ ಪೂರ ಹದಗೆಡಬಹುದೆಂಬ ವಿಚಾರದಿಂದ ಅವಳಿಗೆ ಇದರ ಇತ್ಯರ್ಥ ವನ್ನು ಮಾಡಿಯೇ ಬಿಡಬೇಕೆಂಬ ಲವಲವಿಕೆ ಉತ್ಪನ್ನವಾಯಿತು. ಆ ದಿನ ಅವಳು ಮೂರ್ತಿ ಬರುವ ದಾರಿಯನ್ನೇ ಕಾಯತೊಡಗಿದಳು.

ಆ ಹೊತ್ತು ವಿಪರೀತವಾಗಿ ಕೆಲಸಮಾಡಿ ಬಂದ ಮೂರ್ತಿ ತೀರ ಹೈರಾಣ ವಾದವನಂತೆ ನೇರವಾಗಿ ಕೋಣೆಗೆ ಹೋಗಿ ಕೋಟನ್ನು ಕೂಡ ತೆಗೆಯದೆ 'ಕಾಟ'ನ ಮೇಲೆ ಬಿದ್ದುಕೊಂಡನು. ದಿನಾಲು ದೂರಿನಿಂದಲೇ ಸಾಯಕಲ್ಲ ಗಂಟೆಯನ್ನು ಕೇಳಿ ಸಂಭ್ರಮದಿಂದ ಸ್ವಾಗತಿಸುತ್ತಿದ್ದ ಪರಿಮಳಾನ ಮಂದ ಹಾಸದ ಮುಖವು ಅವನನ್ನು ಆ ದಿನ ಸ್ವಾಗತಿಸದಿದ್ದುದನ್ನೂ ಅವನು ಲಕ್ಷಕ್ಕೆ ತರಲಿಲ್ಲ. ಅಷ್ಟು ದಣಿದು ಹೋಗಿದ್ದ. ಬಂದು ಹತ್ತು ನಿಮಿಷಗಳಾ

ದರೂ ಒಳಕ್ಕೆ ಬಾರದ ಮೂರ್ತಿಯ ಬಗೆಯನ್ನು ಪರಿಮಳಾಗ್ರಹಿಸದಾದಳು. ಏನೇ ಆಗಲಿ ಈ ಹೊತ್ತು ಕೇಳಿಯೇ ಬಿಡೋಣ ಎನ್ನುತ್ತ ಸಾವಕಾಶವಾಗಿ ಕೋಣೆಗೆ ನಡೆದಳು. ಅಲ್ಲಿ 'ಕಾಟ್'ನ ಮೇಲೆ ಮಲಗಿದ ಮೂರ್ತಿ ಕರುಣಾ ಜನಕವಾಗಿ ಕಂಡರೂ ಅವಳ ನಿರ್ಧಾರ ಅಲುಗಲಿಲ್ಲ. ಅವಳು ಸ್ವಲ್ಪ ಗಡು ಸಾದ ದನಿಯಲ್ಲಿಯೇ, "ಹೀಗೆಲ್ಲಾ ನೀವು ದಿನಾಲು ಸರಿರಾತ್ರಿಗೆ ಮನೆಗೆ ಬಂದರೆ ನನ್ನ ಗತಿಯೇನು? ಇತ್ತೀಚೆಗೆ ನೀವೇನೋ ಒಂದು ತರಹಾ ಆಗಿರು ವಿರಲ್ಲ" ಎಂದು ಬಿಟ್ಟಳು.

"ಸ್ವಲ್ಪ ಕೆಲಸ ಜಾಸ್ತಿ ಪರಿಮಳಾ"

"ನಿಮ್ಮ ಕೆಲಸ ನನಗೆಲ್ಲ ಗೊತ್ತು"

"ಅಂದ ಬಳಿಕ ಕೇಳುವದರಲ್ಲಿ ಅರ್ಥವೇನಿದೆ?"

"ಇದು ಹೀಗೆಯೇ ಮುಂದೆ ನಡೆದರೆ."

"ನಮ್ಮ ತಾಳ್ಮೆಯಲ್ಲಿಯೇ ಉಜ್ವಲ ಭವಿಷ್ಯವಿದೆ, ಪರಿಮಳಾ!"

"ಯಾರಿಗೆ?"

"ನನಗೆ — ನಿನಗೆ — ಮತ್ತಾರಿಗೆ?

"ನನ್ನ ಭವಿಷ್ಯವನ್ನು ಅರಿಯದಷ್ಟು ಮೂಢಳೇ ನಾನು?"

"ಇಂತಹ ಕೊಂಕಿನ ಮಾತುಗಳನ್ನು ಹೊಸದಾಗಿ ಕಲಿತಂತೆ ಕಾಣು ತ್ತದೆ."

"ಹೊಸ ಜೀವನದಲ್ಲಿ ಹೊಸಮಾತು ಬರುವಂತಾದರೆ ಬಂದೇ ತೀರು ವದು."

"ನಿನ್ನ ಮಾತು ನನಗೆ ಅರ್ಥವಾಗಲೊಲ್ಲವು."

"ಇನ್ನೊಬ್ಬರ ಮಾತು ನಿಮಗೆ ಅರ್ಥ ಪೂರ್ಣವಾಗುತ್ತಿರುವಾಗ ನನ್ನ ಮಾತು ನೀರಸ ತಾನೆ?"

ಪರಿಮಳಾನ ಕಣ್ಣಲ್ಲಿ ನೀರೂರಿದುದನ್ನು ಕಂಡ ಮೂರ್ತಿಗೆ ಸಂದರ್ಭ ತಿಳಿಯದಾಯಿತು. ಅವನು ಚಟಕ್ಕನೇ ಎದ್ದು ಕುಳಿತು.

"ನಿನಗೆ ಆಗಿರುವದಾದರೂ ಏನು ಪರಿಮಳಾ! ಹೀಗೇಕೆ ಹುಚ್ಚಳಂತೆ ಮಾತನಾಡತೊಡಗಿರುವಿ.?"

"ಆ ಯುವತಿ ಯಾರೆಂಬುದನ್ನು ಹೇಳಬಹುದೇ ತಾವು?"

"ಯಾವ ಯುವತಿಯೋ ಹುಚ್ಚಿ" ಪರಿಮಳಾನನ್ನು ಹತ್ತಿರ ಎಳೆದು ಕೊಂಡ.

"ಆ ಹೊತ್ತು ಗಾಡಿಯಲ್ಲಿ ನಿಮ್ಮೊಡನೆ ಸಲ್ಲಾಪ ಮಾಡಿದಳಲ್ಲ ಅವಳೇ."

"ಓ ಹೋ! ಅವಳೇ?

"ಹೌದು. ಅವಳೇ."

"ಅವಳೊಬ್ಬ ಪ್ರವಾಸಿ."

"ಅದನ್ನು ನೀವು ನನಗೆ ಹೇಳಬೇಕಾಗಿಲ್ಲ."

"ಹಾಗಾದರೆ ಏನೆಂದು ಹೇಳಲಿ?"

"ಅವಳಾರೆಂಬುದನ್ನು ಹೇಳಿರಿ."

"ಹೇಳಿದೆನಲ್ಲವೇ. ಅವಳೊಬ್ಬ ಪ್ರವಾಸಿ ಎಂದು."

ಪರಿಮಳಾನ ಅಭಿಮಾನಕ್ಕೆ ಮತ್ತೆ ಬರೆ ಎಳೆದಂತಾಯಿತು.

"ಅವಳ ಪರಿಚಯವನ್ನು ಗುಪ್ತವಾಗಿಡುವಲ್ಲಿ ಈಗ ಯಾವ ಅರ್ಥವೂ ಇಲ್ಲ."

"ಅವಳ ಪರಿಚಯದಿಂದ ನಿನಗಾಗಬೇಕಾದುದೇನು? ಸುಮ್ಮನೆ ತಲೆ ಕೆಡಿಸಿಕೊಳ್ಳುತ್ತೀ ಅಯಿತು"

"ಅವಳ ಪರಿಚಯದ ಅಗತ್ಯವಿದೆ ನನಗೆ. ನೀವು ಹೇಳಲೇ ಬೇಕು."

"ನನ್ನಿಂದ ಈ ಮಾತು ಸಾಧ್ಯವೇ ಇಲ್ಲ."

ಮೂರ್ತಿಯ ಈ ಮಾತಿನಿಂದ ಪರಿಮಳಾ ಅನೇಕ ಚಿತ್ರಗಳನ್ನು ಕಲ್ಪಿಸಿ ಕೊಂಡಳು. ಅವಳಿಗೆ ತನ್ನ ಜೀವನದ ಹಡಗವು ಅರ್ಥ ಮುಳುಗಿದ ಭಾಸವಾಗಿ ಕಾಲು ತತ್ತರಿಸ ತೊಡಗಿದವು. ಅವಳು ಮಂಚದಿಂದ ದೂರ ಸರಿದು ಮೂರ್ತಿಯನ್ನು ದುರದುರನೆ ನೋಡತೊಡಗಿದಳು.

ಅವಳ ಆ ನಿಲುವಿನಲ್ಲಿ ಮೂರ್ತಿ ಅವಳ ಕಂಗೆಟ್ಟ ಪರಿಸ್ಥಿತಿಯನ್ನು ಕಂಡುಕೊಂಡರೂ ಅವನಿಗೆ ಏನು ಹೇಳಬೇಕೋ ತಿಳಿಯದಾಯಿತು. ಅವನಿಗೆ ಆ ಹೊತ್ತಿನಲ್ಲಿ ವಿಶ್ರಾಂತಿ ಬೇಕಾಗಿದ್ದಿತು. ಒಲುಮೆಯ ಅವಶ್ಯಕತೆಯಿತ್ತು. ಇವಳ ಈ ಹುಚ್ಚಿಗೆ ಮೌನವೇ ಔಷಧವೆಂದು ಎನ್ನಿಸಿದರೂ ಅವನಿಗೆ ಅವಳ ಬಗ್ಗೆ ಕನಿಕರವಾಯಿತು. ಅವನು ಎದ್ದು ಹೋಗಿ ಅವಳ ಮುಂಗುರುಳು ಗಳನ್ನು ನೇವರಿಸುತ್ತ,

"ನಿನಗೆ ಹುಚ್ಚು ಹಿಡಿದಿಲ್ಲವಷ್ಟೆ" ಎಂದ.

"ಅದಷ್ಟೆ ಈಗ ಉಳಿದಿರುವ ಬಾಕಿ" ಎಂದಳು ಪರಿಮಳಾ.

"ಸದ್ಯಕ್ಕೆ ಊಟಕ್ಕಂತೂ ಹಾಕು. ಹಸಿದು ಕಂಗಾಲಾಗಿದ್ದೇನೆ"— ಎಂದು ಮೂರ್ತಿ ನಿರಾಶೆಯಿಂದ ನುಡಿದ. ಅವನಿಗೆ ಸಮಸ್ಯೆಯ ಅರಿವಾಯಿತು.

ಮೂರ್ತಿ ಹಸಿದ ಮಾತನ್ನು ಕೇಳಿ ಪರಿಮಳಾನಿಗೆ ವ್ಯಥೆಯಾಯಿತು. ಅವಳಿಗೆ ತನ್ನ ಮಾತಿನ ಇತ್ಯರ್ಥವಾಗದಿದ್ದುದರ ವೇದನೆ ಅತಿಯಾಗಿದ್ದರೂ, ಗಂಡನ ಬಳಲಿಕೆಯನ್ನು ಕೇಳಿ, ಆ ಮಾತನ್ನು ಅಲ್ಲಿಗೇ ನಿಲ್ಲಿಸಿ ಹೊರಡಲನುವಾದಳು.

ಮೌನವಾಗಿ ಊಟ ಪೂರೈಸಿತು.

೪

ಮೊದಲೇ ದೇಹದಿಂದ ದಣಿದ ಮೂರ್ತಿಗೆ ಅಂದಿನ ವಾತಾವರಣದಿಂದ ಮನಸ್ಸಿನ ನೆಮ್ಮದಿಯೂ ತಪ್ಪಿತು. ಅವನು ಯೋಚನಾಪರನಾಗಿ 'ಕಾಟ'ನ ಮೇಲೆ ಬಿದ್ದುಕೊಂಡು 'ಪರಿಮಳಾನ ಹುಚ್ಚನ್ನು' ಹೇಗೆ ಬಿಡಿಸಬೇಕೆಂಬ ಯೋಜನೆಯನ್ನು ಯೋಚಿಸತೊಡಗಿದ. ಯೋಚಿಸಿದಂತೆ ಯೋಚನೆಗಳೇ ಹೊಳೆಯುದ್ದರಿಂದ, ಅವನ ತಲೆ ಭಾರವಾಗಿಬಿಟ್ಟಿತು. ಸಮಸ್ಯೆ ಪರಿಹಾರವಾಗುವ ಯಾವ ಹಂಚಿಕೆಯೂ ಹೊಳೆಯದ್ದರಿಂದ, ಅವನು ನಿರ್ವಿಣ್ಣನಾದಂತವನಾಗಿ ನಿಟ್ಟುಸಿರುಬಿಡಹತ್ತಿದನು. ಅವನ ನಿಟ್ಟುಸಿರಿನ ಹೊಡೆತಕ್ಕೆ ಹತ್ತಿರವಿದ್ದ ದೀಪ ತತ್ತರಿಸಿತು. ಆ ಹೊತ್ತೇ ಮೊದಲನೇ ಸಲ ಅವನ ಕಣ್ಣೆದುರಿಗೆ ಆ ಗುಲಾಬಿಯ ಪತ್ತಲ— ಚಹನೀಡುವ ದೃಶ್ಯ – ನೆತ್ತರಿನ ಕೆಂಬೆರಳು– ಆ ಯುವತಿಯ ಮಂದಸ್ಮಿತ — ಕಂಗೊಳಿಸಿದವು. ಈ ಮೊದಲು ಅವನಿಗೆ ಆ ಯುವತಿಯ ನೆನಪೂ ಕೂಡ ಆಗಿರಲಿಲ್ಲ. ಈ ವಿಚಿತ್ರ ಸಂದರ್ಭವನ್ನು ಅವನು ಪರಿಮಳಾನಲ್ಲಿ ಬಿಂಬಿಸುವದು ಹೇಗೆಂಬುದೇ ಅವನಿಗೆ ತಿಳಿಯದ ಸಮಸ್ಯೆಯಾಗಿ ಬಿಟ್ಟಿತು. "ನನ್ನ ಮನಸ್ಥಿತಿಯನ್ನೂ ಸತ್ಯದ ಪರಿಜ್ಞಾನವನ್ನೂ ಅವಳಿಗೆ ಹೇಗೆ ಹೇಳುವದು? ಹೇಳಿದರೆ ಅವಳು ನಂಬುವದೂ ಅಸಾಧ್ಯ. ಆ ಯುವತಿ ಯಾರೆಂಬುದನ್ನು ಹೇಳುವ ಬಗೆಯಾದರೂ ಹೇಗೆ? ಅವಳು ಮಿಂಚಿದ ಮಾಯಾವಿ ಪಾಪ! ಪರಿಮಳಾ ಅವಳಲ್ಲಿ ಸಂಶಯಪಟ್ಟಿದ್ದಾಳೆ. ನನ್ನಲ್ಲಿ ಸಲ್ಲದ ಭಾವನೆ ತಳೆದಿದ್ದಾಳೆ. ಅದಕ್ಕೆಯೇ ಅವಳಿಷ್ಟು

ಕಂದಿ ಕುಂದಿ ಹೋಗಿರುವಳು. ಇದಕ್ಕೆ ಉಪಾಯ . . . . ಇದಕ್ಕೆ ಒಂದೇ ಉಪಾಯ . . . . ನಾಳಿನಿಂದ ಆಫೀಸಿನ ಕೆಲಸವನ್ನೆಲ್ಲ ಬದಿಗೊತ್ತಿ ಮೊದಲಿನಂತೆ ಬೇಗನೇ ಮನೆಗೆ ಬರುವದು ಆದರೆ ಅವಳ ಸಂಶಯ ನಿವಾರಣೆ ಇದರಿಂದ ಆಗ ಬಹುದೆ? ಇದೆಲ್ಲಿಯ ಸಂಕಟ ಅನಿರೀಕ್ಷಿತವಾಗಿ ನಮ್ಮ ಸವಿಯನ್ನು ಕದಡಿತು." ಮೂರ್ತಿಗೆ ಸಮಸ್ಯೆಯ ಬಿಗುವು ಬಹಳ ಬಿಗಿಯಾಗಿರುವಂತೆ ಕಂಡು ಬಂದಿತು. ನಿದ್ದೆ ಎಲ್ಲಿಯೋ ಹಾರಿ ಹೋಯಿತು. ಹಾಸಿಗೆಯ ಮೇಲೆ ಎದ್ದು ಕುಳಿತ. ಸುತ್ತಲೂ ನೋಡಿದ. ಪರಿಮಳಾ ಇನ್ನೂ ಬಂದಿರಲಿಲ್ಲ. ಅವನಿಗೆ ಭಯವಾಯಿತು. ಅವನ ಹದಗೆಟ್ಟ ಹೃದಯದಲ್ಲಿ ಹಸಗೆಟ್ಟ ವಿಚಾರಗಳೇ ಬರತೊಡಿಗಿದವು. ಅವನ ಹೃದಯ ಹಾರತೊಡಗಿತು. ಮೈ ಬೆವರ ತೊಡಗಿತು. ತಲೆ ಸುತ್ತ ತೊಡಗಿತು. ಪರಿಮಳಾ! ಎಂದು ಕೂಗಿದ. ಉತ್ತರವಿಲ್ಲ. ಗಾಬರಿಯಲ್ಲಿ ತಡವರಿಸುತ್ತ ಒಳಕ್ಕೆ ಹೋಗಿ ಮತ್ತೆ ಕೂಗಿದ. ಪರಿಮಳಾ! ಏ ಪರಿಮಳಾ!

ನಡುಮನೆಯ ಮೂಲೆಯಲ್ಲಿ ಬರಿಯ ಚಾಪೆಯೊಂದರ ಮೇಲೆ ಪರಿಮಳಾ ಬುಸುಗುಟ್ಟುತ್ತ ಬಿದ್ದಿದ್ದಳು. ಅವಳ ಈ ರೀತಿಯನ್ನು ಕಂಡು ಮೂರ್ತಿ ಹೌಹಾರಿದ. ಅವಳನ್ನು ಹೇಗೆ ಸಂತಯಿಸಬೇಕೆಂಬುದೇ ಅವನಿಗೆ ತೋಚದಾಯಿತು. ಭಾರವಾದ ಹೆಜ್ಜೆಗಳನ್ನಿಡುತ್ತ ಅವಳ ಹತ್ತರ ಹೋಗಿ 'ಪರಿಮಳಾ?' ಎನ್ನುತ್ತ ಮೈ ಮೇಲೆ ಕೈಯಾಡಿಸಿದ. ಅವಳ ಹೃದಯದ ಒಡ್ಡು ಒಡೆದಂತಾಯಿತು. ಬಿಕ್ಕಿ ಬಿಕ್ಕಿ ಅಳತೊಡಗಿದಳು. ಮೂರ್ತಿ ಅವಳನ್ನು ಬರಸೆಳೆದು 'ಪರಿಮಳಾ! ನಿನ್ನ ಗ್ರಹಿಕೆ ತಪ್ಪಾಗಿದೆ. ತಿಳಿದು ನೋಡು' ಎಂದ.

ಪರಿಮಳಾ ಆಗ ತಿಳಿದುಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಅವಳ ಹೃದಯದ ಹಿಮ ಇನ್ನೂ ಹೆಪ್ಪು ಗಟ್ಟಿಯೇ ನಿಂತಿತ್ತು.

"ಪರಿಮಳಾ! ನನ್ನಲ್ಲಿ ನಿನ್ನ ವಿಶ್ವಾಸವಿಲ್ಲವೆ?" ಮೂರ್ತಿ ಕನಿಕರ ಬರುವಂತೆ ಕೇಳಿದ.

"ನನ್ನಲ್ಲಿ ನಿಮ್ಮ ವಿಶ್ವಾಸವಿದ್ದರೆ ನಿಜ ಸಂಗತಿಯನ್ನು ಹೇಳಿ ಬಿಡಬಾರದೇಕೆ?

"ಆ ಮಾತನ್ನು ಹೇಳುವದು ನನಗೇ ಸಾಧ್ಯವಿಲ್ಲವೆಂಬ ಮಾತನ್ನು ನೀನು ನಂಬಬಾರದೇಕೆ?

"ಇದು ಮಾತು ತಪ್ಪಿಸಿಕೊಳ್ಳುವ ಮಾಟಗಾರಿಕೆ."

"ಅಲ್ಲ ಪರಿಮಳಾ! ಸತ್ಯ ಸಂಗತಿ."

ಪರಿಮಳಾನಿಗೆ ಮತ್ತೆ ಬರೆ ಎಳೆದಂತಾಯಿತು.

"....ಇಲ್ಲಿ ನೋಡು ಪರಿಮಳಾ! ನಾಳಿನಿಂದ ದಿನಾಲು ತಪ್ಪದೇ ನಾಲ್ಕು ಗಂಟೆಗೇ ಬರುತ್ತೇನೆ. ಆಯಿತಲ್ಲೊ, ಸುಮ್ಮನೆ ಗೊಂದಲ ಬೇಡ."

ಮೂರ್ತಿಯ ಮನದ ಕಸವಿಸಿಯನ್ನು ಪರಿಮಳಾ ಕಂಡುಕೊಂಡಳು. ಹದಗೆಟ್ಟ ಹೃದಯದ ತಂತಿಯನ್ನು ಇನ್ನೂ ಜಗ್ಗಿದರೆ ಸಿಡಿದು ಹೋದೀತೆಂಬ ಬೆದರಿಕೆಯಾಯಿತೇನೋ, ಅವಳು ಮುಖದಲ್ಲಿ ಮಂದಸ್ಮಿತವನ್ನು ಎಳೆದು ತಂದಳು.

"ಹಾಗಾದರೆ ನೀವು ಒಂದು ದಿನವೂ ತಪ್ಪಕೂಡದು."

"ಒಪ್ಪಿದೆ, ಆಯಿತಿಲ್ಲೊ."

ಕೋಣೆಯಲ್ಲಿ ದೀಪ ಮಂದವಾಗಿ ಉರಿಯುತ್ತಿತ್ತು. ನೊಂದ ಜೀವಿಗಳೆರಡು ಅರ್ಧ ಸಮಾಧಾನದಲ್ಲಿ ಒಂದೇ ಮಂಚದ ಮೇಲೆ ಕುಳಿತುಕೊಂಡವು. ಒಂದು ಜೀವ ಇನ್ನೊಂದು ಜೀವದ ಸವಿತುತ್ತಿಗಾಗಿ ಹಾತೊರೆದು ತುಟಿ ಚಾಚುತ್ತಿರುವಾಗ ಬೆಚ್ಚಗಿನ ಕಣ್ಣೀರು ಆ ಮುಖವನ್ನು ತೋಯಿಸಲು ಆ ಜೀವ ಹಿಂದೆ ಸರಿಯಿತು.

ಅಂದಿನ ಇರುಳು ಒಂದೇ ಮಂಚದ ಮೇಲೆ ಮಲಗಿದ ಜೀವಿಗಳೆರಡು ಬಿಡುತ್ತಿರುವ ನಿಟ್ಟುಸಿರು ಇರುಳನ್ನೇ ಭೇದಿಸಿತು. ಕದಡಿ ಹೋದ ಜೀವ ಒಂದಾಗಬೇಕೆಂದು ಬಯಸಿದವು, ಅಂದು ಅದು ಸಾಧ್ಯವಾಗಲಿಲ್ಲ.

ಒಂದು ಜೀವ ನೊಂದಿತು. ಇನ್ನೊಂದು ಅದಕ್ಕಾಗಿ ಬೆಂದಿತು.

೫

ಮರುದಿನ ಮುಂಜಾವಿನ ಊಟ ಮೌನವಾಗಿಯೇ ಸಾಗಿತು. ಪರಿಮಳಾನ ಮುಖವನ್ನು ನೋಡಲಾಗದ ಸ್ಥಿತಿಯಲ್ಲಿದ್ದ ಮೂರ್ತಿ ಬಿಟ್ಟಿಂದು ಮಾತನಾಡಲಿಲ್ಲ. ವಿಚಿತ್ರ ಪರಿಸ್ಥಿತಿಯ ಸುಳಿಯಲ್ಲಿ ಸಿಕ್ಕ ಅವನ ಮೆದುಳು ಸರಿಯಾಗಿ ಕೆಲಸಮಾಡದಾಯಿತು. ಅಕಸ್ಮಿಕವಾಗಿ ಕಲ್ಲು ಬಂಡೆಯೊಂದು ತಲೆಯ ಮೇಲೆ ಬಂದು ಕುಳಿತಂತೆ ಅವನ ತಲೆ ಭಾರವಾಗಿ ಬಿಟ್ಟಿತು. ದೇವರ ಮೇಲೆ ಭಾರ ಹಾಕಿ ಸಾಯಕಲ್ಲು ಹತ್ತಿಕೊಂಡು ಆಫೀಸಿಗೆ ನಡೆದು ಬಿಟ್ಟ.

ಮೂರ್ತಿಯು ಮೌನದ ಅರ್ಥವನ್ನು ಪರಿಮಳಾ ವಿಪರೀತವಾಗಿ ಗ್ರಹಿಸಿದಳು. ಅವನು ಬೇಕೆಂದೇ ಮನಬಿಚ್ಚದಿರುವನೆಂದು ಭಾವಿಸಿ ಕಂಗೆಟ್ಟಳು. ಅವಳಿಗೆ ಹಿಂದಿನ ಒಂದೊಂದೇ ಮಾತುಗಳು ನೆನಪಾಗಿ ಮೈ ಜುಮ್ಮೆನ್ನ ಹತ್ತಿತು. ಧಾರೆವಾಡವೆಂದರೆ ಅದೇಕೆ ಮೂರ್ತಿ ಕುಣಿಯುತ್ತಿದ್ದನೆಂಬುದರ ರಹಸ್ಯವನ್ನು ಅವಳು ಕಂಡುಕೊಂಡೆನೆಂದೇ ಭಾವಿಸಿದಳು. ಅಂದಿನ ಬೆಳುದಿಂಗಳ ರಾತ್ರಿಯಲ್ಲಿ ಮೂರ್ತಿ 'ನನಗೆ ಧಾರವಾಡವೆಂದರೆ ಅಚ್ಚುಮೆಚ್ಚು' ಎಂದ ಮಾತು ಅವಳಿಗೆ ಅಣಕಿಸ ಹತ್ತಿದವು. ತಾನಂದು "ನಿಮಗೆ ಧಾರವಾಡವೆಂದರೆ ಹುಚ್ಚು" ಎಂದಾಗ ಮೂರ್ತಿ 'ಅದಕ್ಕೆ ಕಾರಣವಿಲ್ಲದಿಲ್ಲ ಪರಿಮಳಾ' ಎಂದ ಮಾತು ನೆನಪಾಗಲು ಪರಿಮಳಾ ಇದೇ ಆ ಕಾರಣವೆಂಬುದನ್ನು ಮನದಟ್ಟು ಮಾಡಿಕೊಂಡಳು. ಅಂದು ತಡಸಲಿನಲ್ಲಿ ಪ್ರೇಮದ ಹಾಡನ್ನು ಹಾಡಿದ ಮೂರ್ತಿಯನ್ನೂ, ಇಂದಿನ ಈ ವ್ಯವಹಾರದ ಮೂರ್ತಿಯನ್ನೂ ತೂಗಿ ನೋಡಿದಳು. ಅವಳ ಮನಸ್ಸು ತುಂಬಾ ಹೇಸಿತು. ಪ್ರೇಮ ಸೋತು ಕಾಮಗೆದ್ದಿತೆಂದೇ ಅವಳು ಬಗೆದಳು. 'ನನ್ನ ಸಂಸಾರ ರಥ ಹೀಗೆ ಕುಪ್ಪರಿಸಿ ಬೀಳಬಹುದೆಂದು ನನಗೆ ಅನ್ನಿಸಿರಲಿಲ್ಲ' ಎಂದು ತನ್ನಷ್ಟಕ್ಕೆ ತಾನೇ ಅಂದುಕೊಂಡಾಗ ಅವಳಿಗೆ ನಿಜದ ಕಲ್ಪನೆಯಾಗಿ ಮೈನಡುಗಿತು.

ಕೋಣೆಯಲ್ಲೆಲ್ಲ ಅರಿವೆಗಳು ಅವಳ ಮನಸ್ಸಿನ ಪ್ರತೀಕದಂತೆ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಹಾಸಿಗೆ ಬಿಚ್ಚಿದ ಹಾಗೆಯೇ ಇತ್ತು. ಪಡಸಾಲೆಯಲ್ಲಿ ಹೂವಿಡುವ ಸಣ್ಣ ಟೇಬಲಿನ ಮೇಲ್ಹಾಸು ಧೂಳ ತಿಂದು ಮಲಿನವಾಗಿ ಬಿಟ್ಟಿತ್ತು. ಮನೆಯು ಓರಣವೆದ್ದು ತಾಂಡವವಾಡುವಂತೆ ತೋರಿತವಳಿಗೆ. ಈ ಜೀವನ ಕೊನೆಯ ವರೆಗೂ ಹೀಗೆಯೇ ಸಾಗಿದರೆ ಆ ಜೀವನಕ್ಕಿಂತ ಮರಣವೇನು ಅನಿಷ್ಟ? ಎಂದು ವಿಚಾರಿಸಿದಳು. ತನ್ನ ಸದ್ಯದ ಜೀವನವೇ ಎದ್ದು ತೋರುವ ಹಾಗೆ ಕೈದೋಟದ ಹೂಬಳ್ಳಿ ಬಾಡಿ ನಿಂತಿತ್ತು. ತನ್ನ ಅವಸ್ಥೆ ಅದರ ಅವಸ್ಥೆಗಿಂತ ಹೀನಾಗಿ ಬಿಟ್ಟಿರುವದೆಂಬುದನ್ನು ಅರಿತು ಅವಳ ಮುಖವೂ ತೀರಾಬಾಡಿತ್ತು. ಆ ಬಳ್ಳಿ ಅವಳ ಅಂತರಂಗವನ್ನು ಕಲಕಿತೇನೋ ಅವಳು ಅಲ್ಲಿಯೇ ನಿಂತು ವಿಚಾರ ಭ್ರಾಂತಳಾದಳು.

"ಆ ಯುವತಿ ಯಾರು? ಆ ಮಾಯಾವಿ ನನ್ನ ಸವಿಸಂಸಾರದ ಹಾಲು ಗಡಲಿನಲ್ಲಿ ಉಪ್ಪು ಬೆರಸಿ ಬಿಟ್ಟಳಲ್ಲ. ಮೋಡದ ಮರೆಯಿಂದ ತೂರಿ ಬಂದ ತಾರೆಯಂತೆ ತಾನು ಬೆಳಗಿ ನನ್ನ ಬಾಳಿಗೆ ಕಾರ್ಮೋಡ ಕವಿಸಿದಳಲ್ಲ. ಸಕ್ಕರೆಯ ಸವಿಯಲ್ಲಿ ಈ ರೀತಿ ಮಣ್ಣಿನ ಹುಡಿ ಬೆರಸಬೇಕೆ? ಅವಳ ನಿಲವು, ಅವಳ

ಮಂದಸ್ಮಿತ ಇವರನ್ನು ಸೂರೆಮಾಡಿಬಿಟ್ಟಿವೆ. ಅವರಿನ್ನು ನನ್ನನ್ನು ಮೊದಲಿನಂತೆ ನೋಡಲಾರರು. ಮನೆಗಂತೂ ಬರಲಿ. ಈ ಹೊತ್ತು ಪೂರ್ಣವಾಗಿ ಇತ್ಯರ್ಥ ಮಾಡಿಕೊಂಡೇ ಬಿಡುವೆ. ಈ ನರಕದ ಬಾಳು ನನಗೆ ಬೇಡ. ಅವರಿಗೆ ಅಂದು 'ಭಾವಕನ್ನಿಕೆಯು ಜೀವದ ಜೋಡೇ, ಹಾಲಿನ ಹೊಳೆಯನು ಹರಿಸಿತ್ತು' ಇಂದು? ನನಗೆ ಅಂದೇ ಮರಣ ಬಂದಿದ್ದರೆ . . . . . . "

ಪೋಷ್ಟು ಜವಾನನು 'ತಾಯೀ' ಎಂದೊದರಿ ಪತ್ರಗಳನ್ನು ಒಳಗೆ ಒಗೆದು ಹೋದ. ಅವನ ಚೀರು ದನಿಗೆ ಎಚ್ಚತ್ತ ಪರಿಮಳಾ ಸಮಾಧಿ ಭಂಗ ವಾದವಳಂತೆ ದಿಗ್ಗನೆ ಎದ್ದು ಪತ್ರಗಳನ್ನು ತೆಗೆದುಕೊಂಡಳು. ಸುಂದರವಾದ ಅಕ್ಷರಗಳಿಂದ ವಿಳಾಸ ಬರೆದ ಒಂದು ಲಕೋಟೆಯು ತ್ತ ಅವಳ ಮನಸ್ಸು ಹರಿಯಿತು. ಅದನ್ನು ಒಡೆಯಬೇಕೋ ಬಾರದೋ ಎಂದು ಒಂದು ನಿಮಿಷ ತಡೆದಳು. ಅವಳಿಗೆ ಆ ಅಕ್ಷರ ಒಂದು ವಿಚಾರವನ್ನು ಮಿಂಚಿನಂತೆ ಸುಳಿಯಿಸಿತು. ಇದು ಅವಳದೇ ಪತ್ರವಾಗಿದ್ದರೆ ಸ್ವಾಭಾವಿಕವಾಗಿ ಗುಟ್ಟು ರಟ್ಟಾಗುವುದು. ಹೌದು. ಈ ಪತ್ರವನ್ನು ಒಡೆಯಲೇಬೇಕು.

ನಡುಗುತ್ತಿರುವ ಕೈಗಳಿಂದ ಪತ್ರವನ್ನು ಎತ್ತಿದಳು. ಹೃದಯದ ಸಾಮರ್ಥ್ಯವನ್ನೆಲ್ಲ ಒಬ್ಬುಳಿಗೂಡಿಸಿ ಅದರ ಬಾಯಿ ತೆರೆದು ಓದತೊಡಗಿದಳು.

ಸಹೋದರ!

ಮೊದಲೆಂದಿಗೂ ಪರಿಚಯವಿಲ್ಲದ ನನಗಾಗಿ ಆ ಹೊತ್ತು ಬಹಳ ತೊಂದರೆ ಸಹಿಸಿದಿರಿ. ನನಗೆ ಟಿಕೇಟು ತೆಗೆಯಿಸಿ ಕೊಟ್ಟಿರಿ. ನನ್ನ ಗಾಯವನ್ನು ಕಟ್ಟಿದಿರಿ. ಇದಕ್ಕಾಗಿ ಈ ಮೊದಲೇ ನಾನು ಕೃತಜ್ಞತೆಯನು ಸೂಚಿಸಿ ಬರೆಯಬೇಕಾಗಿತ್ತು. ಆದರೆ ಒಂದು ಮೋಜಿನ ವಿಷಯವನ್ನು ನಿಮಗೆ ಹೇಳಿ ನಿಮ್ಮ ಕ್ಷಮೆಯನ್ನು ಕೋರುತ್ತೇನೆ. ಆ ದಿನ ರೈಲಿನಲ್ಲಿ ನೀವು ನಿಮ್ಮ ಮೇಲಿನ ಜೇಬಿನಿಂದ ಕರವಸ್ತ್ರವನ್ನು ತೆಗೆದುಕೊಳ್ಳುವಾಗ ನಿಮ್ಮ ನಾಮ ನಿರ್ದೇಶವುಳ್ಳ ಕಾರ್ಡುಗಳು ಕೆಳಗೆ ಬಿದ್ದವು. ನಿಮ್ಮ ಹೆಸರಿನ ಪರಿಚಯ ಅನಾಯಾಸವಾಗಿಯೇ ಆಗುವದೆಂದು ಭಾವಿಸಿ ಒಂದನ್ನು ಎತ್ತಿಕೊಂಡು ನನ್ನ ಹತ್ತಗವಿಟ್ಟುಕೊಂಡೆ. ಆ ದಿನ ಮನೆಗೆ ಬಂದು ನಡೆದ ಸಂಗತಿಯನ್ನೆಲ್ಲ ನಮ್ಮವರೆದುರು ಹೇಳಿ ನಿಮ್ಮ ಗುಣಗಾನ ಮಾಡಿದೆ. ಅವರು ನಿಮ್ಮನ್ನು ಬಹಳ ಮೆಚ್ಚಿ ನಿಮ್ಮನ್ನು ಕಾಣಲು ಹಾತೊರೆದು ನಿಮ್ಮ ವಿಳಾಸ ಕೇಳಿದರು. ಆದರೆ ನಾನು ಆ ಕಾರ್ಡುಗಳನ್ನು ಗಡಿಬಿಡಿಯಲ್ಲಿ ಎಲ್ಲಿಯೋ ಇಟ್ಟುಬಿಟ್ಟಿದ್ದೆ. ನನಗೆ

ತುಂಬಾ ವ್ಯಸನವಾಯಿತು. ನಿಮ್ಮ ಮೋರೆಯ ಗುರುತಿನ ಹೊರತು ನನ್ನಲ್ಲಿ ನಿಮ್ಮನ್ನು ಹುಡುಕುವ ಯಾವ ಸಾಧನವೂ ಇಲ್ಲದಿರುವಾಗ ನಿರುಪಾಯಳಾಗಿ ಸುಮ್ಮನಿರಬೇಕಾಯಿತು. ಈ ಹದಿನೈದು ದಿನಗಳಿಂದಲೂ ನನಗೆ ಈ ಮಾತು ಕೊರೆಯುತ್ತಿತ್ತು. ನಿನ್ನೆ ಅಕಸ್ಮಾತ್ತಾಗಿ ಅವು ನನ್ನ ಕೈಗೆ ಸಿಕ್ಕವು. ಒಕ್ಕಲ ಗಿತ್ತಿ ನನ್ನ ರೌಕೆಯನ್ನು ತೊಳೆಯಲು ಒಯ್ಯುವಾಗ ಅವುಗಳನ್ನು ತೆಗೆದಿರಿಸಿ ಕೊಡಲು ಮರೆತು ಬಿಟ್ಟಿದ್ದಾಳಂತೆ. ನನಗೆ ಹೋದ ಜೀವ ಬಂದಂತಾಗಿ ನಿಮ್ಮ ವಿಳಾಸವನ್ನು ಇವರ ಕೈಯಲ್ಲಿ ಕೊಟ್ಟೆ.

ದಯಮಾಡಿ ಈ ಹೊತ್ತು ಸಂಜೆಯ ಆರು ಗಂಟೆಗೆ ನಮ್ಮ ಮನೆಗೆ ಚಹಕ್ಕೆ ಬರಬೇಕು. ಬರುವಾಗ ನಿಮ್ಮ ಸೌಭಾಗ್ಯವತಿಯನ್ನು ಕರೆತರಲು ಮರೆಯಬಾರದು. ನಮ್ಮ ಒಂದು ದಿನದ ಗೆಳೆತನ ಅಖಂಡವಾಗಿ ಮುಂದೆ ಎಂದೆಂದಿಗೂ ಚಿಗುರೊಡೆಯುತ್ತ ನಾಗಲಿ. ನಿಮ್ಮನ್ನು ಕಾಣಲು ನಾನು, ನನ್ನ ಪತಿದೇವರೂ ಆತುರರಾಗಿದ್ದೇವೆ. ನಮ್ಮನ್ನು ನಿರಾಶೆಗೊಳಿಸಬಾರದಾಗಿ ಬೇಡಿಕೆ.

ತಮ್ಮೊಡನಿದ್ದ ಅಂದಿನ

ಪ್ರವಾಸಿ ಮಿತ್ರಳು.

ಪತ್ರವನ್ನು ಓದುತ್ತ ತುಂಬ ತೊಡಗಿದ ಪರಿಮಳಾನ ಕಣ್ಣುಗಳೊಳಗಿಂದ ಓದು ಮುಗಿದ ಕೂಡಲೇ ಪಳಕ್ಕನೇ ಎರಡು ತೊಟ್ಟು ಹನಿಗಳು ಬಿದ್ದು ಪತ್ರ ವನ್ನು ತೋಯಿಸಿದವು. ಕೈಯಲ್ಲಿಯ ಪತ್ರದಲ್ಲಿ ಕುಣಿಯುತ್ತಿದ್ದ ಆ ಯುವತಿಯ ಹೃದಯದಲ್ಲಿಂದ ಮೂರ್ತಿಯ ನಿಷ್ಕಲಂಕಿತವಾದ ನಿರ್ಮಲ ಮೂರ್ತಿಯು ಅವಳ ಕಣ್ಣ ಮುಂದೆ ಕಂಗೊಳಿಸಿತು. ಅವಳಿಗೆ ಓಡಿ ಹೋಗಿ ಮೂರ್ತಿಯನ್ನು ಬಿಗಿದಪ್ಪಬೇಕೆನ್ನಿಸಿತು. 'ಎಂತಹ ವಿಷಮ ವೇಳೆ, ಎಂತಹ ಪರಿಹಾರವಿದು! ಅವರ ಮಾತೇ ಸತ್ಯ. ಅವಳು ನಿಜವಾಗಿಯೂ ಅವರಿಗೆ ಪ್ರವಾಸಿ. ನಾನು ಮಾತ್ರ ಮೂಢೆ. ಅವರ ಮನವನ್ನು ವ್ಯರ್ಥವಾಗಿ ಕಲಕಿದೆ' ಎಂದು ಪರಿಮಳಾ ತನ್ನನ್ನೆ ತಾನು ಹಳಿದುಕೊಂಡಳು. ಅವಳ ಹೃದಯಲ್ಲಿ ಚೇತನದ ಬುಗ್ಗೆ ಮತ್ತೆ ಸೆಲೆಯೊಡೆಯಿತು. ಚಟುವಟಿಕೆಯ ಹಾರಿಕೆಯ ಹೆಜ್ಜೆಗಳಲ್ಲಿ ಮನೆ ತುಂಬ ಓಡಾಡಿದಳು.

ಸರಿಯಾಗಿ ನಾಲ್ಕು ಗಂಟೆಗೆ ಮೂರ್ತಿಯು ಸಾಯಕಲ್ಲ ಗಂಟೆಯನ್ನು

ಪರಿಮಳಾ ದೂರಿನಿಂದ ಕೇಳಿದಳು. ಅವಳ ಹೃದಯವು ತುಂಬಿ ತುಳುಕಾಡಿತು. ಕುಳಿತ ಕೋಣೆಯಿಂದ ಹೊರಬೀಳಲಾಗದೆ ಕುಳಿತಲ್ಲಿಯೇ ಕುಳಿತಳು.

ಮೂರ್ತಿಗೆ ವಿಚಿತ್ರವೆನ್ನಿಸಿತು. ಧೂಳು ಹತ್ತಿ ಕೊಳಕಾದ ಹೂವಿನ ಚಿಕ್ಕ ಟೇಬಲ್ಲು ಥಳಥಳಿಸುವ ಮೇಲ್ಪಾಸಿನೊಂದಿಗೆ ಅರಳಿದ ಹೂವುಗಳನ್ನು ಹೊತ್ತುಕೊಂಡು ಸುತ್ತಲೂ ಪರಿಮಳ ಬೀರುತ್ತಿದ್ದಿತು. ಪಡಸಾಲೆಯ ಓರಣ ದಲ್ಲಿ ಚೈತ್ರ ಮಾಸದ ಹೊಸ ಚೈತನ್ಯಮೂಡಿತ್ತು ಮನೆಗೆ ಬಂದ ಕೂಡಲೇ ತಾನೊಂದು ಪ್ರಕರಣವನ್ನು ಎದುರಿಸಬೇಕಾಗಬಹುದಾದ ಸಂದರ್ಭದ ಸಂಕಟ ದೊಂದಿಗೆ ಹೌಹಾರಿ ಬಂದ ಮೂರ್ತಿಗೆ ಈ ಹೊಸ ಸೃಷ್ಟಿ ಚಮತ್ಕಾರವೇ ಆಗಿಬಿಟ್ಟಿತು. ಯಥಾರ್ಥ ಕಲ್ಪನೆಯಾಗದೇ ಮೂರ್ತಿ ನೇರವಾಗಿ ಕೋಣೆಗೆ ನಡೆದ. ಮಲ್ಲಿಗೆಯ ಪರಿಮಳ ತೂರಿ ಬಂದಂತಾಯಿತು. ಅವನು ತನ್ನ ಕಣ್ಣನ್ನು ನಂಬದೇ ಹೋದ. ಬಾನಿನಲ್ಲಿ ತೇಲಿಬರುವ ಬಿಳಿಯ ಮೋಡ ದಂತಾದ ಮಂಚದ ಮೇಲೆ ಪರಿಮಳಾ ಬೆಡಗಿನ ವಸನವನ್ನುಟ್ಟುಕೊಂಡು ಜಲದೇವತೆಯಂತೆ ಕುಳಿತು ಬಿಟ್ಟಿದ್ದಾಳೆ. ದುಂಡು ಮಲ್ಲಿಗೆಯ ದಂಡೆ ಅವಳ ಮುಡಿಯ ಮೇಲೆ ಕುಳಿತು ಕುಲುಕುಲು ನಗುತ್ತಿದೆ ಆ ನಗೆಯನ್ನು ಸ್ಪರ್ಧಿಸುವಂತೆ ಪರಿಮಳಾ ತನ್ನ ಹೂವಿನಂತಹ ಬಾಯಿಯನ್ನು ತುಸು ಬಿಚ್ಚಿ ಮಂದಸ್ಮಿತಳಾಗಿದ್ದಾಳೆ. ಮೂರ್ತಿಗೆ ಈ ನೋಟ ಆವೇಶವನ್ನೇ ತಂದುಬಿಟ್ಟಿತು.

"ಈ ಸಿಂಗಾರದ ಅರ್ಥವೇನು ಪರಿಮಳಾ?"

"ನನ್ನನ್ನು ನೀವು ಪೂರಾ ಕ್ಷಮಿಸಬೇಕು. ನಾನು ಅಪರಾಧಮಾಡಿದೆ" ಎನ್ನುತ್ತ ಪರಿಮಳಾ ತನ್ನ ಎರಡೂ ಗಲ್ಲಗಳ ಮೇಲೆ ಕೈಯಿಟ್ಟುಕೊಂಡಳು.

"ನೀನಾವ ಅಪರಾಧ ಮಾಡಿದ್ದಿಯೇ ಚಲುವಿ!" ಎನ್ನುತ್ತ ಮೂರ್ತಿ ಅವಳ ಎರಡೂ ಕೈಗಳನ್ನು ತನ್ನ ಕೈಗಳಲ್ಲಿ ತೆಗೆದುಕೊಂಡು ಹತ್ತಿರ ಕುಳಿತ.

ಪರಿಮಳಾ ಆ ಪತ್ರವನ್ನು ಗಂಡನಿಗೆ ಕೊಟ್ಟಳು. ಮೂರ್ತಿ ಆ ಪತ್ರ ವನ್ನು ಓದಿ ಮುಗಿಸಿ ಹೆಂಡತಿಯ ಕಡೆಗೆ ನೋಡಿದಾಗ ಅವಳ ಕಣ್ಣುಗಳು ತುಂಬಿ ನಿಂತಿದ್ದವು.

"ದೇವರು ಪಾರುಮಾಡಿದ ಪರಿಮಳಾ!"

"ಅಲ್ಲ. ಆ ದೇವತೆ ನನ್ನನ್ನೂ ಬದುಕಿಸಿದಳು."

"ಕೊನೆಗೆ ನಾನೇ ಗೆದ್ದೆ ಪರಿಮಳಾ."

"ಆಹುದು ನಾನೇ ತಪ್ಪಿದೆ."

"ಆ ಯುವತಿ 'ತೂರಿ ಬಂದ ತಾರೆಯಂತೆ' ಇಷ್ಟೆಲ್ಲ ಮಾಡಿದಳು.

"ಎಷ್ಟಾದರೂ ನಕ್ಷತ್ರ ಬೆಳಕು ಬೀರದೇ ಬಿಟ್ಟೀತೇ?"

"ಈ ಸಿಂಗಾರದ ಬೆಡಗೇಕೆ ಪರಿಮಳಾ!"

"ಸಿಂಗಾರಿಯ ಭೆಟ್ಟಿಗೆ ಸಿಂಗಾರವಾಗಿ ಹೋಗಬೇಡವೆ?"

"ಎಂತಹ ಚೆಲುವೆಯೋ ನೀನು ಪರಿಮಳಾ!"

ಪರಿಮಳಾನ ಹೃದಯದ ಹಕ್ಕಿಗೆ ರೆಕ್ಕೆ ಮೂಡಿತು. ಅವಳು ಕಿಲಕಿಲನೆ ನಗುತ್ತ ಬೆಳ್ಳಿಯ ತಟ್ಟೆಯ ಮೇಲೆ ಬಿಡಿಸಿ ಇಟ್ಟಿದ್ದ ಹಣ್ಣಿನ ತೊಳೆಯೊಂದನ್ನು ತರಲು ಹವಣಿಸಿದಳು. ನಲ್ಲನ ತೋಳ ಸೆರೆಯಲ್ಲಿ ಸಿಕ್ಕ ಅವಳಿಗೆ ಆ ತೊಳೆ ಕೈಗೆ ನಿಲುಕಲಿಲ್ಲ.

ಆ ಹಣ್ಣಿನ ತೊಳೆಯ ಸವಿಗಿಂತ ಮೂರ್ತಿಗೆ ಪರಿಮಳಾ ತಾನಾಗಿಯೇ ದಯಪಾಲಿಸಿದ ಪಕ್ವ ಫಲದ ಇನಿರಸವು ಬಹಳ ಸವಿಯೆನಿಸಿತು.



# ಕಥೆಗಳ ಕಥೆ

(ಒಂದು ಒಡಗತೆ)

---

(ಪ್ರೊ. ದ ರಾ ಬೇಂದ್ರೆ, ಎಮ್. ಎ., ಸೊಲ್ಲಾಪುರ)




**ಕಥೆಗಳ ಕಥೆ—ಆಕೃತಿ.**

—ಸ. ನಾ.

ಈ ಜಗದಲ್ಲಿ ಒಂದೇ ಕಥೆ ಹಲವು ರೂಪ ತಾಳಿ ಆಟವಾಡುತ್ತದೆ. ಈ ಎಲ್ಲ ಕಥೆಗಳ ಹಿಂದೆ ಒಂದು ಕಥೆಯಿದೆ. ಅದು ಮಾಯಾ ಕಥೆ. ಅದರ ರೂಪಗಳು ಅನಂತ. ಈ ಮಾಯಾ ಕಥೆಯ ಮೂಲಕ್ಕೊಂದು ಕಥೆಯಿದೆ. ಅದು ಬೇರು ಕಥೆ. ನಾನು ಹೇಳುವ ಕಥೆ ಆ ಕಥೆ.

ಆನಂದದ ಸೃಷ್ಟಿಯಾದ ಈ ಜಗತ್ತಿನ ತಂದೆ ತಾಯಿಗಳಿಗಾಗಿ ಒಂದು ಮಿಥುನ ಎಲ್ಲೆಲ್ಲೂ ಬಾಳುತ್ತದೆ. ಎಲ್ಲೆಲ್ಲೂ ಬದುಕು ಮಾಡುತ್ತದೆ. ಅದು

ತೆರೆಯು ಮರೆಗಿದೆ. ಅಲ್ಲಿ ಅದು ನಿರ್ದ್ವಂದ್ವ, ನಿತ್ಯ ಸತ್ವಸ್ಥ; ರಸಮಯ. ತೆರೆಯ ಮುಂದೆ ತಮಸ್ಸಿನ ಮೇಲೆ ರಜಸ್ಸಿನ ಆಟ ನಡೆದಿದೆ. ಇದರಿಂದ ಸತ್ವ ಅಡಗಿದೆ. ಜೀವ ಜಾತವೆಲ್ಲ ನಡುಗಿದೆ. ಆಟ ನಿಂತಿಲ್ಲ.

ಆನಂದದ ಜನನೀ ಜನಕರು ಶಿವ-ಶಕ್ತಿ. ಆದರೆ ಈ ಶಿವನಿಗೆ ಒಬ್ಬ ತಮ್ಮನಿದ್ದಾನೆ. ಅವನು ಅ-ಶಿವ. ಈ ಶಕ್ತಿಗೆ ಒಬ್ಬ ತಂಗಿ ಇದ್ದಾಳೆ. ಅವಳು ಅ-ಶಕ್ತಿ. ಯಾವ ಮಾಯೆಯಿಂದಲೋ ಅ-ಶಿವನಿಗೆ ಶಕ್ತಿಯ ಮೇಲೆ ಕಣ್ಣು ಬಿತ್ತು. ಇದನ್ನು ಕಂಡು ಶಕ್ತಿಯು ಮಾಯಾ ಶಕ್ತಿಯನ್ನು ಮುಂದೆ ಚಾಚಿ ಹಿಂದಡಗಿದಳು. ಅದೇ ಮಾಯೆಯಿಂದ ಅ-ಶಕ್ತಿಗೆ ಶಿವನಲ್ಲಿ ರತಿಯುಂಟಾ ಯಿತು. ಶಿವನು ಮಾಯಾ ಶಿವನನ್ನು ಮುಂದೆ ಮಾಡಿ ಹಿಂದುಳಿದ. ನಡೆ ದಿದೆ ಕಥೆಗಳ ಕಥೆ, ನಾಟಕಗಳ ನಾಟಕ. ಅ-ಶಿವನು ಶಕ್ತಿಯೆಂದೇ ಮಾಯಾ ಶಕ್ತಿಯ ಪ್ರಣಯದಲ್ಲಿ ತೊಡಗಿದ್ದಾನೆ. ಅ-ಶಕ್ತಿಯು ಶಿವನೆಂದೇ ತಿಳಿದು ಮಾಯಾ ಶಿವನನ್ನು ಆಶ್ರಯಿಸುತ್ತಿದ್ದಾಳೆ.

ಮಾಯಾ ಶಿವನ ಸಂತತಿಯಲ್ಲಿ ಅ-ಶಕ್ತಿಯ ಮಕ್ಕಳು ಮುಂದೆ ಬಂದಿ ದ್ದಾರೆ ಸಜ್ಜನರು ಎಂದು. ಇವರು ತಮ್ಮ ಸೋಲನ್ನು ಗೆಲವುಗೊಳಿಸುತ್ತಿ ದ್ದಾರೆ ನಿವೃತ್ತಿಕಲೆಯಿಂದ. ಇದರಿಂದ ಏರಿಬಿಡುತ್ತಾರೆ ಮಾಯಾ ಶಕ್ತಿಯ ಮಕ್ಕಳು ಪ್ರವೃತ್ತಿಕಲೆಯಲ್ಲಿ ಜಾಣರಾದ ಅ-ಶಿವನ ಪುತ್ರರು, ದಾನದ ಆಟ ವಾಡುವ ದಾನವರು. ಅವರಿದಿರು ತತ್ತರಿಸುತ್ತಾರೆ ಮಾನ ಉಳಿಸಿಕೊಳ್ಳಲಾ ರದ ಮಾನವರು.

ಇದರಿಂದ ನಮ್ಮ ಜಗತ್ತಿನಲ್ಲಿ ನಡೆದಿದೆ ಸಬಲರಾದ ದುರ್ಜನರಿಗೂ ದುರ್ಬಲರಾದ ಸಜ್ಜನರಿಗೂ ಹೋರಾಟ. ಈ ಕುರುಕ್ಷೇತ್ರದಲ್ಲಿ ಸಾವಿರಸಲ ಸಾಯುತ್ತಾರೆ ಮರ್ತ್ಯರು. ಸತ್ತು ಸ್ವರ್ಗಸೇರಿ ಪುಣ್ಯತೀರಿದ ಮೇಲೆ ಮತ್ತೆ ಇಳಿಯುತ್ತಾರೆ ಮೃತ್ಯುಲೋಕದಲ್ಲಿ. ಶಿವ-ಶಕ್ತಿಯ ಮಕ್ಕಳಾದ ದೇವತೆಗಳು ಭೂಲೋಕದ ಮೇಲೆ ಬರುವದು ಎಂದೋ ಎಂದು ತಪಿಸುತ್ತಿದ್ದಾರೆ ಸಾಧ ಕರು. ತಮ್ಮ ಸಾಧನೆಯಲ್ಲಿ ಮಾಯಾ ಶಿವನಿಗೂ ಮಾಯಾ ಶಕ್ತಿಗೂ ಎದು ರಾಗಿ ದುಃಖಬಂಧದಲ್ಲಿಯೂ ಸುಖಮುಕ್ತಿಯಲ್ಲಿಯೂ ತೊಳಲುತ್ತಿದ್ದಾರೆ, ಬಳಲುತ್ತಿದ್ದಾರೆ ಮುಕ್ತರಾಗದ ಸಾಧಕರು, ಯುಕ್ತರಾಗದ ಸಿದ್ಧರು. ದೇವತೆ ಗಳಿಗೆ ಬೇಕಾಗಿದೆ ಶಿವ ಮುಕ್ತಿ ಮತ್ತು ಶಕ್ತಿಯ ಯುಕ್ತಿ. ಅದಾದಾಗ ದೇವ

ಯುಗಕ್ಕೆ ಪ್ರಾರಂಭ ಭೂತಲದ ಮೇಲೆ. ಮನದ ಮಾನಸದಲ್ಲಿ ವಾಸನೆಯ ಪದ್ಮದಲ್ಲಿ ಮಧುಕರ-ಮಧುಕರಿಗಳ ಗುಂಜಾರವ ನಡೆದಿದೆ ರಸಪ್ರಾಪ್ತಿಗಾಗಿ. ಆದರೆ ಅಲ್ಲಿ ಈಗಿಲ್ಲ ರಸ; ಅಲ್ಲಿ ಈಗಿದೆ ರಸಾಭಾಸ.

ಅ-ಶಿವ ಅ-ಶಕ್ತಿಯ ನೆರಳಡಗಿ ಮಾಯಾ ಶಿವ ಮಾಯಾ ಶಕ್ತಿಯ ಪಟಲ ತೆರೆದು, ತಮಸ್ಸು ರಜಸ್ಸು ಶುದ್ಧವಾಗಿ, ಸತ್ವವು ಮಹಾ ಸತ್ವವಾಗಿ, ಶಿವಶಕ್ತಿಯರು ಆ ಕ್ಷೇತ್ರದಲ್ಲಿಳಿದಾಗ ಅನಂತಲೀಲೆಯ ದೇವತೆಗಳು ಮುಂದೆ ಬಂದಾರು. ಅಲ್ಲಿಯ ವರೆಗೂ ದೇವ ಮಾನವರ ಸಖ್ಯ ಒಂದು ಮಾಯಾ ಕಥೆ. ದುರ್ಜನರು ದುರ್ಬಲರಾದಾಗ ಸಜ್ಜನರು ಸಬಲರಾದಾಗ ದೇವತೆ ಗಳು ಬರುವ ಕುರುಹು ಕಂಡೀತು.

ಇದು ಕಥೆಗಳ ಕಥೆ, ಹಿಂದಿನ ಕಥೆ; ಬೇರು ಕಥೆ!

ತಾಯಿ ಶಕ್ತಿ, ದುರ್ಜನರನ್ನಾಶ್ರಯಿಸಬೇಡ; ಸಜ್ಜನರಿಗೆ ಸಹಾಯವಾಗಿ ನಿಲ್ಲು, ತಂದೆ ಶಿವನೆ, ಮೌನ ತೊರೆದು ಬಾ. ನಿನ್ನ ಧ್ವನಿ ಕೇಳಿ ಸಜ್ಜನರ ಶಕ್ತಿ ಏರಲಿ; ದುರ್ಜನರ ಎದೆ ಕುಂದಲಿ.

ಓಂ ನಮಃ ಶಕ್ತ್ಯೆಯೇ! ಓಂ ನಮಃ ಶಿವಾಯ!!



# ಚಿತ್ರದ ಬೆಲೆ

(ಶ್ರೀ ಎಲ್. ಎಸ್. ಶೇಷಗಿರಿರಾವ್, ಬಿ. ಎ, (ಆನರ್ಸ್,) ಬೆಂಗಳೂರು)

ಗಡಿಯಾರ ಹನ್ನೆರಡು ಹೊಡೆದು, ಅಲ್ಲಿಗೂ ಅವಳು ಗಮನಕೊಡಲಿಲ್ಲ ವೆಂದು ಸುಮ್ಮನಾಯಿತು. ಅರ್ಧರಾತ್ರಿಯ ನಿಶ್ಶಬ್ದತೆಯಲ್ಲಿ ಅದರ 'ಟಿಕ್' 'ಟಿಕ್' ಶಬ್ದ ಸ್ಪಷ್ಟವಾಗಿ ಕೇಳಿಬರುತ್ತಿತ್ತು. ಅವಳ ಹೃದಯದ ಬಡಿತದ ನಾದ ಆ ಶಬ್ದದೊಡನೆ ಬೆರೆಯುತ್ತಿತ್ತು. ಕಾಂತಿಹೀನವಾಗಿ ಉರಿಯುತ್ತಿದ್ದ ದೀಪ ಅವಳ ನೆರಳನ್ನು ದೊಡ್ಡದಾಗಿ ಎದುರು ಗೋಡೆಯ ಮೇಲೆ, ಗೋಡೆಗೆ ಒರಗಿಸಿಟ್ಟಿದ್ದ ಚಿತ್ರದ ಮೇಲೆ ಚೆಲ್ಲಿತ್ತು. ಮತ್ತೊಂದು ಗೋಡೆಯ ಮೇಲೆ, ಅದಕ್ಕೊರಗಿದ್ದ ಚಿತ್ರದ ಮೇಲೆ ಮುರುಕು ಮೇಜಿನ, ಅದರ ಮೇಲಿದ್ದ ಹಳೆಯ ಹೂವಿನ ಪಾತ್ರೆಯ ನೆರಳು ಅಂಟಿತ್ತು. ಗಾಳಿ 'ಸುಯೋ' ಎಂದು ಮರಗಳಲ್ಲಿ ಹಾದು ಎಲೆಗಳನ್ನು ಮಾತನಾಡಿಸಿ ಒಳಗೆ ನುಗ್ಗಿದಾಗ, ಪ್ರಿಯನಿ ಗಾಗಿ ತವಕದಿಂದ ಕಾಯುತ್ತಿದ್ದು ಸ್ವಲ್ಪ ಶಬ್ದವಾದರೂ ಅವನೇ ಬಂದನೇನೋ ಎಂದು ತಟ್ಟನೆ ಎದ್ದು ಅವನಲ್ಲವೆಂದು ನಿರಾಸೆಯಿಂದ ಕುಸಿಯುವ ಪ್ರೇಯಸಿ ಯಂತೆ ದೀಪ ಪಕ್ಕನೆ ಹಾರಿ ಇಳಿದಾಗ ನೆರಳುಗಳೂ ಗಾನಕ್ಕೆ ತಕ್ಕಂತೆ ಕುಣಿಯುವ ನೃತ್ಯಗಾರರಂತೆ ಕುಣಿಯುತ್ತಿದ್ದುವು. ಬಣ್ಣ ಬಣ್ಣಗಳು ಬೆರತಿದ್ದ ಚಿತ್ರಗಳು ಆಗಲೇ ಆ ಅಲ್ಪ ಬೆಳಕಿನಲ್ಲಿ ವಿಚಿತ್ರವಾಗಿ ತೋರಿ ಬರುತ್ತಿದ್ದುವು; ಈ ನೆರಳುಗಳ ಚಕ್ಕಂದದಿಂದ ಅವು ಇನ್ನೂ ವಿಲಕ್ಷಣವಾಗಿ ಕಾಣುತ್ತಿದ್ದುವು. ಚಿತ್ರಗಳು ಅರಿಪೂರೈಸಿದ್ದುದರಿಂದ ಆ ವೈಚಿತ್ರ್ಯ ಇನ್ನೂ ಹೆಚ್ಚಾಗಿತ್ತು. ದೇಹವಿಲ್ಲದ ಬರಿಯ ಮುಖ, ಕಿವಿ ಕೆನ್ನೆಗಳೇ ಇಲ್ಲದೆ ಕೋರೈಸುವ ಪ್ರಭೆಯ ಕಣ್ಣನ್ನು ಮಾತ್ರ ಉಳ್ಳ ಮುಖ, ಅಮಾನುಷ ಕಾಂತಿಯುಳ್ಳ ಮುಖವೊಂದು ಕಡೆ, ಅಂಧಕಾರಕ್ಕಿಂತಲೂ ಭೀಕರವಾದ ನಸುಬೆಳಕಿನಲ್ಲಿ ಏನನ್ನೋ ಆಲಿ ಸುತ್ತ ನಿಂತಿರುವ ಮರಗಳ ಗುಂಪೊಂದು ಕಡೆ—ಹೀಗೆ ನಾನಾ ಬಗೆಯ ಅಪೂರ್ಣ ಚಿತ್ರಗಳೊಡನೆ ಆ ಅಲ್ಪ ಬೆಳಕಿನಲ್ಲಿ ನೆರಳಿನ ಆಟ ಕೊಠಡಿಯಲ್ಲಿ ವಿಚಿತ್ರ ವಾತಾವರಣವನ್ನುಂಟುಮಾಡಿದ್ದುವು.

ಆದರೆ ಅವಳಿಗೆ ಮಾತ್ರ ಇದಾವುದರ ಲಕ್ಷ್ಯವೂ ಇರಲಿಲ್ಲ. ಅಮೃತ ಶಿಲೆಯ ವಿಗ್ರಹದಂತೆ ಕುಳಿತಿದ್ದಳು ಅವಳು. ದೂರದಲ್ಲಿ ಗೂಬೆಯೊಂದರ ಕರ್ಕಶ ಕೂಗು ಕೊಠಡಿಯನ್ನು ಹೊಕ್ಕಿತು. ಕೊಠಡಿಯ ಮೂಲೆಯೊಂದ

ರಲ್ಲಿ ಚಿತ್ರವೊಂದರ ಹಿಂದೆ ಹುಳವೊಂದು ಚೀರಲಾರಂಭಿಸಿತು. ಆಗಾಗ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಪಟಕ್ಕನೆ ಪುಟ್ಟ ಇಲಿಯೊಂದು ಓಡುವುದು. ಮಧ್ಯೆ ಸ್ವಲ್ಪ ಹೊತ್ತು ಇಲಿಯೊಂದು ಚಿತ್ರದ ಹೊರಗಿನಿಂದ ತಲೆ ಹಾಕಿ ಒಂದು ನಿಮಿಷ ಕಾದಿದ್ದು ಅನಂತರ ಮೆಲ್ಲನೆ ಹೊರಗೆ ಬಂದು ಸುತ್ತ ನೋಡಿ-ಏನೂ ಅರ್ಥವಾಗದೆಯೋ ಏನೋ-ಗಂಭೀರವಾಗಿ ಹೊರಟು ಹೋಗುತ್ತಿತ್ತು

ಅವಳು ಮಾತ್ರ ಕದಲದೆ ಕುಳಿತಿದ್ದಳು. ಅವಳ ನೋಟ ಚಿತ್ರ ವೊಂದರ ಮೇಲೆ ನೆಟ್ಟಿದ್ದರೂ ಈಗ ಅವಳ ಕಣ್ಣಿಗೆ ಕಾಣುತ್ತಿದ್ದುದು—ಬರಿಯ ಶೂನ್ಯ. ಆದರೆ ಸಂಜೆ ಅವನು—ಅವಳ ಗಂಡ, ಚಿತ್ರಗಾರ—ಹೊರಟುಹೋದ ಮೇಲೆ ದೀಪವನ್ನು ಹಚ್ಚಿ ಆ ಚಿತ್ರದ ಕಡೆ ದೃಷ್ಟಿ ಹೊರಳಿಸಿದ್ದಳು. ಅದೊಂದು ಅಪೂರ್ಣ ಚಿತ್ರ. ಆದರೆ ಪೂರ್ಣವಾಗಲು ಹೆಚ್ಚು ಕಾಲವಾಗಲೀ ಶ್ರಮವಾಗಲೀ ಬೇಕಿಲ್ಲವೆಂಬುದು ಗೋಚರವಾಗುತ್ತಿತ್ತು. ಚಿತ್ರದ ಕೆಳಭಾಗದಲ್ಲಿ ಮಧ್ಯೆ ವ್ಯಕ್ತಿಯೊಂದು ಕಾಣಬರುತ್ತಿತ್ತು. ಬಾಡಿ ಹೋದ ಮುಖ. ವಯಸ್ಸು ಚಿಕ್ಕದೆಂಬುದು ವ್ಯಕ್ತವಾದರೂ ಮುಖದಲ್ಲಿ ಯಾತನೆ ಮನೆಮಾಡಿತ್ತು. ಗಲ್ಲ ಬತ್ತಿಹೋಗಿತ್ತು. ಕೆದರಿದ ಕೂದಲು. ಆದರೆ ಕಣ್ಣಿನ ಹೊಳಪು ಎಲ್ಲವನ್ನೂ ಮರೆಸುತಿತ್ತು. ಕಣ್ಣಿನಲ್ಲಿ ಯಾವುದೋ ವೇದನೆ ಮೂಡಿತ್ತು ವ್ಯಕ್ತಿಯ ನೋಟ ಮೇಲ್ಗಡೆಯಿದ್ದ ಒಂದು ಸ್ತ್ರೀ ವ್ಯಕ್ತಿಯಲ್ಲಿ ನೆಟ್ಟಿತ್ತು. ಸ್ತ್ರೀ ವ್ಯಕ್ತಿ ಸ್ಪಷ್ಟವಾಗಿ ಚಿತ್ರಿತವಾಗಿರಲಿಲ್ಲ. ಆದರೆ ಮುಖದಲ್ಲಿ ಒಂದು ಅವರ್ಣನೀಯ ಶಾಂತಿ, ಮಮತೆ ಬೆಳಗುತ್ತಿದ್ದುವು. ಪಕ್ಕದಲ್ಲಿ ಅಸ್ಪಷ್ಟವಾಗಿ ಕಾಣಿಸುತ್ತಿದ್ದುದು ರೆಕ್ಕೆಗಳೋ ಇಲ್ಲವೇ ಗಾಳಿಯಲ್ಲಿ ಹಾರುತ್ತಿದ್ದ ಸೆರಗಿನ ಕೊನೆಯೋ ಗೊತ್ತಾಗುವಂತಿರಲಿಲ್ಲ. ಅವಳ ಒಂದು ಕೈ ಮೊದಲಿನ ವ್ಯಕ್ತಿಯೆಡೆಗೆ, ಕೈಬೆರಳುಗಳು ಉದ್ದವಾಗಿದ್ದುವು, ಬೆರಳ ಕೊನೆ ಚೂಪು. ಮತ್ತೊಂದು ಕೈ ದೂರ ಮೋಡಗಳಿಗೆ ಬೆಳ್ಳಿಯ ಅಂಚು ಕೊಟ್ಟು ಮುಳುಗುತ್ತಿದ್ದ ಸೂರ್ಯನ ಕಡೆಗೆ. ಮತ್ತೊಂದು ಕಡೆ ಒಂದು ಗುಂಪು. ಎಲ್ಲ ಸುಖಜೀವನ ನಡೆಸಿದ ಮಹಾನುಭಾವರೆಂಬುದು ಅವರ ಮುಖದಲ್ಲಿಯೇ ಗೊತ್ತಾಗುತ್ತಿತ್ತು. ಅವರ ಮುಖದಲ್ಲಿ ಸ್ವಲ್ಪ ಆಶ್ಚರ್ಯ ತೋರುತ್ತಿದ್ದರೂ ತುಟಿಯ ಮೇಲೆ ತಿರಸ್ಕಾರದ ನಗೆ ಮೂಡಿತ್ತು. ಚಿತ್ರದ ಹೆಸರು 'ಕಲೆ, ಪ್ರತಿಭೆ ಮತ್ತು ಜಗತ್ತು'.

ಅವಳ ದೃಷ್ಟಿ ಮೊದಲು ನೆಟ್ಟಿದ್ದುದು ಆ ಚಿತ್ರದಲ್ಲಿ. ಆದರೆ ಕ್ರಮೇಣ ಕಣ್ಣಮುಂದಿದ್ದ ಚಿತ್ರ ಮನಸ್ಸಿನ ಚಿತ್ರಗಳಿಗೆ ಎಡೆಗೊಟ್ಟಿತು. ಅವಳ

ಜೀವನವೆಲ್ಲ ಕ್ರಮೇಣ ಅವಳ ಕಣ್ಣಮುಂದೆ ಹಾದುಹೋಯಿತು. ಅವಳ ಬಾಲ್ಯದ ವಿಷಯ ಅವಳಿಗೆ ಹೆಚ್ಚು ನೆನಪಿರಲಿಲ್ಲ. ಅಲ್ಲದೆ ಮನಸ್ಸಿನಲ್ಲಿ ಅಚ್ಚಳಿಯದೆ ಮೂಡುವಂತಹ ಅನುಭವವೇನೂ ಅವಳಿಗೆ ಬಾಲ್ಯದಲ್ಲಿ ಬಂದಿರಲಿಲ್ಲ. ಅವಳಿಗೆ ಸ್ಪಷ್ಟವಾಗಿ ನೆನಪಿದ್ದ ಮೊದಲನೆಯ ಅನುಭವವೆಂದರೆ ಕಲಾವಿದನೊಡನೆ ಅವಳ ಭೇಟಿ. ಅವಳೂ ಅವಳ ಸ್ನೇಹಿತಳು ಮನೋರಮ-ಇಬ್ಬರೂ ಚಿತ್ರಪ್ರದರ್ಶನಕ್ಕೆ ಹೋಗಿದ್ದಾಗ ಅವನನ್ನು ಅವಳು ಕಂಡದ್ದು. ಯಾವುದೋ ಚಿತ್ರವನ್ನು ನೋಡಿ ಅವಳು ತನ್ನ ಗೆಳತಿಗೆ, 'ನೋಡು ಮನೋರಮ, ಅಲ್ಲಿ ಬಲಗಡೆ ಬಣ್ಣವನ್ನು ಸ್ವಲ್ಪ ಕಡಿಮೆ ಮಾಡಿ ಮಧ್ಯೆ ತಿಳಿನೀಲಿ ಬಣ್ಣ ಉಪಯೋಗಿಸಿದ್ದರೆ ಚಿತ್ರ ಎಷ್ಟು ಸುಂದರವಾಗಿರುತ್ತಿತ್ತು' ಎಂದಳು. ಮರ ಕ್ಷಣ ತನ್ನ ಹಿಂದೆ ಯಾರೋ ನಿಂತಂತೆ ಭಾಸವಾಯಿತು, ತಿರುಗಿ ನೋಡಿದಳು. ಶುಭ್ರವಾದ ಬಿಳಿ ಉಡುಪು ತೊಟ್ಟ ಎತ್ತರವಾದ ವ್ಯಕ್ತಿಯೊಂದು ನಿಂತಿತ್ತು. ಗುಂಗುರು ಕೂದಲು, ಮುಗುಳ್ನಗೆಯಾಡುತ್ತಿದ್ದ ತುಟಿ, ಎಲ್ಲಕ್ಕಿಂತ ಎದ್ದು ಕಾಣುತಿದ್ದುದೆಂದರೆ ಪ್ರಕಾಶಮಾನವಾದ ಕಣ್ಣುಗಳು. ''ಅಪರಿಚಿತನಾದರೂ ಮಾತನಾಡಿಸುತ್ತಿದ್ದೇನೆ, ದಯವಿಟ್ಟು ಕ್ಷಮಿಸಿ, ನಿಮಗೆ ಚಿತ್ರಕಲೆಯಲ್ಲಿ ಸಹಜವಾದ ಅಭಿರುಚಿ ಇದ್ದಂತೆ ತೋರುತ್ತದೆ' ಎಂದ ಆತ. ನಾಚಿಕೆಯಿಂದ ಭೂಮಿಗೆ ಇಳಿದುಹೋಗಿದ್ದಳು ಅವಳು. ಅವನಿಗೆ ಏನು ಉತ್ತರ ಕೊಟ್ಟಳೋ ಅವಳಿಗೇ ಅರಿವಿಲ್ಲ. 'ಇದು ಯಾರ ಕೃತಿ, ಗೊತ್ತೇ?' ಎಂದ ಆತ. 'ಉಹುಂ' ಎಂದು ತಲೆಯಲ್ಲಾಡಿಸಿದಳು. ಅವನು ವಿವರಿಸಿದ. ಅಲ್ಲಿಂದ ಪ್ರದರ್ಶನವನ್ನೆಲ್ಲ ಅವನ ಜೊತೆಯಲ್ಲೇ ನೋಡಿದ್ದಾಯಿತು.

ಕ್ರಮೇಣ ಅವನೊಡನೆ ಪರಿಚಯ ಬೆಳೆಯಿತು—ಅಥವಾ ಅವನೇ ಅವಳೊಡನೆ ಪರಿಚಯ ಬೆಳೆಸಿಕೊಂಡ. ಮೊದ ಮೊದಲು ಅವನು ಅವಳ ಮನೆಗೆ ಬಂದಾಗ ಅವಳಿಗೆ ಬಹಳ ನಾಚಿಕೆಯಾಗುತ್ತಿತ್ತು. ಅವಳಿಗೆ ಪ್ರಪಂಚದಲ್ಲಿದ್ದ ನೆಂಟರೆಂದರೆ ಅವಳ ತಂದೆಯೊಬ್ಬರೇ. ಅವರಿಗೂ ವಯಸ್ಸಾಗಿತ್ತು, ಬಡತನದ ಬಳುವಳಿ ಬೇರೆ. ಅವನ ಉಡುಪು, ರೀತಿಗಳಿಂದಲೇ ಅವನು ತೀರ ಸಿರಿವಂತರ ಮನೆತನದವನಲ್ಲದಿದ್ದರೂ ದಾರಿದ್ರ್ಯಕ್ಕೆ ಸಿಲುಕದಿದ್ದವನೆಂಬುದನ್ನು ಅರಿಯಬಹುದಾಗಿತ್ತು. ಆದುದರಿಂದಲೇ ಆರಂಭದಲ್ಲಿ ಅವನು ಅವಳ ಮನೆಗೆ ಬಂದಾಗೆಲ್ಲ ಅವಳು ತನ್ನ ಬಡತನದ ದೆಸೆಯಿಂದ ನಾಚಿಕೆಪಡುತ್ತಿದ್ದಳು. ಆದರೆ ಅವನು ಅವಳ ಸೌಂದರ್ಯಕ್ಕೆ ಮಾರುಹೋಗಿದ್ದನೆಂಬುದು ಕ್ರಮೇಣ

ಅವಳಿಗೆ ಅರಿವಾಗತೊಡಗಿತು. ಅರಳುವ ಗುಲಾಬಿಯ ಮೊಗ್ಗಿನಂತೆ ಅರಳು ತ್ತಿದ್ದ ಅವಳ ಮುಗ್ಧ ಮನಸ್ಸು ಅವನೆಡೆಗೆ ಬಾಗಿತು

ಕೊನೆಗೊಂದು ದಿನ ಅವನು ಅವಳಿಗೆ ತನ್ನ ಪ್ರೇಮವನ್ನು ಸೂಚಿಸಿದ. ತನ್ನನ್ನು ಮದುವೆಯಾಗಿ, ಬಾಳ ಜೊತೆಗಾತಿಯಾಗಿ ತನ್ನ ಬಾಳನ್ನು ಬೆಳಗ ಬೇಕೆಂದು ಬೇಡಿದ. ತನ್ನ ಸ್ಥಿತಿಯನ್ನೂ ಸ್ಪಷ್ಟವಾಗಿ ವಿವರಿಸಿದ. ತಾನು ಆರು ಜನ ಅಣ್ಣತಮ್ಮಂದಿರಲ್ಲೊಬ್ಬ, ಕತೆಗಾರನಾಗಬೇಕೆಂದು ತನ್ನ ಬಯಕೆ, ತನ್ನ ಹಟವನ್ನೇ ಸಾಧಿಸಿದುದರಿಂದ ತಂದೆಗೆ ತನ್ನ ಮೇಲೆ ಕೋಪ ಎಂದು ಹೇಳಿದ. ತನ್ನ ಅಕ್ಕನ ಮಗಳನ್ನು ಮದುವೆಯಾಗೆಂದು ತನ್ನ ಅಕ್ಕನ ಮತ್ತು ತಂದೆಯ ಬಲಾತ್ಕಾರ, ಒಲ್ಲೆನೆಂದುದರಿಂದ ಅವರಿಗೆ ಅಸಮಾಧಾನ ಎಂದೂ ತಿಳಿಸಿದ. ಅಲ್ಲದೆ ತಾನೂ ಅವಳೂ ಬೇರೆ ಬೇರೆ ಜಾತಿಯವರಾದುದರಿಂದ-ತಾನು ಬ್ರಾಹ್ಮಣನಾಗಿ ಅವಳು ವೀರಶೈವಳೆನಿಸಿಕೊಂಡುದರಿಂದ—ಅವಳನ್ನು ಕೈಹಿಡಿ ದರೆ ತಂದೆ ಕೋಪಗೊಂಡು ತನ್ನನ್ನು ಮನೆಯಿಂದಟ್ಟಬಹುದೆಂದೂ, ತನ್ನ ಕೈ ಹಿಡಿದರೆ ಬಡತನ, ಕಷ್ಟಗಳ ಕೈಹಿಡಿದಂತೆ ಎಂದೂ ಎಚ್ಚರಿಸಿದ. ಆದರೂ ಅವಳು ಒಪ್ಪಿಕೊಂಡಳು, ಲಜ್ಜೆಯಿಂದ ಕೆಂಪಾದ ಅವಳ ಕೆನ್ನೆಗೆ ಅವನ ತುಟಿ ತಗುಲಿತು.

ಮದುವೆಯೂ ಆಯಿತು. ಅವನು ಏನಾಗಬಹುದೆಂದು ಎಣಿಸಿದ್ದನೋ ಅದೇ ಆಯಿತು. ಅವನ ತಂದೆ—ಅವಳು ನೋಡದ ಮಾವ—ಅವನಿಗೆ ಇನ್ನೂರು ರೂಪಾಯಿ ಕೊಟ್ಟು ಮತ್ತೆ ಅವನ ಮುಖ ನೋಡುವುದಿಲ್ಲವೆಂದು ಶಪಥಮಾಡಿದರು. ಅವರಿಬ್ಬರು ಬೇರೆ ಮನೆ ಮಾಡಿದರು. ಆ ಹೊತ್ತಿಗೆ ಅವಳ ತಂದೆಯೂ ಕಣ್ಮುಚ್ಚಿದರು. ಪುಟ್ಟ ಮನೆ, ಕೆಲವು ಅಗ್ಗದ ಸಾಮಾನು ಗಳು, ಇಷ್ಟೇ ಅವರ ಆಸ್ತಿ. ಸಣ್ಣ ಮೇಜೊಂದು, ಹೂವಿನ ಪಾತ್ರೆಯೊಂದು ಎರಡನ್ನೂ ಅವರ ಸಂಸಾರದ ಮೊದಲನೆಯ ದಿನ ಅವನು ಹೆಮ್ಮೆಯಿಂದ ಕೊಂಡುತಂದಿದ್ದ. ದಿನಗಳು ಉರುಳಿದುವು. ಅವನು ಚಿತ್ರಗಳನ್ನು ಬರೆಯ ಲಾರಂಭಿಸಿದ. ಆದರೆ ಚಿತ್ರಗಳ ಮಾರಾಟವೇ ಕಷ್ಟವಾಗಿತ್ತು. ತಂದೆ ಕೊಟ್ಟಿದ್ದ ಹಣ ಮುಗಿಯಿತು. ಅವಳಿಗಿದ್ದ ಹಲಕೆಲವು ಒಡವೆಗಳನ್ನೂ ಅವಳ ಬಲವಂತಕ್ಕೆ ಮಾರಿದ. ಆದರೂ ಬಾಳು ಸಾಗುವುದು ಕಷ್ಟವಾಯಿತು. ಅವರ ಪ್ರೇಮವೊಂದೇ ಅವರಿಗಿದ್ದ ಧನ.

ಈ ಮಧ್ಯೆ ಹೊಸ ಕುತ್ತವೊಂದು ಬಂದಿತು ಅವಳಿಗೆ. ಅವರ ಮನೆಯ

ಹತ್ತಿರವೇ ಇದ್ದ ಸಿರಿವಂತ ಯುವಕನೊಬ್ಬ ಅವಳ ಮೇಲೆ ಕಣ್ಣು ಹಾಕಿದ. ಅವನಿಲ್ಲದಿದ್ದಾಗ ಮನೆಯ ಕಡೆ ಸುಳಿದಾಡಲಾರಂಭಿಸಿದ. ಒಂದು ದಿನ ಬಾಗಿಲನ್ನು ಧೈರ್ಯದಿಂದ ತಟ್ಟಿದ. ಅವಳು ಗಂಡನೇ ಬಂದಿರಬಹುದೆಂದು ಬಾಗಿಲು ತೆರೆದಳು. ಅವನನ್ನು ಕಂಡು ದಿಗ್ಭ್ರಮೆಯಾಯಿತು. ಅವನು ಅವಳ ಕೈ ಹಿಡಿಯಲೆತ್ನಿಸಿದ. ಅವಳು ಕೊಸರಿಕೊಂಡು, ಕೂಗಿಕೊಳ್ಳುವೆನೆಂದು ಹೆದರಿಸಿದಳು. ಯುವಕ ಜೇಬಿನಿಂದ ನೋಟುಗಳನ್ನು ತೆಗೆದು ಹಿಡಿದ, 'ನಿನ್ನ ಬಡತನ ಸುಟ್ಟುಹೋಯಿತೆಂದು ತಿಳಿ' ಎಂದ. ನೋಟುಗಳನ್ನು ಚರಂಡಿಯಲ್ಲಿ ಎಸೆದಳು ಅವಳು. ಯುವಕ ಬೆಪ್ಪಾಗಿ ಹೊರಟುಹೋದ.

ಅಂತೂ ಹೇಗೋ ಸಾಗಿತ್ತು ಅವರ ಸಂಸಾರ. ಅವಳಿಗೆ ಅವನೇ ಆಧಾರ, ಅವನಿಗೆ ಅವಳೇ ಭಾಗ್ಯದೇವತೆ. ಪ್ರೇಮದ ನೆರಳಿನಲ್ಲಿ ಎಲ್ಲ ಕಷ್ಟಗಳನ್ನೂ ಮರೆತು ದಿನ ಕಳೆಯುತ್ತಿದ್ದರು. ಚಿತ್ರಗಾರ ಮತ್ತು ಅವನ ಸುಂದರ ಪತ್ನಿ.

ಒಂದು ದಿನಸ ಅವಳ ಕಿವಿಗೊಂದು ಸುದ್ದಿ ಬಿತ್ತು—ಅಖಿಲ ಭಾರತ ಚಿತ್ರ ಕಲಾಪ್ರದರ್ಶನವೊಂದು ನಡೆಯಲಿದೆ ಎಂದು. ಮೊದಲನೆಯ ಬಹುಮಾನ ಒಂದು ಸಾವಿರ ರೂಪಾಯಿ. ಎರಡನೆಯ ಬಹುಮಾನ ಏಳುನೂರೈವತ್ತು. ಮೂರನೆಯ ಬಹುಮಾನ ಐನೂರು ರೂಪಾಯಿ. ಅವಳು ಪ್ರದರ್ಶನಕ್ಕೆ ಚಿತ್ರವನ್ನು ಕಳುಹಿಸುವಂತೆ ಅವನಿಗೆ ಬಲವಂತ ಮಾಡಿದಳು. ಅವನಿಗೂ ಆಗಲೇ ಪ್ರದರ್ಶನದ ಸುದ್ದಿ ತಿಳಿದಿತ್ತು. ಮೊದಲು ಚಿತ್ರ ಕಳುಹಿಸಬೇಕೆಂದು ಕೊಂಡರೂ ಆ ಮೇಲೆ ಅದರಿಂದ ಪ್ರಯೋಜನವಿಲ್ಲವೆಂದುಕೊಂಡು ಸುಮ್ಮನಾಗಿದ್ದ. ಆದರೆ ಅವಳಿಗೆ ಏನೋ ವಿಶ್ವಾಸ—ಅವನು ತನ್ನ ಕೌಶಲ್ಯವನ್ನೆಲ್ಲ ಉಪಯೋಗಿಸಿ ಚಿತ್ರವೊಂದನ್ನು ರಚಿಸಿ ಕಳುಹಿಸಿಕೊಟ್ಟರೆ ಬಹುಮಾನ ಬಂದೇ ಬರುವುದು, ಬಹುಮಾನಕ್ಕಿಂತ ಹೆಚ್ಚಾಗಿ ಕೀರ್ತಿ ಬರುವುದು ಎಂದು. ಅವಳ ಮಾತು ಅವನಿಗೂ ಉತ್ತೇಜನ ಕೊಟ್ಟಿತು. ಬಹುಮಾನ ಬಂದೇ ಬರುವುದೆಂಬ ಭರವಸೆ ಇಲ್ಲದಿದ್ದರೂ ತನ್ನ ಚಿತ್ರವನ್ನು ಕೆಲವರಾದರೂ ಮೆಚ್ಚಬಹುದು. ಮುಂದೆ ಚಿತ್ರಗಳ ಮಾರಾಟ ಸುಲಭವಾದೀತು ಎಂದು ಅವನ ಎಣಿಕೆ. ಅಂತೂ ಹೊಸದಾಗಿ ಚಿತ್ರ ಬರೆಯಲು ಕುಳಿತ. 'ಕಲೆ-ಪ್ರತಿಭೆ-ಜಗತ್ತೇ' ಆ ಚಿತ್ರ.

ಚಿತ್ರ ಅರ್ಧ ಮುಗಿಯುವುದರಲ್ಲಿ ಅವರ ಬಡತನ ಪರಮಾವಧಿಯನ್ನು

ಮುಟ್ಟಿತ್ತು. ಬಣ್ಣ ಮುಗಿಯಿತು. ಹೊಸ ಬಣ್ಣಗಳನ್ನು ಕೊಂಡು ತರದಿದ್ದರೆ ಚಿತ್ರವನ್ನು ಮುಗಿಸುವುದೇ ಅಸಾಧ್ಯವಾಯಿತು. ಮಾರುವುದಕ್ಕೆ ಕುಂಚವಲ್ಲದೆ ಇನ್ನೇನೂ ಉಳಿದಿರಲಿಲ್ಲ. ಮೇಜು, ಹೂವಿನ ಪಾತ್ರೆ ತೀರ ಹಳೆಯದಾಗಿ ಹೋಗಿದ್ದುವು; ಅಲ್ಲದೆ ಅವರ ಸಂಸಾರದ ಜೀವನದಲ್ಲಿ ಒಂದು ಭಾಗವಾಗಿದ್ದುವು. ಹಣದ ಸಂಪಾದನೆಗೆ ಎಲ್ಲ ರೀತಿಯಲ್ಲೂ ಪ್ರಯತ್ನ ಪಟ್ಟಾಯಿತು. ಬಣ್ಣಕ್ಕೆ ದುಡ್ಡು ಬೇಕು, ಚಿತ್ರವನ್ನು ಕಳುಹಿಸಿಕೊಡುವ ಖರ್ಚಿಗೆ ದುಡ್ಡು ಬೇಕು. ಕೆಲಸವನ್ನು ನಿಲ್ಲಿಸಿ ಕಲೆಗಾರ ಹಣಕ್ಕಾಗಿ ಅಲೆದ. ಸಾಲ ಸಿಗುವುದೂ ಅಸಾಧ್ಯ. ಚಿತ್ರ ಕಳುಹಿಸಲು ಇನ್ನು ನಾಲ್ಕೇ ದಿನ ಉಳಿದಿತ್ತು. ತೀರ ಕಂಗೆಟ್ಟು ತಂದೆಗೆ ಒಂದು ಕಾಗದ ಬರೆದ. ಅವರಾದರೂ ಸಹಾಯ ಮಾಡಿಯಾರೆಂಬ ಆಶಾತಂತು ಒಂದೇ ಉಳಿದಿದ್ದುದು.

ಸಂಜೆ ಮನೆಗೆ ಬಂದಾಗ ತಾನು ಅಂದು ಪಟ್ಟ ಪಾಡನ್ನೆಲ್ಲ ಹೇಳಿದ. ಹಣಕ್ಕಾಗಿ ಮತ್ತೊಂದು ಕಡೆ ಪ್ರಯತ್ನಿಸುವೆನೆಂದೂ, ಆದರೆ ಯಶಸ್ವಿಯಾಗುವ ಭರವಸೆ ಇಲ್ಲವೆಂದೂ ಹೇಳಿ ಹೋದ. ಅವಳು ದೀಪ ಹಚ್ಚಿ ಚಿತ್ರಶಾಲೆಯಲ್ಲಿ ಕುಳಿತಳು. ಗಡಿಯಾರ ಟಿಕ್' 'ಟಿಕ್' 'ಟಿಕ್' 'ಟಿಕ್' ಎಂದು ಕಳೆದ ನಿಮಿಷಗಳನ್ನು ಬೀಳ್ಕೊಳ್ಳುತ್ತಿತ್ತು.

ರಾತ್ರಿ ಸುಮಾರು ಒಂದು ಘಂಟೆಯ ಹೊತ್ತಿಗೆ ಅವನು ಬಾಗಿಲು ತಟ್ಟಿದ. ಆಗಲೇ ಅವಳಿಗೆ ಎಚ್ಚರಿಕೆಯಾದದ್ದು

'ಯಾರದು?'

'ನಾನು ಚಿನ್ನಾ' ಅವನ ಧ್ವನಿ

ಬಾಗಿಲು ತೆರೆದಳು. 'ಹಣ ಸಿಕ್ಕಿತೇ?' ಎಂದು ಕೇಳುವ ಅಗತ್ಯವೇ ಇರಲಿಲ್ಲ. ನಿರಾಸೆ ಅವನ ಹಣೆಯಲ್ಲಿ ತಾಂಡವವಾಡುತ್ತಿತ್ತು.

ಇಬ್ಬರಿಗೂ ಊಟದ ಯೋಚನೆ ಇಲ್ಲ; ಇಬ್ಬರಿಗೂ ಊಟವೇ ಬೇಕಾಗಿರಲಿಲ್ಲ. ಆದರೂ ಅವನು ಕೇಳಿದ: 'ಊಟ ಆಯಿತೇ ಚಿನ್ನ?'

ತಲೆಯಲ್ಲಾಡಿಸಿದಳು ಅವಳು

'ಇನ್ನೂ ಇಲ್ಲವೇ? ನನಗೋಸ್ಕರ ಕಾದಿದ್ದೆಯಾ?'

'ಮನೆಯಲ್ಲಿ . . . . ಏನೂ . . . . ಇಲ್ಲ' ಉಕ್ಕುತ್ತಿದ್ದ ಕಣ್ಣೀರು ತಡೆಯುತ್ತ ತೊದಲುತ್ತ ಹೇಳಿದಳು.

ಅವಳನ್ನು ತನ್ನ ತೋಳಿನಲ್ಲಿ ಬಂಧಿಸಿ ಅವಳ ತುಟಿಗೆ ತನ್ನ ತುಟಿ ತಗುಲಿಸಿದ ಕಲಾವಿದ. ಅವಳ ಕಣ್ಣೀರನ್ನು ಒರೆಸುತ್ತ ಹೇಳಿದ: 'ಹೋಗಲಿ ಬಿಡು, ಯಾಕೆ ಅಳುತ್ತಿ? ದಿನವೂ ನಮ್ಮ ಹಣೆಯ ಬರೆಹವೇ ಹೀಗಾಯಿತು.'

'ನಿಮ್ಮ . . . ನಿಮ್ಮ . . . ನಿಮಗೆ . . . ಊಟ'

'ಅಯ್ಯೋ ನನಗೀಗ ಊಟ ಬೇರೆ ಬೇಕೇ ಚಿನ್ನ?'

ಇಬ್ಬರೂ ಮಲಗಿದರು. ಮಲಗಿದರೆಂದು ಹೆಸರು ಅಷ್ಟೆ, ನಿದ್ದೆ ಮಾತ್ರ ಹತ್ತಲಿಲ್ಲ. ದೀಪ ಮಾತ್ರ ಕಣ್ಣುಮುಚ್ಚಿ ಶಾಂತವಾಯಿತು.

x x x x

ಅವರಿವರಿಂದ ಕಾಡಿ ಬೇಡಿ ತಂದ ಇಷ್ಟು ಅಕ್ಕಿಯನ್ನೇ ಬೇಯಿಸಿ ಅವನಿಗಾಗಿ ಮರುದಿನ ಬೆಳಿಗ್ಗೆ ಅವಳು ಕಾದಿದ್ದಳು. ಹನ್ನೊಂದಾಯಿತು, ಹನ್ನೆರಡಾಯಿತು, ಅವನು ಬರಲಿಲ್ಲ ಎರಡು ಘಂಟೆಯ ಹೊತ್ತಿಗೆ ಬಂದ.

"ಇದನ್ನು ಓದು, ಚಿನ್ನ" ಎಂದು ಕಾಗದವೊಂದನ್ನು ಕೊಟ್ಟ.

ಅವನ ತಂದೆಯಿಂದ ಬಂದ ಉತ್ತರ. ನಿಷ್ಠುರವಾಗಿ ಬರೆದಿದ್ದರು, ಅವನಿಗೂ ತಮಗೂ ಸಂಬಂಧವಿಲ್ಲವೆಂದು, ಜಾತಿ ನೀತಿ ಕೆಟ್ಟ ಮಗ ತಮಗೆ ಬೇಡವೆಂದು ತಿಳಿಸಿದ್ದರು.

"ಹಾಗಾದರೆ-?"

ಅವನು ಬಲವಂತದಿಂದ ಬಾರದ ನಗು ನಕ್ಕ, ಅಷ್ಟೇ ಅವಳಿಗೆ ಸಿಕ್ಕ ಉತ್ತರ.

ಅವನ ಊಟವಾಯಿತು. ಅದೇ ಎಲೆಯಲ್ಲಿ ಅವಳು ಊಟಕ್ಕೆ ಕುಳಿತಳು. ಅವಳು ಅರೆಬೆಂದ ಅನ್ನಕ್ಕೆ ನೀರು ಸಾರನ್ನು ಹಾಕಿಕೊಳ್ಳುತ್ತಲೇ ಅವನಿಗೆ ಕಣ್ಣಿನಲ್ಲಿ ನೀರು ಉಕ್ಕಿತು.

"ಚಿನ್ನಾ" ಎಂದ.

ಅವಳು ತಲೆಯೆತ್ತಿ ನೋಡಿದಳು.

"ಇವತ್ತು ನಿನ್ನ ಹುಟ್ಟಿದ ಹಬ್ಬ"

ಹೌದು, ಅವಳು ಮರೆತೇ ಬಿಟ್ಟಿದ್ದಳು. ಈಗ ಜ್ಞಾಪಕ ಬಂತು. ಆದರೆ ಉತ್ತರ ಕೊಡಲಿಲ್ಲ.

"ನನ್ನ ಕೈಹಿಡಿದದ್ದಕ್ಕೆ ಎಷ್ಟು ವೈಭವದಿಂದ ನಿನ್ನ ಹುಟ್ಟಿದ ಹಬ್ಬವನ್ನು ನಡೆಸುತ್ತಿದ್ದೇನೆ ನೋಡಿದೆಯಾ, ಚಿನ್ನ?"

"ಅಯ್ಯೋ ಸಾಕು, ಸುಮ್ಮನಿರಿ".

"ಇವತ್ತು ನಿನಗೊಂದು ಪುಟ್ಟ ಉಡುಗೊರೆಯನ್ನು ಕೊಡಲಾರದೆ ಹೋದೆ".

"ಕೊಟ್ಟಿದ್ದೀರಲ್ಲ ನಿಮ್ಮ ಪ್ರೇಮವನ್ನೇ. ಅದಕ್ಕೆ ಬೆಲೆ ಕೊಡಲು ಸಾಧ್ಯವೇ?"

"ನೀನೊಬ್ಬ ದೇವತೆ, ಚಿನ್ನ" ಎಂದ ಅವನು.

ಅವಳು ಮಾತನಾಡಲಿಲ್ಲ. ಕಣ್ಣಿನಿಂದ ಉರುಳಿದ ಹನಿ ಅನ್ನದಲ್ಲಿ ಸೇರಿಹೋಯಿತು.

x x x x

ಧಾವಿಸಿ ಮನೆಯ ಕಡೆ ಬಂದ ಕಲಾವಿದ. ಅವನ ಹೃದಯದ ಬಡಿತ, ಕಾಲ ನಡಿಗೆ ಎರಡೂ ಸ್ಪರ್ಧೆ ಹೂಡಿದ್ದುವು. ಅವನ ಕೈ ಹರಿದುಹೋದ ಕೋಟಿನ ಜೇಬಿನಲ್ಲಿ ಒಂದು ಪೊಟ್ಟಣವನ್ನು ಹಿಡಿದಿತ್ತು. ಪೊಟ್ಟಣದಲ್ಲಿದ್ದುದು ಒಂದು ರೋಲ್ಡ್‌ಗೋಲ್ಡ್ ಸರ.

ಹಲವು ಭಾವನೆಗಳು ಅವನ ಮನಸ್ಸಿನಲ್ಲಿ ಕುಣಿಯುತ್ತಿದ್ದುವು. ಅವಳು ತನಗಾಗಿ ಕಾಯುತ್ತ ಚಿತ್ರಶಾಲೆಯಲ್ಲಿ ಕುಳಿತಿರುವಳೆಂದು ಅವನಿಗೆ ಗೊತ್ತು. ಹೋಗಿ ಬಾಗಿಲು ತೆರೆಯುತ್ತಲೇ ಆಕಾಂಕ್ಷೆಯಿಂದ ತನ್ನ ಮುಖವನ್ನು ನೋಡು ವಳು. ಅವಳನ್ನು ಬಿಗಿದಪ್ಪಿ ಕೊರಳಿಗೆ ಸರಹಾಕಬೇಕು. ಆ ಮೇಲೆ ಇದ್ದ ಹಣದಲ್ಲೇ ಒಂದೆರಡು ಪದಾರ್ಥಗಳನ್ನು ತಂದು ಆ ರಾತ್ರಿಯಾದರೂ ಹೊಟ್ಟೆತುಂಬ ಊಟಮಾಡಬೇಕು. ಆದರೆ ಹಣ ಎಲ್ಲಿಂದ ಬಂತೆಂದು ಅವಳು ಕೇಳಿದರೆ—? ಕೇಳದಿರುವಳೇ? ತನ್ನ ಕುಂಚವನ್ನು ಒತ್ತೆಯಿಟ್ಟು ಹಣ ತಂದೆ ನೆಂದು ಹೇಳಿದರೆ ಎಷ್ಟು ಕೋಪಗೊಂಡಾಳು! ಅದೂ ಜಾಣತನವೇ? ಈಗ ಚಿತ್ರ ಮುಗಿಸುವುದು ಹೇಗೆ? ಆದರೆ—? ಗಂಡನಿಗೆ ತನ್ನನ್ನೇ ಒಲವಿನಿಂದ ಅರ್ಪಿಸಿಕೊಂಡ ಅವಳಿಗೆ ಅವಳ ಹುಟ್ಟಿದ ಹಬ್ಬದ ದಿನವಾದರೂ ಹೊಟ್ಟೆ ತುಂಬ ಊಟಹಾಕಲಾರದಿದ್ದರೆ ತಾನಿದ್ದೂ ಪ್ರಯೋಜನವೇನು? ಆಯಿತು, ಆದರೆ ಕುಂಚವೂ ಹೋದ ಮೇಲೆ ಮುಂದೆ ಗತಿ?

ಮನೆಯ ಬಾಗಿಲು ತಟ್ಟಿದ. ಬಾಗಿಲು ತೆಗೆದುಕೊಂಡಿತು. ಅವ ನೊಡನೆ ನುಗ್ಗಿದ ಗಾಳಿಯ ಭರಕ್ಕೆ ದೀಪ ಹೆದರಿ ಒಂದು ಸಲ ಫಕ್ಕನೆ ಹಾರಿ ಶಾಂತವಾಯಿತು.

ಕಲಾವಿದನಿಗೆ ಆಶ್ಚರ್ಯವಾಯಿತು. ಅಲ್ಲಿಂದ ಅಡಿಗೆ ಮನೆಗೆ ಕಾಲಿಟ್ಟ. ಮಂಕಾಗಿ ಉರಿಯುತ್ತಿದ್ದ ದೀಪದ ಬೆಳಕಿನಲ್ಲಿ ಮೇಲಿಂದ ನೇತಾಡುತ್ತಿದ್ದ ಅವಳ ದೇಹ ಅವನಿಗೆ ಸ್ವಾಗತ ಕೊಟ್ಟಿತು.

ಕಲಾವಿದ ಥರಥರನೆ ನಡುಗಿದ. ಗೋಡೆಗೆ ಒರಗಿಕೊಂಡು ಕಣ್ಣು ಮುಚ್ಚಿ ನಿಂತ.

ಎಷ್ಟು ಕಾಲ ಕಳೆಯಿತೋ ಹಾಗೆ. ಮೆಲ್ಲನೆ ಚೇತರಿಸಿಕೊಂಡು ದೀಪ ವನ್ನು ದೊಡ್ಡದು ಮಾಡಿದ. ದೀಪದ ಪಕ್ಕದಲ್ಲಿ ಬಿದ್ದಿದ್ದ ಕಾಗದವೊಂದು ಕಣ್ಣಿಗೆ ಬಿದ್ದಿತು. ನಡುಗುವ ಕೈಗಳಲ್ಲಿ ಹಿಡಿದು ದೀಪದ ಬೆಳಕಿನಲ್ಲಿ ಅದನ್ನು ಹರಿದ; ಕಾಗದವೊಂದು, ಅದರ ಜೊತೆಗೆ ಹಲವು 'ನೋಟು'ಗಳು ಹೊರಗೆ ಬಂದುವು. ಕಾಗದ ಓದಿದ.

"ಹೃದಯೇಶ,

ನಿಮ್ಮ ಅಪ್ಪಣೆ ಪಡೆಯದೆ ಈ ಲೋಕದಿಂದ ಹೋಗಿದ್ದೇನೆ. ಕ್ಷಮಿಸಿ. ನನ್ನ ಕೈ ಹಿಡಿದಂದಿನಿಂದ ಕಷ್ಟದಲ್ಲಿ ಮುಳುಗಿದ್ದೀರಿ. ನನ್ನಿಂದ ನೀತಿಗೆಟ್ಟವ ರೆಂದು, ಜಾತಿಗೆಟ್ಟವರೆಂದು ತಂದೆಯ ಹೃದಯದಿಂದ ಬಹಿಷ್ಕೃತರಾದಿರಿ. ನಿಮ್ಮ ಜೀವನದ ಸುಖಕ್ಕೆ ಹುಳಿಹಿಂಡಿದ ಅಪರಾಧಿ ನಾನು, ಮನ್ನಿಸಿರಿ.

ಇದರೊಡನೆ ಸ್ವಲ್ಪ ಹಣ ಇಟ್ಟಿದ್ದೇನೆ. ಪ್ರಾಣಕ್ಕಿಂತ ಹೆಚ್ಚಾದುದನ್ನು ತೆತ್ತು, ದೇಹವನ್ನು ಮಾರಿ ಆ ಹಣ ಗಳಿಸಿದ್ದೇನೆ. ಮತ್ತೆ ಈ ಎಂಜಲು ನಿಮ್ಮನ್ನು ಸೋಕಬಾರದೆಂದು ಹೊರಟು ಹೋಗಿದ್ದೇನೆ. ಆ ಹಣವನ್ನು ಬಳಸಿಕೊಂಡು ನಿಮ್ಮ ಚಿತ್ರ ಪೂರ್ಣಮಾಡಿರಿ; ಪ್ರದರ್ಶನಕ್ಕೆ ಕಳುಹಿಸಿ. ನಿಮಗೆ ಬಹುಮಾನ, ಕೀರ್ತಿ ಎಲ್ಲ ಲಭಿಸುವುವೆಂದು ನನ್ನ ಆತ್ಮ ನುಡಿಯುತ್ತಿದೆ. ನನ್ನ ಕೊನೆಯ ಸೇವೆ ಇದೇ.

ನೋಗಲಾರದೆ ಹೋಗುತ್ತಿದ್ದೇನೆ. ಆಗಾಗ ನನ್ನನ್ನು ನೆನೆಯುತ್ತಿರಿ.

ನಿಮ್ಮ ಒಲವಿನ ರಾಣಿ"

ದಿಗ್ಭ್ರಾಂತನಾಗಿ ಅವಳ ಶಾಂತವಾದ ಮುಖದ ಕಡೆಯೇ ನೋಡುತ್ತ ನಿಂತ ಕಲಾವಿದ.

x x x x

ಬೆಳಕು ಹರಿದ ಮೇಲೆ ಪುಟ್ಟ ಗುಬ್ಬಚ್ಚಿಯೊಂದು ಕಿಟಿಕಿಯ ಬಳಿಕೂತು ಆಶ್ಚರ್ಯದಿಂದ ಕಣ್ಣು ಹೊರಳಿಸುತ್ತ ಕೂಗಿದಾಗಲೇ ಅವನಿಗೆ ಎಚ್ಚರ ವಾದದ್ದು. ಮುಖದಲ್ಲಿ ದೃಢ ನಿಶ್ಚಯ ತೋರಿಬರುತ್ತಿತ್ತು. ಅವಳ ದೇಹವನ್ನು ಎಚ್ಚರಿಕೆಯಿಂದ ಇಳಿಸಿ ಎತ್ತಿಕೊಂಡು ಚಿತ್ರ ಶಾಲೆಗೆ ಬಂದ, ತಾನು—ಅವಳು ಮಲಗುತ್ತಿದ್ದ ಹಾಸಿಗೆಯ ಮೇಲೆ ಮಲಗಿಸಿದ. ಅವಳ ಕಾಲು ತಗುಲಿ ಮೇಜು ಕೆಳಗುರುಳಿತು, ಹೂವಿನ ಪಾತ್ರೆ ಚೂರು ಚೂರಾಯಿತು, ಆದರೆ ಅವಳ ಕೊರಳಿಗೆ ಸರ ಹಾಕಿ ಮಂಜಿನಂತೆ ತಣ್ಣಗಾಗಿದ್ದ ಕೆನ್ನೆಯ ಮೇಲೆ ತುಟಿಯನ್ನೊತ್ತಿದ್ದ ಕಲಾವಿದನಿಗೆ ಅದರ ಪರಿವೆಯೇ ಇರಲಿಲ್ಲ.

ಹೇಗೋ ಏನೋ, ಅಂತ್ಯ ಸಂಸ್ಕಾರವಾಯಿತು. ಅವಳ ದೇಹವನ್ನು ಸ್ಮಶಾನಕ್ಕೆ ಒಯ್ಯುತ್ತಿದ್ದಾಗ ಸಿರಿವಂತ ಯುವಕ ಆಶ್ಚರ್ಯ, ಭಯಗಳಿಂದ ತನ್ನ ಮನೆಯ ಮುಂದೆ ನಿಂತು ನೋಡುತ್ತಿದ್ದುದು ಕಲಾವಿದನ ಲಕ್ಷ್ಯಕ್ಕೆ ಬರಲಿಲ್ಲ. ಅವಳ ದೇಹ ಬೂದಿಯಾಗುವ ವರೆಗೆ ನಿಂತಿದ್ದು, ಆ ಉರಿಯಲ್ಲಿ ಹೊಳೆಯು ತ್ತಿದ್ದ ಸರವನ್ನೇ ದಿಟ್ಟಿಸಿ ಹಿಂದಿರುಗಿದ. ಕಣ್ಣಿನಲ್ಲಿ ನೀರಿರಲಿಲ್ಲ.

ಸ್ಮಶಾನದಿಂದ ನೇರವಾಗಿ ಅಂಗಡಿಗೆ ಹೋದ. ಒತ್ತೆಯಿಟ್ಟಿದ್ದ ಕುಂಚ ವನ್ನು ಬಿಡಿಸಿಕೊಂಡ. ಬಣ್ಣಗಳನ್ನು ಕೊಂಡುಕೊಂಡು ಬಂದ. ಅಂದೆಲ್ಲ ಹೊರಗೆ ಹೋಗದೆ ಚಿತ್ರಶಾಲೆಯಲ್ಲಿ ಕೆಲಸಮಾಡಿ ಚಿತ್ರವನ್ನು ಪೂರೈಸಿದ. ರಾತ್ರಿಯನ್ನೆಲ್ಲ ಅವಳಿಲ್ಲದ ಹಾಸಿಗೆಯ ಬಳಿ ಕುಳಿತು ಚಿತ್ರವನ್ನೇ ದಿಟ್ಟಿಸುತ್ತಿದ್ದ. ಬೆಳಗಾಗುತ್ತಲೇ ಹೋಗಿ ಚಿತ್ರವನ್ನು ಪ್ರದರ್ಶನಾಲಯಕ್ಕೆ ಕಳುಹಿಸಿದ. ಮನೆಗೆ ಬಂದು ಹೊಸಲು ದಾಟಿದ, ಬರಿಯ ಹಾಸಿಗೆ, 'ಬಿಕೋ' ಎನ್ನುತ್ತಿದ್ದ ಮನೆ ಅವನನ್ನು ಎದಿರುಗೊಂಡವು, ಧಡಾರನೆ ಕೆಳಗುರುಳಿದ.

x x x x

'ಕಲೆ-ಪ್ರತಿಭೆ-ಜಗತ್ತ'ನ್ನು ಎಲ್ಲರೂ ಕೊಂಡಾಡುವವರೇ. ಕಲಾವಿದನ ಮುಖದಲ್ಲಿ ಮೂಡಿದ್ದ ಯಾತನೆ, ಅವನ ಕಣ್ಣು ವ್ಯಕ್ತಪಡಿಸುತ್ತಿದ್ದ ಮಹದಾಸೆ, ಪ್ರತಿಭೆಯ ವದನದ ಶಾಂತಿ, ಮಮತೆ, ಅವಳ ಕಣ್ಣಿನ ವಿಚಿತ್ರ ಹೊಳಪು, ಅಸ್ಪಷ್ಟವಾದರೂ ಅವ್ಯಕ್ತವಲ್ಲದ ಅವಳ ವಿಲಕ್ಷಣ ಬಗೆ, ದೂರ ದಲ್ಲಿ ಕಾಣುತ್ತಿದ್ದ ಸೂರ್ಯಾಸ್ತ, ಸುಖದ ಮಡಿಲಲ್ಲಿ ಬೆಳೆದ ಜನರ ಮುಖದ ವಿಚಿತ್ರ ಭಾವ-ಪ್ರತಿಯೊಂದನ್ನೂ ಪ್ರತಿಯೊಬ್ಬ ಕಲಾವಿಮರ್ಶಕನೂ ಮೆಚ್ಚಿ

ಕೊಂಡಿದ್ದ. ಎಲ್ಲರಿಗೂ ಪರಿಚಿತವಾದ ಬಣ್ಣಗಳನ್ನೇ ಹೊಸ ಬಗೆಯಲ್ಲಿ ಬೆರೆಸಿ ಸಾಧಿಸಿದ ಅದ್ಭುತ ಪರಿಣಾಮ ಎಲ್ಲರ ಮನಸ್ಸನ್ನೂ ಸೂರೆಗೊಂಡಿತ್ತು. ಪ್ರದರ್ಶನದ ಆರಂಭೋತ್ಸವ ನಡೆಸಲು ಬಂದ ಮಂತ್ರಿವರ್ಯರೇ ಆ ಚಿತ್ರಕ್ಕೆ ಎಷ್ಟೇ ಬೆಲೆಯಾಗಲಿ ಕೊಂಡುಕೊಳ್ಳುವೆನೆಂದರು.

ಸಮಾರಂಭ ವೈಭವದಿಂದ ಸಾಗಿತ್ತು. 'ಬಹುಮಾನ ವಿನಿಯೋಗ' ಎಂದು ಅಧ್ಯಕ್ಷರು ನುಡಿದಾಗ ಕಾರ್ಯದರ್ಶಿಗಳು ಸಭೆಗೆ ಹೀಗೆಂದರು:— "'ಕಲೆ-ಪ್ರತಿಭೆ-ಜಗತ್ತೆ'ಂಬ ಅಮರ ಕಲಾಕೃತಿಯುನ್ನು ರಚಿಸಿದ ಪ್ರತಿಭಾವಂತ ಕಲಾವಿದರು ಇಂದು ಇಲ್ಲಿದ್ದು ಮೊದಲನೆಯ ಬಹುಮಾನ ಪಡೆದಿದ್ದರೆ ನಮ್ಮೆಲ್ಲರ ಆನಂದಕ್ಕೆ ಮಿತಿಯಿರುತ್ತಿರಲಿಲ್ಲ. ಆದರೆ ಅವರ ಪತ್ನಿಯ ನಿಧನದಿಂದ ಅವರು ಅಪಾರ ಶೋಕಕ್ಕೆ ಗುರಿಯಾಗಿದ್ದಾರೆ, ಅವರೀಗ ಹುಚ್ಚಾಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಅವರ ಪತ್ನಿಗೆ ಭಗವಂತನು ಶಾಂತಿಯನ್ನೀಯಲಿ, ಕಲಾವಿದರು ಬೇಗ ಗುಣಹೊಂದಿ ನಮ್ಮ ನಾಡಿಗೆ ಇಂತಹ ಅಮೋಘ ಕೃತಿಗಳು ಹಲವನ್ನು ಕೊಟ್ಟು ನಾಡಿನ ಕೀರ್ತಿಯನ್ನು ಎಲ್ಲೆಡೆಯೂ ಹಬ್ಬಿಸಲಿ ಎಂದು ಪ್ರಾರ್ಥಿಸುತ್ತೇವೆ". ಮಂತ್ರಿವರ್ಯರು ಎಲ್ಲರಿಗೂ ಕೇಳಿಸುವಂತೆ, 'ಅಯ್ಯೋ ಪಾಪ' ಎಂದರು. ಬರದಿದ್ದ ಕಣ್ಣೀರನ್ನು ಕರವಸ್ತ್ರದ ತುದಿಯಿಂದ ಒರೆಸಿಕೊಂಡರು. ಆದರೆ, 'ಆತ ಹುಚ್ಚಾಸ್ಪತ್ರೆಯಲ್ಲಿದ್ದು ಆಕೆ ಜಗತ್ತನ್ನೇ ಬಿಟ್ಟುಹೋಗಿದ್ದರೆ, ಚಿತ್ರ ಕಡಿಮೆ ಬೆಲೆಗೇ ದೊರೆತೀತು' ಎಂದು ಅವರ ಮನಸ್ಸು ನುಡಿಯುತ್ತಿತ್ತು.



# ತಿಳಿಯದ ಸಾವು!

(ಶ್ರೀ ಬನ್ನಂಜೆ ರಾಮಾಚಾರ್ಯ, ವಿದ್ವಾನ್, ಉಡುಪಿ.)

೧

ಆದಿನ ಪೇಟೆಯಲ್ಲಿ ಎಲ್ಲ ಜನಗಳ ಬಾಯಿಯಲ್ಲಿಯೂ ಒಂದೆ ಸುದ್ದಿ;- "ಪ್ರೆಸಿಡೆಂಟರ ಕುದುರೆ ಸತ್ತುಹೋಯಿತು!"

ಅಲಂಕೃತವಾದ ಗಾಡಿಯನ್ನೆಳೆದುಕೊಂಡೋ, ಪ್ರೆಸಿಡೆಂಟರ ಮನೆಯ ಯಾವನಾದರೊಬ್ಬ ಭೂಪನನ್ನು ಹೊತ್ತುಕೊಂಡೋ ಬೀದಿಯಲ್ಲಿ ಹೋಗ ಹತ್ತಿದರೆ ಆಗ ನೋಡಬೇಕು ಆ ಕುದುರೆಯ ರೀವಿಯನ್ನು! ನಮ್ಮ ಊರು ದೊಡ್ಡದೇನಲ್ಲ. ಸಣ್ಣ ಎನ್ನಲು ಮನಸ್ಸು ಒಡಂಬಡುವುದಿಲ್ಲ. ಆದರೂ ಮೂವತ್ತು ಮೂವತ್ತೈದು ಕುದುರೆಗಳು ನಮ್ಮ ಜನಗಳ ಬದುಕಿನೊಡನೆ ಬದುಕುತ್ತಿವೆ ನಮ್ಮ ಊರಲ್ಲಿ! ನಮ್ಮ ಮುನಿಸಿಪಾಲಿಟಿಯ ಪ್ರೆಸಿಡೆಂಟರೂ ಈಗ ಆರು ತಿಂಗಳುಗಳಿಂದ ಒಂದು ಕುದುರೆ ಸಾಕಿದ್ದರು. ಅದು ಎಲ್ಲವು ಗಳಂತಲ್ಲ. ಗತಿಯಲ್ಲಿ-ಗಾತ್ರದಲ್ಲಿ-ಎಲ್ಲದರಲ್ಲಿ ಉಳಿದೆಲ್ಲವುಗಳಿಂದ ಹಿರಿಯದು. ಅದಕ್ಕೆಂತಲೆ ನಮ್ಮ ಜನ ಅದನ್ನು ಚೆನ್ನಾಗಿ ನೆನಪಿಟ್ಟುಕೊಂಡಿದ್ದಾರೆ. ಪ್ರೆಸಿಡೆಂಟರ ಗಾಡಿ ಬೀದಿಗಿಳಿಯಿತೆಂದರೆ ಸಾಲೆಯ ಹುಡುಗರದೊಂದು ಜಾಥವೆ ನೆರೆಯುತ್ತೆ. ಇಂಥ ಕುದುರೆ ಒಂದು ದಿನ ತೀರಿಕೊಂಡಿತು. ಅದರ ಸುದ್ದಿ ಊರೆಲ್ಲ ಹಬ್ಬಿತು. ಅದನ್ನು ಕೇಳಿ ಕೆಲವರಿಗೆ ಆಶ್ಚರ್ಯ;— 'ನಾನು ಮನ್ನೆ ನೋಡಿದ್ದೆ. ಏನಾಯಿತಪ್ಪ ಅದಕ್ಕೆ' ಎಂತ. ಕೆಲವರಿಗೆ ವಿಷಾದ;—'ನಮ್ಮೂರಿಗೊಂದು ಭೂಷಣವಾಗಿತ್ತು' ಎಂತ. ಕೆಲವರಿಗೆ ಸಂತೋಷ;—"ಪ್ರೆಸಿಡೆಂಟರು ತಮ್ಮ ದೊಡ್ಡಸ್ತಿಕೆ ತೋರಿಸಲು ಇಟ್ಟುಕೊಂಡಿದ್ದಾರೆ, ಹೋಯಿತೇ, ಹೋದರೆ ಬಹು ಸಂತೋಷ!" ಎಂತ! ಹೀಗೆ ಬೇಕಾಗಿ ಬೇಡಾಗಿ ಕುದುರೆಯ ಸಾವಿನ ಸುದ್ದಿ ಎಲ್ಲ ಜನಗಳ ನಾಲಗೆಯಲ್ಲಿ! ಕೇವಲ ಆರು ತಿಂಗಳ ಹಿಂದೆ ಬಂದಿದ್ದ ಒಂದು ಜಂತುವಿನ ಬದುಕು ಜನಗಳ ಬದುಕಿನೊಡನೆ ಬೆರತುಹೋಗಿ, ಅದು ಸತ್ತಾಗ ಎಲ್ಲವರೂ ಏನಾದರೊಂದು ಸೊಲ್ಲು ನುಡಿದೇ ನುಡಿದರು! ನಿಜಕ್ಕೂ ನಮ್ಮ ಬೈರನಿಗಿಂತ ಪ್ರೆಸಿಡೆಂಟರ ಕುದುರೆ ನೂರು ಪಾಲಿಗೆ ಪುಣ್ಯಶಾಲಿ!

ಬೈರ ಎಂದೆನಲ್ಲವೆ? ಹೌದು; ನಮ್ಮಲ್ಲಿಯ ಪ್ರಜಾಕೋಟಿಯಲ್ಲಿ ಅವನೊಬ್ಬ ರೇಶನ್ ಕಾರ್ಡಿನ ತನಖೆಯಾಗುವಾಗಲೊಮ್ಮೆ—ಮರಣ ರಿಜಿಸ್ಟ್ರಿಯಲ್ಲಿ ದಾಖಲಾಗುವಾಗಲೊಮ್ಮೆ ಹೀಗೆ ಎರಡು ಬಾರೆ ಅವನ ಹೆಸರು ಪುಸ್ತಕ ಕಂಡಿದ್ದರೂ ಇರಬಹುದು! ಉಳಿದ ವೇಳೆ ಆತನ ಹೆಸರು ಯಾರಿಗೂ ಗೊತ್ತಿರಲಿಕ್ಕಿಲ್ಲ. ನಲ್ವತ್ತು ವರ್ಷಗಳಿಂದ ಬಾಳಿದ ಒಂದು ಜೀವದ ಗುರುತು ಅಕ್ಕಪಕ್ಕದ ಜನಗಳಿಗೆ ಆಗಿಲ್ಲವೆಂಬುದು ಒಂದು ದೃಷ್ಟಿಯಿಂದ ಆಶ್ಚರ್ಯವೆ! ಆದರೆ ಆತ ರಾಯರ ಕುದುರೆಯಲ್ಲ; ನಮ್ಮ ಜನ ರಾಯರ ಕುದುರೆಗಳಂಥ ಪಕ್ಕೆ ಮರುಳಾಗುತ್ತಾರೆಯೇ ಹೊರತು ಬೈರನಂಥ ಜೀವಕ್ಕಲ್ಲ! ಬೈರ ಈಗ ಇಲ್ಲ. ಪ್ರೆಸಿಡೆಂಟರ ಕುದುರೆಯೂ ಬೈರನೂ ಒಂದೆ ದಿನ ಜೀವನದ ಕೊನೆಯ ಗಳಿಗೆಯನ್ನು ಮುಗಿಸಿದ್ದು. ಒಂದು ಜೀವಿ ಹೋದುದಕ್ಕೆ ಊರು ತುಂಬ ಗದ್ದಲವೆ ಗದ್ದಲ; ಒಂದು ಜೀವಿ ಹೋದುದು ಯಾರಿಗೂ ಗೊತ್ತೆ ಇಲ್ಲ!

ಬೈರ ಸತ್ತ ಎಂದು ನನಗೂ ಎಲ್ಲರಂತೆಯೆ ತಿಳಿಯುತ್ತಿರಲಿಲ್ಲ. ಆದರೆ ಬೈರನ ನೆರೆಹೊರೆಯಾಕೆಯೊಬ್ಬಳು ನಮ್ಮಲ್ಲಿಗೆ ಕೆಲಸಕ್ಕೆ ಬರುತ್ತಾಳೆ. ಆಕೆ ಒಂದು ದಿನ ಬರಲಿಲ್ಲವಾಗಿ ಆಕೆಯನ್ನು ಅರಸುತ್ತ ನಾನೆ ಹೋಗಬೇಕಾಯಿತು. ಹಾಗೆ ಹೋದಾಗ ಅಕಸ್ಮಾತ್ ಈ ಸುದ್ದಿ ತಿಳಿಯಿತು. ನಮ್ಮ ಮನೆಯ ಕೆಲಸದಾಕೆಯಿಂದ ಅವನ ಜೀವನದ ಕೆಲವು ಘಟನಾವಳಿಗಳೂ ಗೊತ್ತಾದುವು. ಸದ್ದಿಲ್ಲದೆ ಸತ್ತ ಬೈರನಂಥ ಜೀವ ನಮ್ಮ ನಾಡಿನಲ್ಲಿ ಒಂದೆ? ಎರಡೆ? ಕೋಟ್ಯಂತರ ಇರಬಹುದು. ಇಂಥವರ ಸಾವಿನ ಸುದ್ದಿ ತೆಗೆದುಕೊಂಡು ಯಾರು ಯಾವ ಮಂಗಲ ಸಾಧಿಸಿಕೊಳ್ಳಲುಂಟು? ಎಂದು ಇಲ್ಲಿ ಪ್ರಶ್ನೆ ಏಳುವುದು ಸಹಜ! ಆದರೆ ಎಲ್ಲ ಜೀವಗಳೂ ಒಂದೆ ಮಹಾಶಕ್ತಿಯ ಕಿರಣಗಳು—ಭಗವದಾದೇಶದಂತೆ ಏಕೋ ಏನೋ ನಾಲ್ಕುದಿನ ಬಾಳಲು ಬಂದಂಥವು— ಎಂಬ ತತ್ವವನ್ನು ಒಪ್ಪಿಕೊಂಡರೆ ಎಲ್ಲರ ಸಾವಿಗೂ ಒಂದು ಬೆಲೆಯಿದೆ. ಬೈರನ ಬದುಕು ಎಂಥದಾಗಿತ್ತು? ಅವನ ಸುತ್ತ ಮುತ್ತಲ ಜನ, ಕಡೆಗೆ ಪ್ರಕೃತಿ ಕೂಡಾ ಹೇಗೆ ಅವನಿಗೆ ಪ್ರತಿಕೂಲವಾಗಿತ್ತು? ಇಂಥ ಒಂದು ವ್ಯಥಿತ ಜೀವಿ ಸಾವಿನ ತೊಡೆಯಲ್ಲಿ ಪವಡಿಸಿ ತನ್ನ ಎಲ್ಲ ನೋವಿನ ಕೊನೆಯನ್ನು ಕಂಡಿತು ಎನ್ನುವಾಗ ಅವನು ಬದುಕಿದ್ದಾಗ ಬಿಟ್ಟಿದ್ದ ಉಸಿರಿನ ಬಿಸಿ ಮಾನವಕುಲವನ್ನು ಉರಿಸದಿದ್ದೀತೆ? ಈ ಜೀವದ ಬೀಳುಬಾಳಿಗೆ ಆಚೆ ಈಚೆಯ ಜನದ ವೃತ್ತಿಯೇನಾದರೂ ಹೇತುವಾಗಿದ್ದಿರಬಹುದೆ? ಇದಕ್ಕೆ ಮನುಷ್ಯನ ಹೊಣೆಯೇನಾದರೂ ಇದೆಯೆ? ಇವೆಲ್ಲಗಳನ್ನು ಹಿಂಜಿ ನೋಡುವುದಕ್ಕಾಗಿ

ಯಾದರೂ ಬೈರನ ವಿಚಾರವನ್ನು ನಾವು ತಿಳಿಯಬೇಕು; ತಿಳಿದು ಚರ್ಚಿಸ ಬೇಕು.

೨

ಬೈರ ಹದಿನೈದು ವಯಸ್ಸಾಗುವಾಗಲೆ ತನ್ನವರು ಎಂಬುವವರನ್ನೆಲ್ಲ ಕಳಕೊಂಡವನು. ತಂಗಿಯೊಬ್ಬಳು ಅವನವಳಾಗಿ ಉಳಿದಿದ್ದಳು. ಅವನ ತಂದೆಗೇಯುತಿದ್ದ ಆಸ್ತಿಯ ಚೂರನ್ನು ದೂರದ ಮಾವನೊಬ್ಬ ತನ್ನದಾಗಿಸಿ ಕೊಂಡಿದ್ದನು. ಬೈರನನ್ನೂ ಈತನ ಸೋದರಿಯನ್ನೂ ಅವನಿಗೆ ಕಂಡರಾಗುತ್ತಿ ರಲಿಲ್ಲ. ಆದರೆ ಬೈರ ಪೂರಾ ಚುರುಕ. ಅನಾಥ ಮಕ್ಕಳ ಮೇಲೆ ದೈವಕ್ಕೂ ಕೊಂಚ ಕರುಣೆಯೆ? ರೆಂಜೆ ಹೂಗಳನ್ನೊ— ಗೋರಟೆ ಹೂಗಳನ್ನೊ— ಬೆಳ ಗಾಗುತ್ತಲೂ ಸಂಗ್ರಹಿಸಿಟ್ಟು ಮಾಲೆಗೇಯುತ್ತಾನೆ; ಮಾರ ಹೊರಡುತಾನ್ತೆ. ಸಿಕ್ಕಿದರೆ ಸಿಗುತ್ತದೆ ಕಾಸು ಕಾಲಾಣೆ; ದೊಡ್ಡ ಮುಂಡಾಸಿನವರು ಯಾರಾ ದರೂ ಇದ್ದರೆ ಕೂಲಿಯಿದೆಯೆ ಎಂದು ವಿಚಾರಿಸುತ್ತಾನೆ. ಹೀಗೆಲ್ಲಾದರೂ ಒಂದೆರಡಾಣೆ ಗಿಟ್ಟಿಸಿಕೊಳ್ಳುತ್ತಾನೆ. ದಣಿಯರಲ್ಲಿಗೆ ಬಿಟ್ಟಿಗೆ ಹೋಗಿಯೂ ದುಡಿಯುತ್ತಾನೆ. ಒಮ್ಮೊಮ್ಮೆ ಮಧ್ಯಾಹ್ನದ ಗ್ರಾಸ ಅಲ್ಲೆ ದೊರೆಯುತ್ತೆ. ಆದರೆ ಹೀಗೆ ದುಡಿದೂ ಸಂಪಾದಿಸಿದ ಕಾಸು ಕಾಲಾಣೆಗಳು ಆ ಮಾವನಿಗೆ ಸಲ್ಲಬೇಕು. ಇಲ್ಲವಾದರೆ ಮನೆಯಲ್ಲಿ ಉಳಿಯುವಂತಿಲ್ಲ! ತಾಯಿಯ ಲಾಲನೆಯಲ್ಲಿ— ತಂದೆಯ ಪಾಲನೆಯಲ್ಲಿ— ಕೆಳೆಯರ ಕೇಳಿಯಲ್ಲಿ— ಬಂಧು ಗಳ ಗೋಷ್ಠಿಯಲ್ಲಿ ಬೆಳೆಯ ಬೇಕಾದ ವಯಸ್ಸಿನಲ್ಲಿ ಬೈರ ಹೀಗೆ ಬೆಳೆದ!

ಒಂದು ದಿನ ಬೈರ ಹುಣಿಸೆ ಮರದ ಬುಡದಲ್ಲಿ ಕುಳಿತು ದನಗಳನ್ನು ಮೇಯಿಸುತ್ತಿದ್ದನು. ಅವನ ತಂಗಿ ಮಾಚೂ ಬಂದು, ಉಸ್ಸೆಂದು ಕುಳಿತು ಬಿಟ್ಟಳು. ಮುಖ ಕಂದಿತ್ತು; ಕಣ್ಣು ಕೆಂಪಾಗಿತ್ತು. ಇದನ್ನು ಕಂಡು ಬೈರನ ಸೋದರ ಹೃದಯ ಕರಗಿತು.

“ಏಕೆ ಮಾಚೂ ಬಾಡಿದೆ ಮುಖ?” ಎಂದು ಕೇಳಿದ.

“ಜ್ವರ ಬರ್ತದಣ್ಣಾ!” ಎಂದಳು ಆಕೆ ಸೋಲು ದನಿಯಿಂದ. ಬೈರನಿಗೆ ಗಾಬರಿಯಾಯಿತು. ಹಣೆ ಮುಟ್ಟಿ ನೋಡಿದ. ಹೌದು; ಕಾದು ಕೆಂಡ ವಾಗಿದೆ! “ಇಂಥ ಸ್ಥಿತಿಯಲ್ಲಿ ಇಲ್ಲಿಗೇಕೆ ಬಂದೆ ಮಾಚೂ! ಮನೆಗೆ ಹೋಗಿ ಮಲಗಬಾರದೇನವ್ವ?” ಎಂದು ಬೈರ ನುಡಿದನು.

"ನಮಗೆ ಮನೆಯೆಲ್ಲಿದೆಯಣ್ಣ? ನಾನು ಜ್ವರ ಬರ್ತದೆ ಎಂದದ್ದಕ್ಕೇ ಮಾವಯ್ಯ ಚೆನ್ನಾಗಿ ಥಳಿಸಿದರು. ಗುಡ್ಡಕ್ಕೆ ಹೋಗಿ ಸೊಪ್ಪು ತರಬೇಕಂತೆ. ಇಲ್ಲವಾದರೆ ಮನೆಯ ಒಳಗೆ ಕಾಲಿಡಕೂಡದಂತೆ. ಎರಡು ಹೆಜ್ಜೆಯಿಕ್ಕಲೂ ಶಕ್ತಿಯಿಲ್ಲದಾಕೆ ಗುಡ್ಡಕ್ಕೆ ಹೇಗೆ ಹೋದೇನಣ್ಣ ನಾನು? ಅಣ್ಣ! ನಮ್ಮ ತಾಯಿ ಇದ್ದಿದ್ದರೆ ನಾವು ಇಷ್ಟು ಕಷ್ಟಪಡಬೇಕಿತ್ತೆ? ನಾವೆಂಥ ದುರ್ದೈವಿಗಳಣ್ಣ—!" ಎಂದು ಆಕೆ ಕಣ್ಣೀರು ತೆಗೆದಳು.

ತಾಯಿ ಸಂಸಾರದಲ್ಲಿ ಒಂದು ಅಮೃತ ದಾರೆ! ಕಲ್ಯಾಣದಾಯಿಯಾದ ಸಂಪತ್ತಾರೆ! ತಾಯಿಯಿಲ್ಲದ ಈ ಎರಡು ಬಾಲಜೀವಿಗಳೂ ತಾಯಿಯ ನೆನಪಿನಿಂದ ದುಃಖ ಭೀತಿಗಳಿಗೀಡಾಗಿ ಗಲಿಬಿಲಿಗೊಂಡುವು. ತಾಯಿಯಿಲ್ಲದುದಕ್ಕೆ ನೋವು; ಮುಂದಿನ ಬಾಳಿಗಾಗಿ ದಿಗಿಲು! ಮಾಚೂವಿನ ಕಣ್ಣೀರನ್ನು ಕಂಡು ಬೈರನ ಎದೆ ಕೂಡಾ ಕರಗಿತು.

"ಮಗೂ! ನಿನ್ನ ಅಪ್ಪ ಮರ್ಯಾದಸ್ಥ. ಪ್ರಾಣಬಿಟ್ಟಾನು; ಮಾನ ಬಿಡಲಾರ. ಇಂಥ ಹಿರಿಯ ಜೀವ ನಿನ್ನ ತಂದೆ. ನೀನೂ ಅಪನಂಗೆ ಬಾಳಬೇಕು. ಯಾರಿಗೂ ಕೇಡು ಬಗೆಯಬಾರದು; ಯಾರಿಗೂ ಭಾರವಾಗಬಾರದು. ಹೀಗೆ ಬಾಳು ನನ್ನ ಕಂದಾ . . . . . " ತಾಯಿ ಆಗಾಗ ಹೀಗೆ ಹೇಳುತ್ತಿದ್ದುದು ಬೈರನಿಗೆ ನೆನಪಾಯಿತು. "ನಾನು ಶಾಶ್ವತವಲ್ಲ. ಯಾವಾಗೆಂದರೆ ಆವಾಗ ನಿನ್ನ ತಂದೆಯ ಪಾದನೇರೇನು! ಮಾಚೂನ್ನ ಕೈ ಬಿಡಬೇಡ. ಒಂದೆ ದೀಪದ ಎರಡು ಎಳೆಗಳಂತೆ—ಒಂದೇ ದೇಹದ ಎರಡು ಕೈಗಳಂತೆ—ಇರಬೇಕು ಮಗೂ . . . . . " ಎಂದುದನ್ನು ನೆನೆದುಕೊಂಡ. "ನಮಗೆ ಯಾರೂ ದಿಕ್ಕಿಲ್ಲ. ಎಲ್ಲರೂ ನಮ್ಮನ್ನು ಕಂಡು ನಗತಕ್ಕಂಥವರೆ. ಲೋಕಾನೇ ಹೀಗೆ . . . . . ನಾನು ಇನ್ನು ಹೆಚ್ಚು ದಿನ ಉಳಿಯಲಾರೆ ಮಗಾ . . . . . ನನ್ನ ಬೈರಾ ನೀನು ಹೇಗೆ ಇರುವೆ ಮುದ್ದೂ . . . . . " ಎಂದು ತಾಯಿ ಕೊನೆಗಾಲದಲ್ಲಿ ಅತ್ತುದೂ ಸ್ಮೃತಿ ಪಟಲದಲ್ಲಿ ಮೂಡಿತು. ಇದರಿಂದೆಲ್ಲ ಹೃದಯ ತುಂಬ ಕೋಲಾಹಲ. ಮನಸ್ಸು ಭಾರವಾಗಿ ತಾನೂ ಬಹುಹೊತ್ತು ಅತ್ತುಬಿಟ್ಟ. ಆ ಎರಡು ಜೀವಗಳು ಸುರುವಿದ ಅಶ್ರುಧಾರಾಪ್ರವಾಹದಲ್ಲಿ ಆ ತಾಯಿ ಜೀವವಿಂದು ಧನ್ಯವಾಯಿತೇನೋ?

"ಅಣ್ಣ ನಾ ಸತ್ತಾದರೂ ಹೋಗಲಾರೆನೇಕೆ"? ಎಂದು ಮಾಚೂ ಉಸಿರುಗರೆದಳು. "ಹಾಗನಬೇಡ ತಾಯಿ. ನೀನೂ ಹೋದರೆ ನನಗೆ ಹಿತ

ವಂತರು ಯಾರು? ದೇವರು ನಿನಗೆ ನಾಳೇನೇ ಗುಣಮಾಡ್ತಾನೆ ತಂಗಿ—!" ಎಂದು ತಂಗಿಯನ್ನು ಸಂತೈಸಿದ.

ಆದರೆ ಬೈರನ ಬಾಳನ್ನು ಕಾಡಲು ಕಾದುಕುಳಿತ ಕಾಲಕಾತ್ಯಾಯಿನಿ ನಾಲ್ಕಾರು ದಿನಗಳಲ್ಲಿಯೆ ಮಾಚೂವನ್ನು ನುಂಗಿಕೊಂಡಳು! ಬೈರ ತೀರ ಒಬ್ಬಂಟಿಗನಾದ!!.

೩

"ಬೈರ! ನೀನು ಮಂಗಳೂರಿಗೆ ಬರುತ್ತೀಯಾ?"

"ಅಲ್ಲಿ ಬಂದೇನಮಾಡಲಯ್ಯಾ? ಭಿಕ್ಷೆ ಎತ್ತಲೇ?"

"ಹಂಗೇನು ಇಲ್ಲ. ದೊಡ್ಡೂರು. ಎಲ್ಲಾರೂ ಒಂದು ನೌಕರಿ ಕೊಡಿಸ್ತೇನೆ."

"ಚೆಂದಾಗಿ ದಿನ ಹೋದೀತೆ?"

"ನಿಂಗೆ ಯಾಕೆ ಸಂಶಯ. ಸುಮ್ಮಕೆ ಬಂದುಬಿಡು!"

ಒಂದು ದಿನ ಬೆಳಗ್ಗೆ ಒಬ್ಬ ಗೆಳೆಯ ಬೈರನ್ನ ಹೀಗೆ ಬೋಧಿಸಿ ಮಂಗಳೂರಿಗೆ ಕೊಂಡೈದ ಕೊಂಡೊಯಿದನೇನೋ ಸರಿ. ಆದರೆ ಅಲ್ಲೇನು ಬೈರನಿಗೆ ಕೆಲಸ ಕಾದುಕುಳಿತಿದೆಯೆ? ಆ ದೊಡ್ಡ ಊರಲ್ಲಿ ಅವನಿಗೆ ಗಾಳಿ-ನೀರು ಕೂಡಾ ಕೆಲ ದಿನ ದುರ್ಲಭವಾದಂತೆ ಕಂಡಿತು. ಬೈರನಿಗೆ ಅಳುಬಂತು ಏನೇನೋ ಅಭದ್ರ ಆಲೋಚನೆ ಕೂಡಾ ತಲೆಯಲ್ಲಿ ನಲಿದು ಮಾಯವಾಯಿತು. ಆದರೆ ಇಷ್ಟರಲ್ಲಿಯೆ ಆತನಿಗೆ ಒಬ್ಬರು ರಾಯರ ಮನೆಯಲ್ಲಿ ಊಳಿಗದವನಾಗಿ ಉಳಿಯುವ ಚಾಕರಿ ದೊರೆಯಿತು. ಈ ಹೊಸದನಿ ಸೀರೆಗಳ ಚಪಲವುಳ್ಳವ. ಕತ್ತಲಾದರೆ ತೀರಿತು; ಗಲ್ಲಿಗಲ್ಲಿ ಗಸ್ತುತಿರುಗಲು ಆರಂಭ. ಕೆಲವೊಮ್ಮೆ ಬೈರ ಮೈಗಾವಲಾಗಿ ಹೋಗಬೇಕು. ರಾತ್ರೆ ಬೆಳಗಾಗುವುದರೊಳಗೆ ನೂರಾರು ರೂಪಾಯಿಗಳನ್ನು ವ್ಯಯಿಸಬಲ್ಲ ದನಿ ಬೈರನಿಗೆ ಊಟಹೋಗುತ್ತ ಎರಡೆ ರೂಪಾಯಿ ಸಂಬಳ ಸಲಿಸುತ್ತಿದ್ದರು! ಬೈರ ಏನೂ ಅಸಮಾಧಾನಪಟ್ಟುಕೊಳ್ಳದೆ ಈ ಬಾಳನ್ನು ಮೌನವಾಗಿ ಬಾಳಿದ. ಹೀಗೆ ಕೆಲದಿನ ಕಳೆಯಿತು.

ಈ ನಡುವೆ ಒಮ್ಮೆ ಹೀಗಾಯಿತು. ಅವನ ದನಿ ಒಂದು ರಾತ್ರಿ ಪದ್ಧತಿಯಂತೆ ಬೇಟೆಗೆಂದು ಹೊರಟು ಹೋಗಿದ್ದರು. ಆ ದಿನ ಬೈರ ಮನೆಯಲ್ಲಿಯೆ ಉಳಿದಿದ್ದ. ಆಗ ದನಿಯರ ಹೆಂಡತಿ "ಬೈರಾ" ಎಂದು ಕೂಗಿದರು.

'ಓ' ಎಂದು ಬೈರ ಆಕೆಯ ಮುಂದೆ ಹಾಜರಾದ.

"ನೀನು ಈಗಲೆ ಕದ್ರಿಯ ಪಾರ್ವತಿ ಬಾಯಿಯವರ ಮನೆಗೆ ಹೋಗ ಬೇಕು ನೋಡು."

" . . . . . ಆದರೆ ಇಲ್ಲಿ ಯಾರೂ ಇಲ್ಲವಲ್ಲ . . . . . "

"ಅದೇನೂ ಪರವಾಯಿಲ್ಲ. ನೀನು ಈಗ ಹೋಗಲೆ ಬೇಕು. ರಾತ್ರೆ ಅಲ್ಲೆ ಉಳಕೊಳ್ಳು. ಬೆಳಗಿಂಜಾವಕ್ಕೆ ಅವರೊಂದು ಬೆಕ್ಕಿನ ಮರಿ ಕೊಡ್ತಾರೆ. ಅದನ್ನ ಇಸಕೊಂಡು ಬಂದುಬಿಡು".

"ಅಯ್ಯ ತಾಯಿ. ಬೆಕ್ಕಿನ ಮರಿಗಾಗಿ ಈ ರಾತ್ರಿ ಹೋಗಬೇಕೆ? ನಾಳೆ ಬೆಳಗ್ಗೆ ಹೋದರೆ ಸಾಲದೆ?"

"ಬೆಕ್ಕಿನ ಮರಿ ತರೋದನ್ನ ದೂರದವರು (ಚಂಡಾಲರು) ನೋಡ ಬಾರದಂತೆ. ಈ ಇಲಿಗಳ ಕಾಟದಿಂದ ನನ್ನ ಸೀರೆಯೆಲ್ಲಾ ತೂತು. ಪಾರ್ವ ತಮ್ಮ ಒಂದು ಒಳ್ಳೆ ಮರಿ ಕೊಡ್ತೇನೆ ಎಂದಿದ್ದಾರೆ. ನಿನ್ನ ಕಳಿಸಲು ಸಮ ಯಾನೇ ಸಿಕ್ಕಿಲ್ಲ. ನೀನೀಗ್ಲೇ ಹೋಗಿ ನಸುಕಿಗೇ ತಂದುಬಿಡಬೇಕು" ಎಂದು ಆಕೆ ಒತ್ತಾಯಿಸಿದರು.

ಬೈರ ಒಪ್ಪಿಕೊಂಡು ಕದ್ರಿಗೆಂದು ಹೊರಟು ಹಂಪನಕಟ್ಟೆಯ ಹತ್ತಿರ ಬರುತ್ತಿರುವಾಗಲೆ ಪಾರ್ವತಮ್ಮನ ಮನೆಯ ಕೆಲಸದಾತ, ಈತನಿಗೆ ಎದುರಾಗಿ "ಈ ರಾತ್ರೆ ಎಲ್ಲಿಗೆ ಹೋಗುತ್ತಿಯಾ ಬೈರ, ಆಟಕ್ಕೊ?" ಎಂದು ಕೇಳಿದ.

"ಆಟ ನೋಡೋದಕ್ಕೆ ಯಾರಿಗೆ ಪುರಸತ್ತಿದೆಯಯ್ಯ' ನನ್ನದೇ ದೊಡ್ಡ ಆಟ ಆಗಿದೆ. ನಿಮ್ಮ ತಾಯಿ ನಮ್ಮ ತಾಯಿಗೆ ಬೆಕ್ಕಿನ ಮರಿ ಕೊಡ್ತೇನೆ ಅಂದಿದಾರಂತೆ. ಈಗ ಹೋಗಿ ನಸುಕಿಗೆ ತಂದುಬಿಡು ಎಂತ ಅಪ್ಪಣೆಯಾ ಯಿತು. ಕೂಳಿಗೆ ಬಿದ್ದ ಮೇಲೆ ಒಲ್ಲೆ ಎಂದರೆ ಬಿಟ್ಟಾರೆ?" ಎಂದು ಬೈರ ಹೇಳಿದ.

"ಬೆಕ್ಕಿನ ಮರಿ ಕೊಂಡ್ಹೋಗ್ಲಿಕ್ಕೆ ನೀನು ಬರ್ತಿ ಎಂತ ನಾಲ್ಕಾರು ದಿನ ನಿನ್ನ ದಾರಿ ನೋಡಿದ್ರು. ನೀನು ಬರ್ಲೆ ಇಲ್ಲ. ನೆನ್ನೆ ಬೇರೆ ಯಾರಿಗೋ ಕೊಟ್ಬಿಟ್ರು. ಇನ್ನೆಲ್ಲಿಯ ಬೆಕ್ಕಿನ ಮರಿ?" ಎಂದು ಆ ಆಳು ಹೇಳಿದ.

"ಹಾಗಾದರೆ ನಾನು ಹೋಗಬೇಡವೆ?" ಬೈರ ಕೇಳಿದ.

"ನಿನಗೇನು ಹುಚ್ಚೋ—ಕಾಲಶನಿಯೊ? ಸುಮ್ಮಗೆ ಮನೆಗೆ ಹೋಗಿ ಬಿದ್ಕೋ ಮಾರಾಯ—!" ಎಂದು ಆತ ನೇರಾಗಿ ತನ್ನ ದಾರಿ ಸಾಗಿದ.

ಬೈರ ಅಲ್ಲಿಂದ ನೆಟ್ಟಗೆ ತನ್ನ ಬಿಡಾರಕ್ಕೆಯೆ ಹಿಂದಿರುಗಿ ಬಂದು "ಅಮ್ಮ!" ಎಂದ. ನಿಶ್ಶಬ್ದ. 'ಮಲಗಿಯಾಯಿತು' ಎಂದುಕೊಂಡು ತನ್ನ ಜಾಗೆಯಲ್ಲಿ ಹೋಗಿ ಒರಗಿಕೊಂಡ. ಕಣ್ಣಿಗೆ ಇನ್ನೂ ನಿದ್ದೆಹತ್ತಿರಲಿಲ್ಲ. ಮಾಳಿಗೆಯಲ್ಲಿ ಏನೋ ಸದ್ದು ಕೇಳಿಸಿತು. ಎಂತಲೆ ಎದ್ದು ಕುಳಿತನು.

"ನೀವೀದಿನ ಬರದಿದ್ರೆ ನಿಮ್ಮೇಲೆ ನಾನು ಸಿಟ್ಟಾಗುತಿದ್ದೆ!"

"ಮನೆಯಾಕೆಯನ್ನ ಕಣ್ಣು ತಪ್ಪಿಸಿ ಬರಬೇಕಲ್ಲ ಚಿನ್ನ!"

"ಹ! ಹ! ಹ!

"ಹುಂ—ಉಹುಂ—ಹುಂ! ಉಹುಂ!!

ಈ ಬಗೆಯ ನಗೆ ಚೆಲ್ಲಾಟಗಳು ಮಾಳಿಗೆಯಿಂದ ಕೇಳಬರಹತ್ತಿದುವು! ಇನ್ನೂ ಹೀಗೆಯೇ ಏನೋ ಏನೋ!! ಬೈರನ ಎದೆ ಝಲ್ಲೆಂದಿತು. "ನಾನು ಇಂಥಾಕೇ ಮನೆಗೆ ಹೋಗುತ್ತೇನೆ ಎಂಬೋದನ್ನ ನನ್ನ ಮನೆಯಾಕೆಗೆ ತಿಳಿಸ ಬೇಡ ಬೈರಾ" ಎಂದು ತನ್ನ ದನಿ ಮೊದಲೆ ತಾಕೀತ ಮಾಡಿದ್ದರು. ಆ ಅನ್ಯಾಯಕ್ಕೆ ಆತ್ಮ ಹೇಸಿದ್ದರೂ ಸಂಸಾರದಲ್ಲಿ ಒಡಕು ಹುಟ್ಟಿಸಬಾರದು ಎಂಬ ಕಾರಣಕ್ಕಾಗಿ ಬೈರ ಏನೂ ಗೊತ್ತಿಲ್ಲದವನಂತೆಯೆ ಇದ್ದುಬಿಡುತಿದ್ದ! ಆದರೆ ಇಂದು ಎಂಥ ಅವಾಂತರ ನಡೆಯುತ್ತಿದೆ? ದನಿಯರಿಗೆ ಇದನ್ನು ತಿಳಿಸಬೇಕೆ? ಈ ಅಜ್ಞಾನಿ ಹೆಣ್ಣುಜೀವವನ್ನು ಕೊಲ್ಲಲೆ? ಅಥವಾ ಹೇಳದೆ ದನಿಗೆ ಮೋಸ ಮಾಡಲೆ? ಹೇಗೆ ಮಾಡಿದರೆ ಸರಿ?

ಈ ಗಂಡಾಂತರದಲ್ಲಿ ಮಂಗಳೂರಲ್ಲಿ ಇರುವುದಕ್ಕೆಯೆ ಬೈರನಿಗೆ ಸಂಕೋಚವಾಯಿತು. ಒಂದು ದಿನ ಹೇಳದೆ ಕೇಳದೆ ನೇರಾಗಿ ಅಲ್ಲಿಂದ ಮೂಲ್ಕಿಗೆ ಕಾಲುಕಿತ್ತನು!

೪

ಬೈರ ಮೂಲ್ಕಿಗೆ ಬಂದಿದ್ದಾಗ ಅಲ್ಲಿ ಬಪ್ಪನಾಡು ಜಾತ್ರೆಯವೇಳೆ. ಅಲ್ಲಿಯೆ ಸಮಿಾಪದ ಕಿನ್ನಿಗೋಳಿಯಿಂದ ಗುತ್ತೆದಾರ ಚಂದ್ರಯ್ಯನವರು ಜಾತ್ರೆಗೆ ಬಂದಿದ್ದರು. ಜನರ ನೂಕು ನುಗ್ಗಲಿಲ್ಲ ಅವರ ಹಣದ ಚೀಲವನ್ನು ಯಾವನೋ ಕಳವು ಮಾಡಲೆತ್ನಿಸಿದಾಗ ಅದು ಬೈರನ ದೃಷ್ಟಿಗೆ ಬಿದ್ದಿತು. ಒಡನೆ ಆತ ಗೌಡರನ್ನು ಎಚ್ಚರಿಸಿ ಅವರನ್ನು ಆ ಅಪಾಯದಿಂದ ಪಾರುಮಾಡಿದ. ಈ ಪ್ರಸಂಗದಿಂದಾಗಿ ಗೌಡರಿಗೆ ಬೈರನ ಪರಿಚಯ- ಸ್ನೇಹ- ಆರಂಭವಾಯಿತು. ಎರಡು ಮೂರು ದಿನಗಳ ಸಹವಾಸದ ತರುವಾಯ ಈಗಂಟು ಬಿಗಿಯಾಯಿತು!

ಬೈರನ ರೂಪು, ವಿನಯ, ಸರಲವಾದ ನಡತೆ, ಇವನ್ನೆಲ್ಲ ಕಂಡೂ, ಆತನ ದಿಕ್ಕುಗೇಡಿತನವನ್ನು ಕೇಳಿಯೂ ಗೌಡರ ಮನಸ್ಸಿನಲ್ಲಿ ತುಂಬ ಕನಿಕರ ಹುಟ್ಟಿತು.

"ಬೈರ! ನೀನು ನಮ್ಮೂರಿಗೆ ಬಂದು ಬಿಡು. ನನಗೆ ಬೇಕಾದಷ್ಟು ಸಾಗುವಳಿ ಇದೆ. ಅಲ್ಲೆ ನಿನಗೊಂದು ಗುಡಿಸಲು ಕಟ್ಟಿಸಿ ಹಾಕಿ ಗೇಯಲು ನಾಲ್ಕು ಗೆದ್ದೆಗಳನ್ನು ಕೊಡುವೆ. ಯಾವುದಾದರೊಂದು ಹೆಣ್ಣನ್ನೂ ನಿನಗೆ ಲಗ್ನಮಾಡಿಸುವೆ" ಎಂದರು ಗೌಡರು. ಈ ಮಾತಿನಿಂದ ಬೈರನಿಗೆ ತುಂಬ ಸಮಾಧಾನವಾಯಿತು. ಯೌವನದ ಹುಚ್ಚು ಕನಸುಗಳನ್ನು ಕಾಣುತ್ತಿದ್ದ ಆತನ ಜೀವ ಈ ಆಶ್ವಾಸನದ ಮಾತುಕೇಳಿ ಭವಿಷ್ಯದ ಸುಂದರ ಕಲ್ಪನೆಗಳಲ್ಲಿ ನೈ ನೋತಿತು!

ಗೌಡರು ಜಾತ್ರೆಮುಗಿಯುತ್ತಲೂ ಬೈರನನ್ನು ಜತೆಯಾಗಿ ತನ್ನೂರಿಗೆ ಬಂದರು ಕಿನ್ನಿಗೋಳಿಯಲ್ಲಿ ಅವರು ಪ್ರತಿಷ್ಠಿತರು. ಕೈಯಲ್ಲಿ ಕೊಂಚ ಹಣವುಳ್ಳವರು ಕೂಡಾ. ಬೈರನಿಗೆ ಯಾವ ಜನ್ಮದ ನಂಟೋ? ಅಂತೂ ಮಾತುಕೊಟ್ಟಂತೆಯೆ ಅವರಲ್ಲಿಯೆ ಬೆಳೆಯುತ್ತಿದ್ದ ಅನಾಥ ಹೆಣ್ಣುಮಗಳೊಬ್ಬಳನ್ನು ಮದುವೆ ಮಾಡಿಸಿ ತನ್ನ ಜಾಗೆಯಲ್ಲಿಯೆ ಗುಡಿಸಲೊಂದನ್ನು ಕಟ್ಟಿಸಿ ಕೊಟ್ಟರು. ಉಳಲು ನಾಲ್ಕು ಗೆದ್ದೆಗಳನ್ನೂ ಕೊಟ್ಟರು. ಹೀಗೆ ಬೈರ ಸಂಸಾರಿಯಾದ.

ತಂಗಿಯಂಥ ಪ್ರೀತಿಯ ಜೀವದ ಅಗಲುವಿಕೆಯಿಂದ ಖತಿಗೊಂಡಿದ್ದ ಜೀವ ಇಂದು ನೋವು ನಲಿವುಗಳ ಪಾಲುಗಾರ್ತಿಯೊಬ್ಬಳನ್ನು ಪಡೆದು ಧೈರ್ಯಪಟ್ಟಿದೆ! ಚಿರನೂತನವೂ ಸರಸ ಸುಂದರವೂ ಮಂಗಲ ಮಧುರವೂ ಆದ ಅನುಭೂತಿಯಿಂದ ಆತ್ಮ ಆನಂದಪಟ್ಟಿತು! ಇಪ್ಪತ್ತು ವರ್ಷಗಳ ವರೆಗೆ ಒಂಟಿಯಾಗಿದ್ದ ಜೀವಕ್ಕೆ ಸೀತೂ ಇಂದು ಊರುಗೋಲಾಗಿ ದೊರೆತಿದಾಳೆ! ಬೈರ ಈ ಹಿಗ್ಗಿನ ಕ್ಷಣಗಳಲ್ಲಿ ಹಿಂದಿನ ದಿನಗಳ ಸಿಂಹಾವಲೋಕನಮಾಡಿ ನೋಡಿದ. ಅನೇಕ ಕ್ಲೇಶಗಳನ್ನು ಅನುಭವಿಸಿದ ತಾನು ಇಂದು ಇಂಥ ಸ್ಥಿತಿಯಲ್ಲಿರುವುದಕ್ಕೆ ತನ್ನ ತಾಯಿ ತಂದೆಗಳ ಸುಕೃತವೆ ಕಾರಣ ಎಂದು ಭಾವಿಸಿಕೊಂಡು ಚಂದ್ರಯ ಗೌಡರ ಉಪಕಾರವನ್ನು ಸ್ಮರಿಸಿಕೊಂಡ.

ಒಂದು ದಿನ ಸಂಜೆ, ರಾತ್ರೆಯ ಅಡುಗೆಯ ಸನ್ನಾಹಕ್ಕೆಂದು ಸೀತೂ ಕೊಡವನ್ನು ಹಿಡಕೊಂಡು ಕೆರೆಗೆ ಹೊರಡುತ್ತಿದ್ದಳು. ಗೆದ್ದೆಯಲ್ಲಿದ್ದ ಬೈರ ಆಗಲೆ ಬಂದು ಸೀತೂ ಎಂದು ಕರೆದ.

"ನೀರು ತಂದು ಬಿಡ್ತೇನೆ"

"ನೀರು ನಾ ತರ್ತ್ತೇನೆ, ಕೊಂಚ ಬಾ ಈ ಕಡೆಗೆ"

"ನೀವು ಏನೆಲ್ಲ ಮಾಡ್ತೀರೊ—?" ಎಂದು ಬೈರನ ಹತ್ತಿರ ಬಂದು ಕುಳಿತಳು. ಹೆಂಡತಿಯನ್ನು ಹತ್ತಿರ ಕರೆದು ಏನೋ ಚೇಷ್ಟೆಮಾಡಬೇಕೆಂದು ಬೈರನ ಬಯಕೆ. ಆಕೆ ಸದಾ ಜಾಗರೂಕೆ! "ಇಂಥ ವೇಳೆಯಲ್ಲೊ ಹುಡುಗಾಟವೆ? ಇಸ್ಸಿ—" ಎಂದು ಕೊಸರಿ ಕೊಂಡೋಡಿದಳು. "ಸೀತೂ—ನೀ ಬರದಿದ್ದರೆ ನಾ ಇಲ್ಲಿರೋದಿಲ್ಲ, ಈಗ ಹೊರಟೆ. ಕೊಂಚ ಈ ಕಡೆ ಬಾ ಎಂದರೆ" ಎಂದು ಪುನಃ ಕರೆದ, "ಅಯ್ಯ ನನ್ನ ದೊರೆ. ಇದೇನೀ ಆತುರ ಈ ದಿನ?" ಎಂದು ಪುನಃ ಹತ್ತಿರ ಬಂದು ಕುಳಿತಳು. "ನೀವು ಉಡುಪಿಯವರು. ನಾನು ಕಿನ್ನಿಗೋಳಿಯಾಕೆ. ನಮ್ಮನ್ನು ಒಂದು ಗೂಡಿಸಿದವ ಯಾರು?" ಎಂದು ಬೈರನಿಗೆ ಸವಾಲು ಹಾಕಿದಳು.

"ಮತ್ತಾರು? ಚಂದ್ರಯ ಗೌಡರು!" ಎಂದ ಬೈರ.

"ಥೂ! ನಿಮಗೆ ದೇವರ ಗುರುತ್ತಿಲ್ಲ!"

"ನೀನೇ ದೇವರ ಹಂಗಿದೀಯಾ?"

"ನೀವೊಂದ್ರೆ ಶುದ್ಧ . . . . . !"

"ನೀನೊಂದರೆ . . . ."

"ಇಸ್ಸಿ—ಎಂಥ ಕುಶಾಲು!!"

—ಆಕೆ ನೀರು ತರಲೆಂದೋಡಿಬಿಟ್ಟಳು ಕೆರೆಗೆ

ಕಾಲನ ಕಣಿತ ಯಾರ ಬಾಳಿಗೆ ತುಳಿತವಾಗುವುದೆಂದು ಯಾರು ತಿಳಿದಿರುತ್ತಾರೆ? ಸೀತೂವಿಗೆ ನೀರಿನ ಕೆರೆಯು ಮೃತ್ಯುವಿನ ಕರೆಯಾಗಬೇಕೆ? "ಕೈತಪ್ಪಿದ ಕೊಡ ಮುಳುಗುತ್ತಿದೆಯಲ್ಲ—ಅದನ್ನು ಹೊರತೆಗೆಯೋಣ" ಎಂದು ಯತ್ನಿಸಿದ ಸೀತೂ ಕಾಲು ಜಾರಿ ಕೆರೆಗೆ ಬಿದ್ದುಬಿಟ್ಟಳು. ಅಂದು ಮುಳುಗಿದ ಸೂರ್ಯ ಸೀತೂವಿನ ಜೀವವನ್ನು ಮುಕ್ಕಿ ಮುಳುಗಿದ! ಆ ಮುಳುಗಿದ ಸೀತೆಯ ಕಳೇಬರ ಬೈರನ ಭಾಗ್ಯವನ್ನು ಮುಳುಗಿಸಿ ಹೋಯಿತು!

ಕಿನ್ನಿಗೋಳಿಯಲ್ಲಿ ಇನ್ನೇನಿದೆ ಮಣ್ಣು! ಬರಿಗೋಳು. ಚಂದ್ರಯ ಗೌಡರಿಗೂ ಈ ಸಂದರ್ಭದಿಂದ ತುಂಬ ಸಂಕಟವಾಯಿತು. ಅವರೂ ಬಹಳವಾಗಿ ಬೈರನನ್ನು ಸಂತೈಸಿದರು. ಆದರೆ ಆತನ ಮನಸ್ಸಿಗೆ ನೆಮ್ಮದಿಯಿಲ್ಲ. ತಾಯಿನೆಲದ ಆಸೆಯಾಯಿತು. ಎಲ್ಲ ಬಿಟ್ಟು ಉಡುಪಿಗೆಯೆ ಬಂದುಬಿಟ್ಟನು.

೫

ಸಂಸಾರದಲ್ಲಿ ಆಪ್ತರು, ಮಿತ್ರರು, ಬಂಧುಗಳು ಇವರನ್ನೆಲ್ಲ ಕೂಡಿ ಕೊಂಡು ಹಿತವಾಗಿ ಬಾಳಬೇಕಾದರೆ ಪೂರ್ವಸಂಚಿತ ಪುಣ್ಯಬೇಕು. ಎಲ್ಲ ಜೀವಿಗಳಿಗದು ಲಭ್ಯವಿಲ್ಲ. ಬೈರನ ಜೀವ ಬಹು ಸೋತಿದೆ. ಒಂದು ಜೀವ ಎಷ್ಟು ಕಷ್ಟ ಸಹಿಸೀತು? ತಂಗಿಯ ಕುರಿತು ಅನೇಕ ಕಲ್ಪನೆಗಳ ಸೌಧ ಕಟ್ಟಿದ್ದ; ಅದು ಆರಂಭದಲ್ಲಿಯೆ ಕುಸಿದುಬಿತ್ತು. ಮಂಗಳೂರಲ್ಲಿ ಅವನ ಭಾವನೆ ವಿಧವಿಧವಾಗಿ ಬಣ್ಣಗೊಂಡಿತ್ತು. ಆದರೆ ಅದು ಮಾಯಾಬಜಾರ್! ಸೀತಾವಿನಂಥ ಬಾಳಿನ ಮಂದಾರ ದೊರೆತುದರಿಂದ ಒಲಿದು-ನಲಿದು-ಉಬ್ಬಿದ ಅವನ ಜೀವ ಸಪ್ತಸ್ವರಗಳಿಂದ ಹಾಡತೊಡಗಿತ್ತು. ಆದರೆ ಆರಂಭ ದಲ್ಲಿಯೆ ತಂತಿ ಕಡಿದುಹೋಯಿತು. ಇದಕ್ಕೆಲ್ಲ ಎಂಥ ಹೇತುವೊ? ಅಂತೂ ಬೈರನ ಬಾಳು ಬಿರುಗಾಳಿಗೆ ಸಿಕ್ಕಿದೆ—! ಯಾರು ಹೇಗಾದರೇನು ನಾವು ಸುಖಪಟ್ಟರಾಯಿತು—ಎಂಬುದ ಜನರ ತಿಳುವಳಿಕೆ. 'ಸರ್ವೇ ಜನಾಃ ಸುಖಿನೋ ಭವಂತು' ಎಂದು ಹಾರಯಿಸಿದವರ ಸಂತಾನದವರೆ ಇಂದು ಹೀಗೆ ಪರಿವರ್ತಿತರಾಗಿದ್ದಾರೆ! ಇಂಥ ಜನಗಳ ಗುಂಪಿನಲ್ಲಿ ಬೈರ ಯಾರಿಗೆ ಬೇಕಾ ದಾನು? ಆದರೆ ಯಾರಿಗೆ ಬೇಕಾಗಿರಲಿ ಬೇಡಾಗಿರಲಿ ಹೊಟ್ಟೆ ಕೇಳುತ್ತೆಯೆ? ಸಾಯುವಷ್ಟು ದಿನ ಬದುಕಬೇಕು; ಬದುಕಿದಷ್ಟು ದಿನ ಉಣಲೆಬೇಕು. ಉದರನಿರ್ವಹಣೆಗಾಗಿ ಬೈರ ಕೊನೆಗೆ ನಮ್ಮಲ್ಲಿ ಒಬ್ಬ ರಾಯರಲ್ಲಿ ಕೂಲಿಗೆ ನಿಂತನು.

ಮೊದಲೆ ಜ್ಞಾನಜಡ. ಸಂಸ್ಕಾರವಿಲ್ಲ. ಹಿತವರೆನಿಸುವವರೂ ಇಲ್ಲ. ಜೀವಕ್ಕೆ ಸ್ವಲ್ಪವೂ ಸುಖವಿಲ್ಲ ಎಲ್ಲ ಜೀವಿಗಳ ಹಾಗೆ ಏಕೋ ಏನೋ ನಾಲ್ಕು ದಿನ ಬಾಳಲು ಬಂದ ಈ ಸೋದರ ಜೀವ ಆ ರಾಯರ ಮನೆಯಲ್ಲಿ ದುಡಿದ ದುಡಿತವೋ? ಬಾಳಿದ ಬಾಳೋ? ಯಾವುದೋ ಒಂದು ರಾಗದಲ್ಲಿ ಹಾಡಿದರೆ ಕಲ್ಲು ಕರಗುತ್ತದೆಯಂತೆ. ಬೈರನ ಬಾಳಿನ ಹಾಡನ್ನು ಕೇಳಿ ಕಲ್ಲೂ ಖಂಡಿತ ಕರಗೀತು! ನಸುಕಿಗೆಯೆ ಎದ್ದು ಹೂಗಿಡಗಳಿಗೆ ದೂರದ ಕೆರೆಯಿಂದ ನೀರು ತಂದು ಸುರುವಬೇಕು. ಬೆಳಗಾಗುತ್ತಲೂ ದನಗಳನ್ನು ಹಿತ್ತಲ ಕಡೆ ಗೊಯ್ಯಬೇಕು. ಮಧ್ಯಾಹ್ನ ಅವಕ್ಕೆ ಹುಲ್ಲು ತರಬೇಕು. ಪೇಟೆಗೆ ಹೋಗಿ ಕಾಯಿಪಲ್ಲೆ ತರಬೇಕು. ರಾಯರ ಕಾರನ್ನೊರಸಬೇಕು. ಮನೆಯ ಬಟ್ಟೆಗಳ ನ್ನೊಗೆಯಬೇಕು. ರಾಯರು ಅಲ್ಲಿ ಇಲ್ಲಿ ಹೋಗಿ ಬಾ ಎಂದರೆ ಹೋಗಿ ಬರ ಬೇಕು. ಸಂಜೆ ಮಕ್ಕಳನ್ನು ಅಡ್ಡಾಡಿಸಲು ಗಾಂಧಿ ಮೈದಾನಿಗೆ ಒಯ್ಯಬೇಕು.

ರಾತ್ರೆ ಮನೆಗಾವಲಾಗಿ ಮಲಗಬೇಕು. ಚಳಿ—ಸೆಕೆ—ಬಿಸಿಲುಗಳ ಭೀತಿಯಿಲ್ಲದೆ —ಹೊದೆಯಲು ಸರಿಯಾದ ಬಟ್ಟೆಯಿಲ್ಲದೆ—ಹೊಟ್ಟೆತುಂಬ ಅನ್ನವಿಲ್ಲದೆ— ಈ ಜೀವ ಹೀಗೆ ದುಡಿಯಿತು! ಇಷ್ಟಾದರೂ ಒಂದು ಸವಿನಾತಿದೆಯೇ? ಮೂರು ಘಂಟೆಗೆ ಕದನ್ನದ ಕೂಳು! ಅಯ್ಯೋ—ಎಂಥ ಬಾಳು! ಆದರೂ ಬೈರ ವ್ಯಥಿಸಿಲ್ಲ "ತನ್ನನ್ನು ಬಿಟ್ಟುಹೋದವರೆಲ್ಲ ಪುಣ್ಯಾತ್ಮರು. ಅವರ ಹರ ಕೆಯು ಫಲವಾಗಿಯೆ ತನಗಿಷ್ಟಾದರೂ ಸಿಗುತ್ತೆ. ತಾನು ಮಹಾ ಪಾಪಿ. ಅದಕ್ಕೆಯೇ ಇಂಥ ಕಷ್ಟ. ತನ್ನಂಥವರು ಹುಟ್ಟಬಾರದು—" ಇಂಥಕಲ್ಪನೆ ಯಲ್ಲಿ ಸದ್ದಿಲ್ಲದೆ ಬದುಕುತಿದ್ದ.

ಅನೇಕ ವರ್ಷ ಹೀಗೆ ಸವೆದ ಜೀವ ಒಂದು ದಿನ ಸದ್ದಿಲ್ಲದೆಯೆ ಹೋಗಿ ಬಿಟ್ಟಿತು. ಇಂಥ ಜೀವ ನಮ್ಮ ದೇಶದಲ್ಲಿ ಕೋಟಿ ಕೋಟಿ ಇರಬಹುದು! ತಾಯಿ ಭಾರತಿಯ ದೀನ ಕುಮಾರರ ಈ ಬದುಕು ಎಷ್ಟು ದಯನೀಯ ವಾಗಿದೆ. ಇವರೆಲ್ಲ ಜ್ಞಾನವಂತರಾಗಿ ಸಂಸ್ಕಾರವಂತರಾಗಿ ತೃಪ್ತರಾಗಿ ಎಲ್ಲರಿಗೆ ಸಮನಾಗಿ ಬಾಳುವುದೆಂದು? ಪ್ರಕೃತಿಯ ಪೀಡೆಗಳೆಲ್ಲ ದೈವದ ಕೈವಾಡವಾಗಿರ ಬಹುದು. ಆದರೆ ಜ್ಞಾನದಿಂದ ವಂಚಿಸುವುದು, ಸಹಾಯಕೊಡದಿರುವುದು, ಬಳಲಿಸುವುದು, ಅಲಕ್ಷಿಸುವುದು, ಅನಾದರ ಮಾಡುವುದು, ಇವೆಲ್ಲ ಮನುಷ್ಯ ಕೃತ ಅಪರಾಧಗಳಲ್ಲವೆ? ಈ ಉದಾಸೀನ ಈ ಅವಜ್ಞೆ ಶ್ರೇಯಸ್ಕರವೊ? ಇಂಥ ಕೋಟಿ ಕೋಟಿ ಆತ್ಮಗಳು ಕನಲಿನಿಂತರೆ ದೈವದ ಭದ್ರಪೀಠ ಸಹಾ ಕದಲೀತು ಎನುವಾಗ ಸ್ವಾರ್ಥಿ ಮಾನವನ ಗತಿಯೇನಾದೀತು?

ಪ್ರೆಸಿಡೆಂಟರ ಕುದುರೆಯನ್ನು ಕೂಡಾ ತನ್ನ ಬಳಗದಲ್ಲಿ ಸೇರಿಸಿಕೊಂಡು ನೆನೆಯುವ ಜನ ಬೈರನ ಬಾಳನ್ನು ಕೊಂಚ ತಿಳಿದಿರಬೇಡವೆ? ಬೈರನಂಥವರು ಪಟ್ಟ ಕಷ್ಟದಲ್ಲಿ ನಮ್ಮದೇನಾದರೂ ಹೊಣೆಗಾರಿಕೆಯಿದೆಯೆ ಎಂಬುದನ್ನು ಜನ ವಿಚಾರಿಸಬೇಕು. ಕುದುರೆಯ ಸಾವಿನಂಥ ಸಣ್ಣ ವಿಚಾರದಲ್ಲಿ ಕೂಡಾ ತಲೆ ಹಾಕುವ ಜನ ಅವಶ್ಯವಾಗಿ ವಿಚಾರಿಸಬೇಕಾದಂಥ ಈ ಅಂಶವನ್ನು ಹೆಚ್ಚಾಗಿ ವಿಶ್ಲೇಷಿಸಿ ನೋಡಬೇಕು. ಇದಕೆಂತಲೆ ಪ್ರೆಸಿಡೆಂಟರ ಕುದುರೆಯ ಜತೆಗೆ ನ್ಯಾಯವಾದ ಜೀವಿಯೊಬ್ಬನ ಜೀವಿತದ ಕೆಲವು ಪುಟಗಳನ್ನು ಇಲ್ಲಿ ತೋರ ಗೊಟ್ಟಿದೆ. ಇದು ನಮ್ಮ ಜನಗಳ ಗಮನಕ್ಕೆ ಬಂದು ವಿಚಾರಕ್ಕೆ— ವಿಮರ್ಶೆಗೆ ದಾರಿಮಾಡುವುದಾದರೆ, ಬೈರನ ಆತ್ಮಕ್ಕೆ ಶಾಂತಿ ಸಿಕ್ಕೀತು!.



# ಭಂಗಾರಿ

(ಶ್ರೀ ವರದರಾಜ ಹುಯಿಲಗೋಳ, ಎಮ್. ಎ, ಧಾರವಾಡ)

ಸೂರ್ಯನು ಜಗತ್ತನ್ನು ನೋಡುವುದಕ್ಕಾಗಿ ಕಣ್ಣು ತೆರೆದ. ಭಂಗಾರಿಯು ಕಣ್ಣು ತೆರೆದು ಆಗಲೆ ಬಹಳ ಹೊತ್ತಾಗಿದ್ದಿತು. ಬೆಳಗಿನಲ್ಲಿ ತಾಯಿಯು ಎಷ್ಟೋ ಕೆಲಸಗಳನ್ನೂ ತಾನೆ ಮಾಡುವದು ಈಗಲೆ ಅವಳಿಗೆ ಪರಿಪಾಠ ಬಿದ್ದಿದ್ದಿತು. ತಾಯಿ ಪಾರ್ವತೆವ್ವ ಬೆಳಗಿನಲ್ಲಿ ಬೇಗನೆ ಏಳುತ್ತಿರಲಿಲ್ಲ. ಅವಳು ರಾತ್ರಿಯಲ್ಲಿ ಏನೇನೋ ಮಾಡುತ್ತ ಓಡಾಡುತ್ತಿದ್ದಳು. ಅವಳು ಯಾವಾಗ ನಿದ್ದೆಹೋಗಿರುತ್ತಿದ್ದಳೋ ಭಂಗಾರಿಗೆ ಎಚ್ಚರಿಕೆಯೆ ಇರುತ್ತಿರಲಿಲ್ಲ. ಭಂಗಾರಿಯು ಕೆಲಸ ನಸುಕಿನಲ್ಲಿಯೆ ಎಂದಿನಂತೆ ಅಂದೂ ಜೋಳವನ್ನು ಮರದಲ್ಲಿ ಹಾಕಿಕೊಂಡು, ಹತ್ತಿರ ಒಂದು ಸಣ್ಣ ಚಿಮಣಿ ಇಟ್ಟುಕೊಂಡು ಬೀಸುತ್ತಿದ್ದಳು 'ದೇಶಕ ಚೆಲುವಯ್ಯಾ ಬಂದಾನ ಗೊಲ್ಲಯ್ಯಾ ಶಿವಾ' ಎಂಬ ಹಾಡನ್ನು ಒಂದೇ ಸವನೆ ಹಾಡುತ್ತಿದ್ದಳು. ಆ ಹಾಡಿನ ತನ್ಮಯತೆಯಲ್ಲಿ ಬಡತನದಲ್ಲಿಯೇ ಉರಿಯುವ ಚಿಮಣಿಯನ್ನೂ ಆರಿಸಲು ಅವಳಿಗೆ ನೆನಪಾಗಿರಲಿಲ್ಲ.

ಒಮ್ಮೆಲೆ ಯಾರೋ ಹೊರಗಿನಿಂದ ಕೂಗಿದಂತಾಯಿತು. ಗಕ್ಕನೆ ಲಗುಬಗೆಯಿಂದ ಎದ್ದಳು; ಗುಡಿಸಲಿನ ತಟ್ಟಿಯ ಮಹಾದ್ವಾರವನ್ನು ಸಾವಧಾನವಾಗಿ ತೆಗೆದಳು. ಅದು 'ಕಿರ್‍ರ್' ಎಂದು ಅತ್ತಿತು; ಕೂಗಳತೆಯಲ್ಲಿಯೆ ಹೊರಗೆ ನಿಂತ ಇಬ್ಬರು ವ್ಯಕ್ತಿಗಳನ್ನು ನೋಡಿ ಭಂಗಾರಿ ಭಯಂಕರ ಗಾಬರಿಗೊಂಡಳು. ಅಷ್ಟು ನಸುಕಿನಲ್ಲಿ! ಅವರು ಇಲ್ಲಿಗೆ ಬರುವದೆಂದರೆ! ಭಂಗಾರಿ ಒಂದು ಕ್ಷಣ ಸುಮ್ಮನೆ ನಿಂತಳು. ಅರುಣನ ಭಂಗಾರದ ಕಿರಣಗಳು ಭಂಗಾರಿಯ ಮುಖವನ್ನು ತೊಳೆದವು. ಅವಳನ್ನು ನೋಡಿದ 'ಗಿಳಿರಾಮ', ಬಾಗಿಲದ ಹತ್ತಿರದಲ್ಲಿಯೆ ಜೋತುಬಿದ್ದ ಪಂಜರದಲ್ಲಿಯೆ ಕುಳಿತುಕೊಂಡು ಒಂದೇ ಸವನೆ ಕೂಗಿಕೊಂಡ. ಅವನ ಧ್ವನಿಯನ್ನು ಕೇಳಿ ಅಂಗಳದ ಬುಟ್ಟಿಯ ಮನೆಯಲ್ಲಿ ವಾಸವಾದ ಕೋಳಿಗಳು ತಮ್ಮ ಬೆಳಗಿನ ಜಯಭೇರಿ ಮಾಡಿದವು. ಭಂಗಾರಿಯು ಇವುಗಳಿಗೆಲ್ಲಾ ಉಪಚರಿಸಬೇಕಿತ್ತು. ಉಪಚಾರಮಾಡುವ ವೇಳೆಯು ಆಗಲೆ ಮೀರಿಹೋಗಿದ್ದಿತು.

"ಎಲ್ಲಿ ಪಾರ್ವತೆವ್ವಾ?" ಎಂದು ಕೇಳಿದರು ರಾಯರು ಭಂಗಾರಿ ಮಾರುತ್ತರವೇನೂ ಕೊಡದೆ ಒಳಗೆ ಹೋದಳು. ಪಾರ್ವತೆವ್ವ ತನ್ನ ಕಾದಿ

ಯನ್ನು ಹೊತ್ತುಕೊಂಡು ಇನ್ನೂ ನಡುರಾತ್ರಿಯ ಸವಿಗನಸಿನಲ್ಲಿಯೇ ಇದ್ದಳು. ರಾಯರು ಬೇಗನೆ ಹೊಲದಕಡೆ ಬಂದ ಸುದ್ದಿ ಕೇಳಿ ಅವಳೂ ಅಚ್ಚರಿಗೊಂಡಳು.

ರಾಯರು ಸ್ವತಃ ತಮ್ಮ ಹೊಲಗಳಿಗೆ ಹೋಗುವದು ಬಹಳ ಕ್ವಚಿತ್ತಾಗಿತ್ತು. ರಾಶಿಯ ದಿನಗಳಲ್ಲಿಯಾಗಲಿ ಅಥವಾ ಬೇರೆ ಮಹತ್ವದ ದಿನಗಳಲ್ಲಿಯಾಗಲಿ ಅವರು ಹೊಲಕ್ಕೆ ಬರುತ್ತಲಿದ್ದರು. ಉಳಿದ ವೇಳೆ ತಮ್ಮ ಆಳ ಮನುಷ್ಯನಾದ ನಾಗಪ್ಪನಿಂದಲೆ ಎಲ್ಲ ಕೆಲಸವಮಾಡಿಸಿಕೊಳ್ಳುತ್ತಿದ್ದರು. ಆದರೆ ನಾಗಪ್ಪ ಇತ್ತಿತ್ತಲಾಗಿ ಹೊಲಗಳ ಕೆಲಸಗಳಲ್ಲಿ ವಿಶೇಷ ಮನಸ್ಸು ಹಾಕುತ್ತಿರಲಿಲ್ಲ. ಯುದ್ಧದ ಮೂಲಕ ಪೇಟೆಯಲ್ಲಿ ಧಾರಣೆಗಳು ಒಂದೇ ಸಮನೆ ಏರುತ್ತಿದ್ದವು. ರಾಯರು ತಮ್ಮ ಮಗನಾದ ಮೋಹನನ ಶಿಕ್ಷಣದ ಮುಕ್ತಾಯದ ದಾರಿಯನ್ನೇ ನೋಡುತ್ತಿದ್ದರು. ಅವನು ಎಲ್. ಎಲ್ ಬಿ. ಆಗಿ ಬರುವದೊಂದೇ ತಡ, ತಮ್ಮ ಸಂಸಾರದ ನೊಗವನ್ನು ಇಳಿಸಿ, ಅವನ ಕೊರಳಿಗೆ ಕಟ್ಟಬೇಕೆಂದು ಮಾಡಿದ್ದರು. ಅವನಿಗೆ ಎಲ್ಲ ಹೊಲಗಳ ಪರಿಚಯವನ್ನು ಮಾಡಿಕೊಡಬೇಕೆಂದಿದ್ದರು. ಅವರು ಬಯಸಿದ ಕಾಲ ಸಮೀಪ ಬಂದಿತ್ತು. ಮೋಹನ ತನ್ನ ಪರೀಕ್ಷೆ ಮುಗಿಯಿಸಿಕೊಂಡು ಅದೇ ಆಗ ಪುಣೆಯ ನಗರದಿಂದ ಬಂದಿದ್ದ ಅವನ ಮುಖವನ್ನು ನೋಡಿ ರಾಯರಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಅವನಿಗೆ ಏನೇನೊ ಅನೇಕ ಸುದ್ದಿಗಳನ್ನು ಹೇಳಿದರು. ಅವೆಲ್ಲ ಮೋಹನನ ಕರ್ಣ ಪಟಲದ ಮೇಲೆ ಬಿದ್ದವು. ಅಧಿಕಾರ ಮುದ್ರೆಯಿಂದ ತಮ್ಮದೆಂದು ಹೇಳಿಕೊಳ್ಳುವ ಬಯಕೆಯಿಂದಲೆ, ಮಗನನ್ನು ಬೆಳಗಿನಲ್ಲಿ ಕರೆದುಕೊಂಡು ರಾಯರು ಊರಿಂದ ಎರಡೇ ಮೈಲು ದೂರದಲ್ಲಿರುವ ಈ ಹೊಲಕ್ಕೆ ಬಂದಿದ್ದರು.

ಪಾರ್ವತೆವ್ವ ಕೂದಲು ಹರವಿಕೊಂಡು ಹಾಗೆಯೆ ರಾಯರ ಸಂಗಡ ಹೊಲದ ತುಂಬ ಓಡಾಡಿದಳು. ಹೆಜ್ಜೆ ಹೆಜ್ಜೆಗೆ ರಾಯರು ತಮ್ಮ ಮಗನ ಶೌರ್ಯವನ್ನು ಪಾರ್ವತೆವ್ವನ ಮುಂದೆ ಹೊಗಳಿಕೊಳ್ಳುತ್ತ ಸಾಗಿದ್ದರು. ಹೊಲಗಳಲ್ಲಿ ಮೊಳಕೆಗಳು ಅದೇ ಆಗ ಬೆಳಕನ್ನು ಕಂಡಿದ್ದವು; ಹಸುಳೆ ತನದಲ್ಲಿ ಕುಲು ಕುಲು ನಗುತ್ತಿದ್ದವು. ಎಷ್ಟೋ ದಿನ ಪಟ್ಟಣದಲ್ಲಿಯೇ ಬಹಳ ಹೊತ್ತು ಕಳೆದ ಮೋಹನನು ಈ ಸೃಷ್ಟಿ ಸೊಬಗನ್ನು ನೋಡಿ ಹಿಗ್ಗಿದನು. ಅದರಲ್ಲಿಯೊ ಅವನದೇ ಹೊಲ! ಅದೊಂದು ಹೆಮ್ಮೆ! ಪ್ರತಿಯೊಂದು ಕಿರಣವು ಅವನ ಹೊಲದಲ್ಲಿಯ ಹಚ್ಚಹಸುರಿನ ಮೇಲೆ ನರ್ತನ ಮಾಡುವ ಹಾಗೆ

ಅವನಿಗೆ ಭಾಸವಾಯಿತು. ಮೋಹನನು ತನ್ನ ಭಾವಿ ಜೀವನದ ಕನಸನ್ನು ಕಂಡ.

ಅವರು ಗುಡಿಸಲಕ್ಕೆ ತಿರುಗಿ ಬರುವ ಹೊತ್ತಿಗೆ ಭಂಗಾರಿ ಒಂದು ಚರಿಗೆ ಹಾಲನ್ನೂ ಹಿಂಡಿ ತಂದಿದ್ದಳು. ಗುಡಿಸಲಿನ ಮುಂದಿನ ಚಾವೆಯಲ್ಲಿ ರಾಯರು, ಮರಿರಾಯರು ಕುಳಿತುಕೊಳ್ಳುವ ಮುಂದೆ, ಗಿಣಿರಾಮ ಒಂದೇ ಸಮನೆ ಹಾಡಿದ. ರಾಯರು ಯಾವುದನ್ನೂ ಸ್ವೀಕರಿಸಲಿಲ್ಲ. ಹೊಸಕಾಲದ ನವಿಲಾದ ಮೋಹನನು ಮಾತ್ರ ಹಾಲಿನ ರುಚಿಯನ್ನು ತುಸು ಸವಿದನು.

x x x x

ತನ್ನ ಹೊಲವೆಂಬ ಅಭಿಮಾನದಿಂದ ಮೋಹನ ಪೇಲಿಂದ ಮೇಲೆ ಹೊಲಕ್ಕೆ ಬರಲು ಪ್ರಾರಂಭಿಸಿದ. ಊರ ಹೊರಗಿನ ಆ ವಾತಾವರಣ, ಆ ನಿಃಶಬ್ದತೆ, ಆ ನಿಸರ್ಗದೇವತೆಯ ಸ್ವಚ್ಛಂದ ಲೀಲೆ ಇವೆಲ್ಲವೂ ಮೋಹನನ ಕಣ್ಣಿಗೆ ಮಾಯ ಬೀಸಿದವು.

ಒಂದು ದಿನ ಸಂಜೆ ಎಷ್ಟೋ ಹೊತ್ತಿನ ವರೆಗೆ ತನ್ನ ಹೊಲದಲ್ಲಿಯೆ ಕುಳಿತುಕೊಂಡಿದ್ದ. ಒಮ್ಮೆಲೆ ಹಾಡುವ ಒಂದು ಧ್ವನಿಯು ಅವನಿಗೆ ಕೇಳಿಸ ತೊಡಗಿತು.

"ದೇಶಕ ಚೆಲುವಯ್ಯ ಬಂದಾನ ಗೊಲ್ಲಯ್ಯ ಶಿವss" ಹಾಡಿನ ಪಲ್ಲವಿಯ ರಾಗ ಮೋಹಕವಾಗಿದ್ದಿತು; ಹಾಡುವ ಧ್ವನಿಯೂ ಇಂಪಾಗಿದ್ದಿತು. ಹೊಲದಲ್ಲಿಯ ಎಲೆಗಳು ತಾಳಹಾಕಿ, ಆ ಸಂಗೀತದ ಸೊಬಗನ್ನು ಇಮ್ಮಡಿ ಸಿದ್ದವು. ಆ ಹಾಡು ಹಾಗೆಯೆ ಮುಂದೆ ಸಾಗಿತು.

ಅರಸರ ಗೇರಿಗೆ ಹೋದಾನ ಗೊಲ್ಲಯ್ಯ ಶಿವs

ಅರಸರ ಹೆಣಮಗಳು ಮೇಲ ಮಾಳಿಗೆ ಮ್ಯಾಲ ಶಿವs

ಗೊಲ್ಲಯ್ಯನ ಕಂಡಾಳ ತಳಗರೆ ಇಳಿದಾಳ ಶಿವs . . . .

ಮೋಹನನು ಆ ಧ್ವನಿಯ ಹಾದಿಯನ್ನು ಹುಡುಕಿಕೊಂಡು ಹಾಗೆಯೆ ದಾರಿ ಸಾಗಿದ. ಗುಡಿಸಲಿನಿಂದಲೆ ಆ ಧ್ವನಿಯು ಬರುತ್ತಿತ್ತು. ಆ ಧ್ವನಿಯ ಸಂಗಡ ಬೀಸುವ ಸಪ್ಪಳವೂ ಕೇಳಿಸುತ್ತಿತ್ತು. ಆ ಧ್ವನಿಯು ಯಾರದೆಂಬುದನ್ನು ಮೋಹನನು ತಕ್ಷಣವೆ ಊಹಿಸಿದ.

ಗುಡಿಸಲಲ್ಲಿ ಪಾರ್ವತೆವ್ವ ಉರಿಹಚ್ಚಿ ರೊಟ್ಟಿ ಬಡಿಯುತ್ತಿದ್ದಳು. ಒಲೆಯ ಉರಿಯು ಹೊಗೆಯೂ ಗುಡಿಸಲದ ಮೇಲೆ ಹಾದು ಹಾರಿಹೋಗುತ್ತಿದ್ದಿತು. ಹಾರಿಹೋಗುವ ಹೊಗೆ ಮೋಹನನನ್ನು ಎಚ್ಚರಿಸಿತು.

ದಾರಿಯಲ್ಲಿ ಮೋಹನನಿಗೆ ಪಾರ್ವತೆವ್ವ ಭಂಗಾರಿಯವರ ಜೀವನ ನೆನಪಾಗುತ್ತಿದೆ. ಅವರು ಬಡವರಾದರೂ ತಮ್ಮ ಗುಡಿಸಲಲ್ಲಿ ಎಷ್ಟು ಸುಖದಿಂದ ಇದ್ದಾರೆ! ಅವರಿಗೆ ಮುಂದಿನ ಯಾವ ಚಿಂತೆಯೂ ಇಲ್ಲ! ಅವರೆಷ್ಟು ನಲಿಯುತ್ತಿದ್ದಾರೆ! ಒಂದು ಗಿಳಿಯನ್ನು ಸಾಕಿದ್ದಾರೆ; ಬಾಗಿಲದ ಹತ್ತಿರ ಪಂಜರದಲ್ಲಿ ಕುಳಿತು ಎಷ್ಟು ಸೊಗಸಾಗಿ ಕೂಗುತ್ತದೆ! ಅಂಗಳದಲ್ಲಿ ಕೋಳಿಗಳು ಒಂದೇ ಸವನೆ ಓಡಾಡುತ್ತಿರುತ್ತವೆ. ಹಲವು ಹೂವಿನ ಗಿಡಗಳು ಯಾವಾಗಲೂ ಮುಖವರಳಿಸಿ ನಿಂತಿರುತ್ತವೆ ..... ಪಾರ್ವತೆವ್ವ ಇಂತಹ ದುರ್ದಿನಗಳಲ್ಲಿ ತನ್ನ ೩-೪ ಮಕ್ಕಳಿಗೆ, ಮೇಲಾಗಿ ಆ ಪ್ರಾಣಿಗಳಿಗೆ ಎಲ್ಲಿಂದ ಆಹಾರ ಒದಗಿಸಿಕೊಡುವಳೊ? ಎಲ್ಲವೂ ವಿಚಿತ್ರ! ಅವರ ಜಾತಿ ಹೊಲೆಯರದು. ಜಾತಿಯಿಂದ ನಿಜವಾಗಿಯೂ ಕೀಳಾಗಿರುವರೆ? ...... ಭಂಗಾರಿಯ ಹಾಡು ಮೋಹನನಿಗೆ ನೆನಪಾಯಿತು. ಹೊಲೆಯನಾದ ಗೊಲ್ಲಯ್ಯನ ಸೌಂದರ್ಯಕ್ಕೆ ಅರಸನ ಮಗಳು ಮನಸೋತಳಂತೆ! ಅವನ ಬೆನ್ನು ಹತ್ತಿ ಅವಳು ಬಂದಳಂತೆ! ಅವನು ತನ್ನ ಕೈಗೆ ಸಿಗದ ಹಾಗೆ ಆಗಲು ಉರುಳು ಹಾಕಿಕೊಂಡು ಸತ್ತಳಂತೆ! ಎಂಥ ಚಿತ್ರವಿದು? ಮೋಹನನಿಗೆ ಯಾವ ಯಾವುವೊ ಚಲಚ್ಚಿತ್ರಗಳು ನೆನವಾದುವು.

ಇಂಥ ಚಲನ ಚಕ್ರದಲ್ಲಿ ಸಿಲುಕಿ ಮೋಹನ ಹೊರಟಿರುವಾಗ "ನಮಸ್ಕಾರ್ರೀ ರಾಯರ" ಎಂಬ ಧ್ವನಿಯು ಕೇಳಿಸಿತು. ಮೋಹನ ಸರಕ್ಕನೆ ಎಚ್ಚತ್ತನು. ಮೊದಲ ಅವನ ಕಣ್ಣೆದುರಿಗೆ ಕಂಡುದು ದೀಪವೊಂದೆ. ಪೂಲಿನ ಮೇಲೆ ಯಾವನೋ ಒಬ್ಬ ಕುಳಿತಿದ್ದಾನೆ. ಗೊಂಗಡಿ ಹೊತ್ತಿದ್ದಾನೆ. ಕೈಯಲ್ಲಿ ಬಡಿಗೆ ಮುಂತಾದ ಸಾವಾನು ಹಿಡಿದಿದ್ದಾನೆ. ಮೋಹನನಿಗೆ ಅವನು ಯಾರೆಂಬುದು ಗೊತ್ತಾಗದೆ ದಿಟ್ಟಿಸಿ ನೋಡಿದನು.

"ಯಾನ ರಾಯರs ಒಳಖ ಹತ್ತತ್ತಿದಿಲ್ಲs?"

ಅವನು ನಾಗಪ್ಪನೆಂಬುದು ಅವನ ಧ್ವನಿಯಿಂದ ಮೋಹನನಿಗೆ ಗೊತ್ತಾಯಿತು. ಅವನು ಮರಾಠಿ ಕನ್ನಡದ ಗಡಿಯಲ್ಲಿ ಇದ್ದವನಾಗುದರಿಂದ ಮರಾಠಿ ತದ್ಭವವಾದ ಕನ್ನಡ ಮಾತನಾಡುತ್ತಿದ್ದ. ಮೋಹನ ನಾಗಪ್ಪನನ್ನು

ಅಂಥ ಹೊತ್ತಿನಲ್ಲಿ, ಆ ದಾರಿಯಲ್ಲಿ, ಆ ವೇಷದಲ್ಲಿ ಇರುವದನ್ನು ನೋಡಿ ಎಲ್ಲ ಸಮಾಚಾರಗಳ ಬಗ್ಗೆ ಪ್ರಶ್ನೆ ಕೇಳಬೇಕಾಯಿತು.

ನಾಗಪ್ಪ ರಾಯರ ಮನೆಯ ಕೆಲಸ ಬಿಟ್ಟಾಗಿನಿಂದಲೂ, ರೇಲ್ವೆಯಲ್ಲಿ ನೌಕರಿ ಹಿಡಿದಿದ್ದ. ೧೯೪೨ ಅಗಸ್ಟ ಚಳುವಳಿಯಲ್ಲಿ ನಿಲ್ದಾಣ ಮತ್ತು ರೈಲುಗಳು ನಾಶವಾಗುವದನ್ನು ಕಂಡು ಸರಕಾರದವರು ಅವುಗಳನ್ನು ಕಾಯುವ ಕೆಲಸಕ್ಕೆ ಎಷ್ಟೋ ನೌಕರರನ್ನು ನಿಯಮಿಸಿದರು. ಅದೇ ಸಮಯ ದಲ್ಲಿ ನಾಗಪ್ಪನಿಗೂ ಅಲ್ಲಿ ನೌಕರಿ ದೊರೆತುದು. ದಿನಾಲು ರಾತ್ರಿಯಲ್ಲಿ ರೈಲನ್ನು ಕಾಯುವದೆ ಅವನ ಕೆಲಸವಾಗಿತ್ತು. ರಹದಾರಿಯ ಬಳಿಯಲ್ಲಿಯೇ ರೈಲುಮಾರ್ಗವೂ ಹಾದಿತ್ತು. ಅದನ್ನು ಕಾಯುತ್ತಲೇ ನಾಗಪ್ಪ ಅಲ್ಲಿ ಕುಳಿತಿದ್ದ.

ಮೋಹನ ಐದು ನಿಮಿಷ ಮಾತನಾಡಿ ಮುಂದೆ ಹೋಗುವದರೊಳಗೆ "ಯಾನ ರಾಯರs, ಬಾಳ ಉಸೇರ ಆತಿ? ಬಂಗಾರಿ ಪಾರ್ವತೆವ್ವಾ ಪಾಡ ಅದಾರs?" ಎಂದು ಕೇಳಿದ.

ಪೃಥ್ವಿಯನ್ನು ಕತ್ತಲೆಯು ಮುಸುಕು ಹಾಕಿತ್ತು! ಮೋಹನ ಲಗು ಬಗೆಯಿಂದ ಊರು ಮುಟ್ಟಿದ!

ಆ ದಿನ ರಾತ್ರಿ ಮಲಗಿಕೊಳ್ಳುವ ಮುಂದೆ ರಾಯರು ಸಹಜವಾಗಿ ಮೋಹನನ್ನು ಕೇಳಿದರು. "ಯಾಕೊ ಮೋಹನ, ರಾತ್ರಿ ಮನೆಗೆ ಬೇಗ ಬರುವದಿಲ್ಲ? ಎಲ್ಲೆಲ್ಲಿ ತಿರುಗುವಿ?"

"ಪರೀಕ್ಷೆಯ ಫಲಿತಾಂಶ ತಿಳಿಯುವವರಿಗೆ ಹೀಗೆ ಅಪ್ಪಾ--"

"ಫಲಿತಾಂಶ ಒಂದೇ ಅಷ್ಟೆ?"

ಇಬ್ಬರೂ ನಕ್ಕು ಬಿಟ್ಟರು!

x x x x

ಮೋಹನ ಭಂಗಾರಿಯ ಸಂಗಡವಾಗಲಿ, ಪಾರ್ವತಿಯ ಸಂಗಡವಾಗಲಿ ಎಂದೂ ಹೆಚ್ಚಿಗೆ ಮಾತನಾಡಿದವನಲ್ಲ. ಅವರ ಜೀವನವನ್ನು ತಿಳಿದುಕೊಳ್ಳ ಬೇಕೆಂಬ ಆಸ್ಥೆ ಮಾತ್ರ ಇದ್ದವನು.

ಒಂದು ದಿನ ಭಂಗಾರಿ ಬೆಳಗಿನಲ್ಲಿ ಮನೆಯ ಕಡೆಗೆ ಬಂದಿದ್ದಳು. ಅವಳು ಸಣ್ಣ ಮುಖ ಮಾಡಿದ್ದಳು. ರಾಯರು ಪೇಟೆಯಲ್ಲಿ ಯಾವುದೋ

ಕೆಲಸಕ್ಕಾಗಿ ಹೋಗಿದ್ದರು. ತಾಯಿ ಒಳಗೆಲಸಗಳಲ್ಲಿ ಮಗ್ನಳಾಗಿದ್ದಳು. ಮೋಹನ ಭಂಗಾರಿಯನ್ನು ನೋಡಿ "ಏನು ಕೆಲಸ?" ಎಂದು ಕೇಳಿದ.

ಭಂಗಾರಿ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಐದು ನಿಮಿಷ ಮಾತನಾಡಲೇ ಇಲ್ಲ. "ನನ್ನ ಹೆಂಗಾರ ಪಾರಮಾಡ್ರಿ," ಎಂದು ಆ ಮೇಲೆ ಮೆಲ್ಲಗಿನ ಧನಿ ಯಲ್ಲಿ ಹೇಳಿದಳು.

ಭಂಗಾರಿಯ ಅಳುವಿನ ಅರ್ಥ ಮೋಹನನಿಗೆ ಬೇಗ ಹೊಳೆಯಲಿಲ್ಲ. ಬಹಳ ಕಳವಳ ಬಟ್ಟು ಭಂಗಾರಿ ತನ್ನ ಮಾತುಗಳನ್ನು ಹೇಳಬೇಕಾಯಿತು.

ನಾಗಪ್ಪನ ಕೆಲಸ ರಾತ್ರಿಯಲ್ಲಿ ಬರಿ ರೈಲು ಕಾಯುವದಿಷ್ಟೆ ಆಗಿರಲಿಲ್ಲ. ಗುಡಿಸಲನ್ನು ಬಲತ್ಕಾರದಿಂದ ಒಳಹೊಕ್ಕು, ತನ್ನ ದೈಹಿಕ ಸುಖಕ್ಕಾಗಿ ಸುಂದರ ಮಂದಿರ ಕಟ್ಟುವ ಕೆಲಸವೂ ಆಗಿತ್ತು.

ಅವನ ವಾಸನೆಗೆ ಭಂಗಾರಿ ಆಹುತಿ! ಅದಕ್ಕೆ ಪೋಷಕಳು ಪಾರ್ವತಿ!! ಇವೆಂಥ ಭಯಂಕರ ಚಿತ್ರ! ಮೋಹನ ನಡುಗಿದ. ಮೈ ಜುಮ್ಮೆಂದಿತು. ಭಂಗಾರಿ ಇನ್ನೂ ಚಿಕ್ಕವಳು.

ಅವಳನ್ನು ಪಾರುಮಾಡುವದು ಹೇಗೆ? ಒಮ್ಮೆ ಪಾರ್ವತಿಗೆ ಈ ಮಾತನ್ನು ನೇರವಾಗಿ ಹೇಳದೆ ಪರ್ಯಾಯದಿಂದ ಹಲವು ಉಪದೇಶಪರ ಮಾತು ಹೇಳಿದ. "ಹೌದ್ರಿ ರಾಯರs, ಎಲ್ಲಾ ಗೊತ್ತೈತಿ" ಎಂದು ಅರ್ಥವಿಲ್ಲದ ಮಾತುಗಳನ್ನು ಹೇಳಿಬಿಟ್ಟಳು.

ಪಾರ್ವತಿಯ ಜೀವನವು ಹೀಗೆಯೆ ಹೋಗಿದೆ. ಅವಳ ಚೆಲುವನ್ನು ನೋಡಿ, ಯಾವನೋ ಒಬ್ಬ ಕಾಮಣ್ಣ ಮದುವೆಯಾದ. ತನ್ನ ಗಂಡ ಮನೆ ಯಲ್ಲಿರುವಾಗಲೆ, ಅವಳು ಮತ್ತೊಬ್ಬನ ಸಂಗಡ ಸಹವಾಸ ಬೆಳಸಿದಳು. ಆಮೇಲೆ ಅವಳ ಗಂಡ ಓಡಿಹೋದ. ಹೀಗೆ ಅವಳು, ಸಣ್ಣ ಹುಡುಗರು ಮನೆಮಾಡಿ ಆಡುವಂತೆ, ಎಷ್ಟೋ ಗಂಡಸರ ಸಂಗಡ ಬಾಳುವೆ ಮಾಡಿದ್ದಾಳೆ. ಬಾಳುವೆ ಮಾಡಿ ಬದುಕಿದ್ದಾಳೆ. ಅಂಥ ಸಂಸಾರದ ಸಡಗರವನ್ನೆ ಅವಳು ಇಚ್ಛಿಸುತ್ತಾಳೆ. ಸದ್ಯದ ಅವಳ ಗಂಡ, ದಿನಗೂಲಿ ಮಾಡಿ ಹೊಟ್ಟೆತುಂಬಿ ಕೊಳ್ಳುವ. ಹೆಂಡ ಕುಡಿದು ಒಮ್ಮೊಮ್ಮೆ ಮನೆಗೆ ಬಂದರೆ ಬರುವನು; ಇಲ್ಲ ವಾದರೆ ಇಲ್ಲವೆ ಇಲ್ಲ ಮನೆಯಲ್ಲಿ ಪಾರ್ವತಿಯದೇ ಸೌಭಾಗ್ಯ. ನಾಗಪ್ಪ ಬೇಡಿದಷ್ಟು ಹಣ ಕೊಟ್ಟಿದ್ದಾನೆ; ಇನ್ನೂ ಕೊಡಲು ವಚನ ಕೊಟ್ಟಿದ್ದಾನೆ. ಸರಕಾರೀ ನೌಕರಿ. ಪಗಾರದಷ್ಟೆ ಮೇಲೆ ತುಟ್ಟಿಭತ್ತೆ. ನಾಗಪ್ಪನು ಏಕೆ

ಖರ್ಚುಮಾಡಬಾರದು? ಅಂದಮೇಲೆ ಪಾರ್ವತಿಯು ಭಂಗಾರಿಯಂಥ ಬಂಗಾರವನ್ನು ಏಕೆ ಕೊಡಬಾರದು! . . . . . ಆದರೆ ಭಂಗಾರಿ ಚಿಕ್ಕವಳೆಂಬ ವಿಚಾರ ಅವಳ ತಲೆಯಲ್ಲಿ ಬರಲೇ ಇಲ್ಲ.

ಭಂಗಾರಿ ತನಗುಂಟಾದ ತಾಪದಿಂದ ಹಾರಾಗಲು ಹವಣಿಸುತ್ತಿದ್ದಳು. ಒಂದು ದಿನ ಅಕಸ್ಮಾತ್ತಾಗಿ ಅವನ ಅಣ್ಣ ಮುಂಬೈಯಿಂದ ಅಲ್ಲಿಗೆ ಬಂದನು. ಅವನು ಕೈಯಲ್ಲಿ ಗಡಿಯಾರ ಕಟ್ಟಿದ್ದನು. ಕಾಲಲ್ಲಿ ಬೂಟು ಹಾಕಿದ್ದನು. ಮೈಮೇಲೆ ಇಸ್ತ್ರೀ ಬಟ್ಟೆಗಳನ್ನು ತೊಟ್ಟಿದ್ದನು. ಮೈಬಣ್ಣ ಮಾತ್ರ ಕಪ್ಪು ಇತ್ತು. ಕಪ್ಪಿದ್ದರೂ ಏನಾಯಿತು, ಅವನ ಉತ್ಸಾಹ ಕಡಿಮೆ ಇರಲಿಲ್ಲ. ಒಂದೇ ಸವನೆ ಕುಲುಕುಲು ನಗುತ್ತಿದ್ದನು. ಅವನ ಪಾದದಧೂಳಿ ಗುಡಿಸಲಲ್ಲಿ ಬಿದ್ದ ಕೂಡಲೆ ಪಾರ್ವತಿಯ ಸಂಸಾರವೆಲ್ಲವೂ ಕುಣಿಯಿತು. ಹುಡುಗರು ಅವನ ಸುತ್ತು ಮುತ್ತು ಮುಕರಿದರು. ಅವನು ಎಲ್ಲರನ್ನೂ ಮೈದಡವಿ ಮಾತನಾಡಿಸಿದ. ತನ್ನ ಸಾಮಾನುಗಳನ್ನು ಬಿಚ್ಚಿ ಅವರಿಗೆ ಏನೇನೋ ತಿನ್ನಲು ಕೊಟ್ಟ. ಎಲ್ಲರೂ ಅಣ್ಣನನ್ನು ಹೊಗಳುವವರೇ ಹೊಗಳುವವರು. ಭಂಗಾರಿಗೆ ಎರಡು ಹೊಸ ಪತ್ತಲಗಳನ್ನು ತೆಗೆದುಕೊಟ್ಟ. ಅವನ್ನು ಉಟ್ಟು ಅವಳು ಹೊಸ ಸಂಭ್ರಮದಿಂದ ಓಡಾಡಿದಳು.

ಆ ದಿನ ಹುಣ್ಣಿಮೆಯ ಬೆಳುದಿಂಗಳು. ಭಂಗಾರಿಯು ಮುಂಬೈಗೆ ಹೋಗುವ ಸುದ್ದಿ ನಿಶ್ಚಯವಾಗಿತ್ತು. ಅವಳ ಅಣ್ಣನು ಮುಂಬೈಯ ಸಮಾಚಾರವನ್ನು ದಿನಬೆಳಗೂ ವಿಸ್ತರಿಸಿ ಹೇಳಿದ್ದನು. ಅವನ್ನು ಕೇಳುತ್ತ, ಅವಳ ಹೃದಯದಲ್ಲಿ ಸಂತೋಷ ನಲಿದಾಡುತ್ತಿತ್ತು. ಮುಂಬೈ!! ಅವಳಿಗೆ ತಾಯಿಯ ವಿಚಿತ್ರ ನೆರಳಿನಲ್ಲಿರದೆ, ಸ್ವತಂತ್ರವಾಗಿ ಇರಬೇಕೆಂದು ಅವಳ ಇಚ್ಛೆ ಇಂದು ಫಲಿಸಿದಂತಾಗಿತ್ತು. ತಾಯಿ ಭಂಗಾರಿಯನ್ನು ಮುಂಬೈಗೆ ಕಳಿಸಬೇಕೆಂದು ಎಷ್ಟೋ ದಿನಗಳಿಂದ ಹಾತೊರೆಯುತ್ತಿದ್ದಳು. ಎಲ್ಲವೂ ಇಂದು ಕೈಗೂಡಿದಂತಾಗಿದ್ದಿತು. ತಾಯಿಯ ದೃಷ್ಟಿಯಲ್ಲಿ ಕಾಂಚಾಣ! ಭಂಗಾರಿಯ ದೃಷ್ಟಿಯಲ್ಲಿ ಹೊಸ ಊರು!

"ಹರಕೆಗೆಂದು ತಂದ ಕುರಿ ತಳಿರ ತೋರಣ ಮೇಯಿತ್ತು" ಎಂಬುದು ಭಂಗಾರಿಗೆ ಹೇಗೆ ತಿಳಿಯಬೇಕು! ಅವಳ ಅಣ್ಣನದು ಮುಂಬೈಯಲ್ಲಿ ದೊಡ್ಡ ಸಂಸಾರವಾಗಿತ್ತು. ಅವನು ಅನೇಕ ಕೀಳು ತರಗತಿಯ ಮಹಿಳೆಯರನ್ನು ಕೂಡಿಸಿ 'ವನಿತಾವಿಹಾರ'ವನ್ನು ಸ್ಥಾಪಿಸಿದ್ದನು. ಆ ಬೆಲೆವೆಣ್ಣುಗಳಿಂದ ಇವನು

ದೊಡ್ಡ ಶ್ರೀಮಂತನಾಗಿದ್ದನು. ಆ ಬೆಲೆವೆಣ್ಣುಗಳ ಗುಂಪಿನಲ್ಲಿಯೆ ಭಂಗಾರಿಯನ್ನು ಸೇರಿಸಲು ಪಾರ್ವತಿ ಇಂದು ತನ್ನ ಮಗನಿಗೆ ಹೇಳಿದ್ದಳು.

ಹುಣ್ಣಿಮೆಯ ಬೆಳುದಿಂಗಳಿನಲ್ಲಿ ಭಂಗಾರಿ ಹೊಸ ಪತ್ತಲಗಳನ್ನು ಉಟ್ಟುಕೊಂಡು ಓಡಾಡುತ್ತಿದ್ದಾಳೆ. ಅವಳ ಅಣ್ಣ ಪೇಟ್ಟಿ ತೆಗೆದು ಬಾರಿಸುತ್ತ 'ಜಮುನಾ ಜಳಿ ......' ಹಾಡುತ್ತಿದ್ದಾನೆ. ಭಂಗಾರಿಗೆ ತನ್ನ ಸಂತೋಷ ಹೇಗೆ ವ್ಯಕ್ತಮಾಡಬೇಕೆಂಬುದೇ ತಿಳಿಯಲೊಲ್ಲದು. ಬೆಳುದಿಂಗಳಲ್ಲಿ ನಿಂತ ಆ ಗುಡಿಸಲು, ಸ್ವರ್ಗದಲ್ಲಿಯ ಇಂದ್ರಭವನವಾದಂತಾಗಿತ್ತು.

X X X X

ಹಲವು ತಿಂಗಳು ಕಳೆದು ಹೋದವು. ಭೂದೇವಿಯ ಮುಖ ಬಾಡಿ ಹೋಯಿತು. ಯಾವ ಬೆಳೆಗಳೂ ಬರಲಿಲ್ಲ. ಜನರು ಕಂಗಾಲಾಗಿ ಗುಳೇ ಕಟ್ಟಿಕೊಂಡು ಹೋಗಹತ್ತಿದರು. ಪಾರ್ವತಿಗೂ ಅದೇ ಚಿಂತೆ ಹತ್ತಿತು. ಎಲ್ಲಿ ನೋಡಿದರೂ ಒಣ ಬಯಲು ಕಾಣುತ್ತಿತ್ತು! ಮುಂಬೈಯಿಂದ ರೂಪಾಯಿಗಳು ತಪ್ಪದೆ ಮುಂಗಡವಾಗಿಯೇ ಬರುತ್ತಿದ್ದವು ಆದರೆ ಆ ರೂಪಾಯಿ ಕೊಟ್ಟರೂ ಕಾಳುಕಡಿ ಸಿಗುವ ಹಾಗೆ ಇರಲಿಲ್ಲ. ತನ್ನ ಮಗುಗಳು ಅತ್ತರೆ, ಅವರ ಕೈಯಲ್ಲಿ ನಾಣ್ಯಗಳನ್ನೆ ಕೊಡುತ್ತಿದ್ದಳು.

ಹೀಗಿರುವಾಗ ಒಂದು ದಿನ ಭಂಗಾರಿ ಮುಂಬೈಯಿಂದ ತಿರುಗಿ ಬಂದು ಬಿಟ್ಟಳು. ಅವಳ ಮೈಮೇಲಿನ ಬಟ್ಟೆಗಳು ಬದಲಾಗಿದ್ದವು. ಮುಖದ ಮೇಲೆ ಕಾಂತಿ ಇರಲಿಲ್ಲ. ಸಾಮಾನು ಒಗೆದವಳೆ ಒಂದೇ ಸವನೆ ನರಳಲು ಪ್ರಾರಂಭಿಸಿದಳು. ಅಣ್ಣನು ಅವಳು ಮುಂಬೈಯಲ್ಲಿ ಪೂರೈಸುವದಿಲ್ಲವೆಂದು ಹೇಳಿಕಳಿಸಿದ್ದ. ಇನ್ನು ಮುಂಬೈಯಿಂದ ಬರುವ ಭಂಗಾರ ನಿಂತಂತಾಯಿತೆಂದು ಪಾರ್ವತಿ ಮರುಗಿದಳು.

ಭಂಗಾರಿಯ ಮೈಯಲ್ಲಿ ಉರಿ. ಸಮೀಪವಿದ್ದ ಊರಿನಿಂದ ಏನೋ ಔಷಧ ತಂದು ಪಾರ್ವತಿ ಕೊಟ್ಟಳು. ಮೋಹನ ಅವಳ ಸ್ಥಿತಿ ನೋಡಿ ಕಳವಳಪಟ್ಟ. ಆದರೆ ಒಳಗಿನ ಕಾರಣ ತಿಳಿದು ಅಸಹ್ಯವೇದನೆಯನ್ನು ತಾಳಿದ. ಅವಳ ಮೈಮೇಲೆ ವಿಚಿತ್ರ ಗುಳ್ಳೆ ಏಳತೊಡಗಿದವು.

ತನ್ನ ದುಡ್ಡು ಮುಳುಗಿಸಿದಳೆಂಬ ಖೇದ ನಾಗಪ್ಪನಿಗೆ ಮೊದಲಿನಿಂದಲೂ ಇತ್ತು. ಭಂಗಾರಿ ಊರಿಂದ ಬಂದ ಸುದ್ದಿ ಕೇಳಿ, ಒಂದು ಸಂಜೆ ತನ್ನ ಕೆಲಸಬಿಟ್ಟು, ನೇರವಾಗಿ ಗುಡಿಸಲಿಗೇ ಹೋದ. ಭಂಗಾರಿ ಮತ್ತು ಹುಡುಗರು

ಮನೆಯಲ್ಲಿ ಇದ್ದರು. ಪಾರ್ವತಿ ಊರಲ್ಲಿ ಹೋದವಳು ಇನ್ನೂ ಬಂದಿರಲಿಲ್ಲ. ಭಂಗಾರಿ ಒಲೆಯ ಹತ್ತಿರ ಕುಳಿತಿದ್ದಳು. ಅವಳ ಎದುರಿಗೇ ಒಂದು ಚಿಮಣಿ ಉರಿಯುತ್ತಿತ್ತು. ಭಂಗಾರಿ ಯಾವ ಸ್ಥಿತಿಯಲ್ಲಿ ಇರುವಳೆಂಬುದನ್ನು ತಿಳಿಯದೆ, ನಾಗಪ್ಪ ಅವಳ ಮೇಲೇರಿ ಹೋದ.

ಅವನನ್ನು ನೋಡಿ ಭಂಗಾರಿ ಚಿಟ್ಟನೆ ಚೀರಿದಳು. ಹುಡುಗರು ಒದರಿದರು. ನಾಗಪ್ಪ ಯಾವುದನ್ನೂ ಲೆಕ್ಕಿಸಲಿಲ್ಲ. ಅವಳ ಮೈಮುಟ್ಟಲು ಧಾವಿಸಿದ. ಮುಂಬೈಯಲ್ಲಿ ಅನುಭವ ಹೊಂದಿದ ಅವಳಿಗೆ ಇಂಥ ಸನ್ನಿವೇಶ ಗಳೆಲ್ಲಾ ತುಚ್ಛವಾಗಿದ್ದವು. ಅವಳಿಗೆ ಬಹಳ ಅಸಹ್ಯವೆನಿಸಿತು. ಒಮ್ಮೆಲೆ ಒಂದು ಕೊಳ್ಳಿಯನ್ನು ಹಿಡಿದು, ಅವನ ಮೈಮೇಲೆ ಎಸೆದಳು. ನಾಗಪ್ಪ ತಪ್ಪಿಸಿಕೊಂಡ. ಕೊಳ್ಳಿ ಒಣಗುಡಿಸಲಿಗೆ ಉರಿ ಹಚ್ಚಿತು.

ನಾಗಪ್ಪ ಗಾಬರಿಯಾಗಿ ಹುಡುಗರನ್ನು ಹೊರಗೆಳೆದು ತಂದ ಭಂಗಾರಿಗೆ ಎಷ್ಟು ಜುಲುಮೆಮಾಡಿದರೂ, ಅವಳು ಹೊರಗೆ ಬರಲೇ ಇಲ್ಲ. ಬೇಸಗೆಯ ರಾತ್ರಿ. ಅಗ್ನಿ ಬೇಗನೆ ಪ್ರಜ್ವಲಿತನಾದನು. ಭಂಗಾರಿ ಆ ಉರಿಯಲ್ಲಿಯೇ ಹಾಡಿದಳು, ಕುಣಿದಳು, ನಕ್ಕಳು.

x x x x

ಮೋಹನ ಅಗ್ನಿ ಶಾಂತವಾದ ಮೇಲೆ ಅಲ್ಲಿ ದಾವಿಸಿ ಬಂದ. ಪಾರ್ವತಿ ಒಂದೇ ಸವನೆ ಅಳುತಿದ್ದಳು. ಹುಡುಗರ ಅವಸ್ಥೆಯಂತೂ ನೋಡುವ ಹಾಗಿರಲಿಲ್ಲ. ಬೂದಿಯನ್ನು ಕೆದರಿದಾಗ ಭಂಗಾರಿ . . . . . ! ಪಂಜರ ಮುರಿದಿತ್ತು. ಗಿಣಿಯು ಗೋಣು ಚೆಲ್ಲಿ ಹೊರಗೆ ಬಿದ್ದಿತ್ತು!

ಮೋಹನ ಇದನ್ನೆಲ್ಲ ನೋಡಿದನು. ಎಲ್ಲವನ್ನೂ ತಿಳಿದುಕೊಂಡನು. ಗುಡಿಸಲಲ್ಲಿ ಇರುವ ಜೀವನ ಎಷ್ಟು ಸುಖವಾದದ್ದು ಎಂದು ಬಯಸಿದ್ದ! ಈಗ? ಅವನ ಕಣ್ಣುಗಳಿಂದ ಹನಿಗಳು ಉದುರಿದವು. ಪೃಥ್ವಿ ಮರುಭೂಮಿ ಯಾಗಿತ್ತು. ಯಾವುದರದೂ ಪರಿವೆ ಇರಲಿಲ್ಲ. ಆ ಮರುಭೂಮಿ ಇವನ ಕಂಬನಿಗಳನ್ನು ಒಮ್ಮೆಲೆ ನುಂಗಿಬಿಟ್ಟಿತು. ಮೇಲೆ ನಕ್ಷತ್ರ ಎಂದಿನಂತೆ ನಗುತ್ತಲೆ ಇದ್ದುವು.



# ದೈವೇಚ್ಛೆ

(ಶ್ರೀಮತಿ ಆರ್ ಕಲ್ಯಾಣಮ್ಮ, ಸಂಪಾದಕಿ "ಸರಸ್ವತಿ" ಬೆಂಗಳೂರು)

ಪಾಪ! ಅರಘಳಿಗೆ ಕೂಡ ಕಣ್ಣು ಮುಚ್ಚಲಿಲ್ಲ ಶ್ರೀಧರ—ರೋಗಗ್ರಸ್ತನಾಗಿ ಜೀವ ಮರಣಗಳ ಮಧ್ಯೆ ತೂಗಾಡುತಿದ್ದ ತನ್ನ ಮುದ್ದು ಮಗ ಹರಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡು "ಈ ರಾತ್ರಿ ಒಳ್ಳೇ ರಾತ್ರಿಯಾಗಿ ಕಳೆಯಬೇಕಲ್ಲ . . . ಜ್ವರದ ವೇಗವೇನೋ ಬಹಳವಾಗಿದೆ. ನಾಳೆ ಬೆಳಿಗ್ಗೆ ನನ್ನ ಪತ್ನಿ ಕಮಲೆಯು ಊರಿನಿಂದ ಬರುವವರೆಗಾದರೂ ಬದುಕಿರುವನೋ ಇಲ್ಲವೋ—ಕಾಣೆನಲ್ಲ—ಈಶ್ವರಾ!" ಎಂದು ಕಣ್ಣೀರು ಸುರಿಸುತ್ತಾ ಹಂಬಲಿಸುತಿದ್ದನು. ಪಕ್ಕದಲ್ಲೇ ಕೂತಿದ್ದ ಅವನ ತಾಯಿ ವೆಂಕಮ್ಮ "ಮೊದಲೇ ನನಗೆ ಗೊತ್ತಿತ್ತಪ್ಪಾ—ಶ್ರೀಧರಾ! ತಾಯನ್ನಗಲಿದ ಮಗುವೆಷ್ಟು ದಿನ ತಾನೇ ಬದುಕೀತು! ನಾನಾಗಲೇ ಹೇಳಿದೆನಲ್ಲ, ಕೇಳಿದೆಯಾ ನನ್ನ ಮಾತನ್ನು, ಹರಸಾಧಿಸಿದೆ, ನಾಳೆ ಬೆಳಿಗ್ಗೆ ಅವರಮ್ಮ ಬರುವವರೆಗಾದರೂ ಈ ಮಗೂನ ಜೀವ ಸಹಿತ ಕಾಪಾಡಿದರೆ ಒಳ್ಳೇದು" ಎಂದದ್ದು ಅವನೆದೆಯಲ್ಲಿ ಈಟಿಯಿಂದ ತಿವಿಯುವ ಹಾಗಿದ್ದಿತು. ಅವನ ಮನೋದೃಷ್ಟಿಯು ಮುಂದೆ ಹಿಂದೆ ನಡೆದ ವಿಷಯಗಳೆಲ್ಲಾ ಒಂದೊಂದಾಗಿ ತೋರಿ ಮರೆಯಾದವು.

ಶ್ರೀಧರನಿಗೆ ಮದುವೆಯಾದ ನಾಲ್ಕನೆಯ ದಿನವೇ ಅವನ ಮಾವನಾದ ಸೀತಾಪತಿರಾಯರು ಅವನನ್ನು ಕರೆದು ಗುಟ್ಟಾಗಿ, "ನೀನು ಕೆಲಸ ಬಿಟ್ಟು ನಮ್ಮೂರಿಗೆ ಬಂದು ಬಿಡು. ಸುಖವಾಗಿರಬಹುದು ನಮ್ಮ ಮನೆಯಲ್ಲಿ" ಅಂದರು. ಅವರೊಬ್ಬ ನಿವೃತ್ತ ಜಿಲ್ಲಾಧಿಕಾರಿಗಳು. ತಾವು ಶ್ರೀಮಂತರೆಂಬ ಗರ್ವದಿಂದಲೇ ಅವರು ಹಾಗಂದದ್ದು. ಆದರೆ ಶ್ರೀಧರನಿಗೆ ಆ ಸಲಹೆಯು ಸ್ವಲ್ಪವೂ ಒಪ್ಪಿತವಾಗಲಿಲ್ಲ. ಶಿವಮೊಗ್ಗೆಯಲ್ಲಿ ತಾಲ್ಲೋಕು ಕಚೇರಿಯಲ್ಲಿ ಅವನಿಗೆ ಮುವ್ವತ್ತೇ ರೂಪಾಯಿ ಸಂಬಳವಾದರೂ ಕೂಡ ಅದನ್ನು ಬಿಟ್ಟು ಮಾವನ ಮನೆಯೇ ಗತಿಯೆಂದು ಮೈಸೂರಿಗೆ ಹೋಗಲು ಅವನಿಗಿಷ್ಟವಿಲ್ಲ. ತಾನೊಬ್ಬನೇ ಇದ್ದರೆ ಏನೋ ಅನ್ನಬಹುದು. ವೃದ್ಧರಾದ ತಾಯಿ ತಂದೆಯರನ್ನು ರಕ್ಷಿಸಬೇಕಾದ ಹೊರೆ ಇವನದಾಗಿರುವಾಗ ಅವನು ಸಮ್ಮತಿಸುವುದು ಹೇಗೆ? ಆದ್ದರಿಂದ ಅವನು ಒಪ್ಪಲಿಲ್ಲ.

ಇದರಿಂದ ಬೇಸರಗೊಂಡ ಮಾವನಿಗೆ ಸಿಟ್ಟು ಬಂದದ್ದೇನೂ ಆಶ್ಚರ್ಯ ವಿಲ್ಲ. ಆ ಸಿಟ್ಟಿನಿಂದವರು ಬಹಳ ದಿನಗಳು ಮಗಳನ್ನು ಗಂಡನ ಮನೆಗೆ ಕಳುಹಿಸದೆ ತನ್ನೊಡನೆಯೇ ಇಟ್ಟುಕೊಂಡಿದ್ದರು. ಆದರೆ ಕಮಲೆಯಾ ದರೋ ಗಂಡನ ಧ್ಯಾನದಲ್ಲೇ ಮಗ್ನಳಾಗಿ ಕೃಶವಾಗುತ್ತಿರುವುದನ್ನು ಕಂಡು, "ಗಂಡನ ಮನೆಗೆ ಹೋಗಿ ಕಷ್ಟಪಟ್ಟರೆ ಆಗ ತನ್ನಷ್ಟಕ್ಕೆ ತಾನೇ ಇಲ್ಲಿ ಓಡಿ ಬರುತ್ತಾಳೆ" ಎಂದುಕೊಂಡು ಅವಳನ್ನು ಶಿವಮೊಗ್ಗೆಗೆ ಕಳುಹಿಸಿದನು.

ಶಿವಮೊಗ್ಗೆಗೆ ಬಂದ ಕಮಲೆಯು ಅತ್ತೆ ಮಾವ ಗಂಡ ಇವರಿಚ್ಛಾನುಸಾರ ನಡೆದು ಅವರ ಪ್ರೀತಿ ವಿಶ್ವಾಸವನ್ನೂ ಗೌರವವನ್ನೂ ಪಡೆದಳು. ಅವಳು ಗಂಡನ ಮನೆಗೆ ಬಂದ ಮೇಲೆ ಮೈಸೂರಿನಲ್ಲಿ ಬಂದಿರುವಂತೆ ತಂದೆ ಅವಳಿ ಗೆಷ್ಟೋ ಕಾಗದ ಬರೆದನು. ಗಂಡನನ್ನು ಬಿಟ್ಟಿರಲು ಕಮಲೆಯ ಮನವೊಪ್ಪ ಲಿಲ್ಲ. ಮಾವನೆನಿಸಿಕೊಂಡವನೊಬ್ಬನು ತನಗಿರುವನೆಂಬುದನ್ನೇ ಶ್ರೀಧರನು ಮರೆತು ಬಿಟ್ಟನು. ಹೀಗೆ ಏಳು ವರ್ಷಗಳು ಕಳೆದು ಹೋದವು. ಕಮಲೆಗೆ ಸುಬ್ಬು, ಶಾಮು, ಮಾಲತಿಯೆಂಬ ಮೂವರು ಮಕ್ಕಳಾದರು. ಕೊನೇ ಮಗು ವಾದ ಮಾಲತಿ ಹುಟ್ಟಿದ ನಂತರ ಸೀತಾಪತಿರಾಯರು ಮಗಳಿಗೆ ಈ ರೀತಿಯಾದ ಕಾಗದವೊಂದನ್ನು ಬರೆದರು. ಅದರಲ್ಲಿನ ಪ್ರತಿಯೊಂದಕ್ಷರವೂ ಕಾರಸಾರ ವಾಗಿದ್ದಿತು. "ಈ ಕಾಗದವನ್ನು ಕಂಡ ಕೂಡಲೇ ಮಕ್ಕಳನ್ನೆಲ್ಲಾ ಕರೆದು ಕೊಂಡು ಹೊರಟು ಬಾ. ಇಲ್ಲಿದ್ದುಕೊಂಡು ಸುಖವಾಗಿ ನೀನಿರಬೇಕೆಂಬ ಉದ್ದೇಶದಿಂದಲೇ ಈ ಕಾಗದವನ್ನು ಬರೆದಿದ್ದೇನೆ. ರೈಲು ಚಾರ್ಜಿಗೆಂದು ಇಪ್ಪತ್ತು ರೂಪಾಯಿಗಳನ್ನು ಕಳುಹಿಸಿದ್ದೇನೆ. ಅಂದಿನ ಟಪಾಲಿನಲ್ಲಿಯೇ ಕಮಲೆಯು, "ಈಗ ಬರುವುದು ಸಾಧ್ಯವಿಲ್ಲ" ಎಂದು ಕಾಗದ ಬರೆದಳು. ಮಗಳ ಕಾಗದವನ್ನು ನೋಡಿದ ರಾಯರ ಸಿಟ್ಟು ಮಿತಿಮೀರಿತು. ಶ್ರೀಧರನ ಉದ್ಯೋಗವಿದೆಯಲ್ಲಾ ಅದು ದಿವಾನ್‌ಗಿರೀಂತಕಾಣುತ್ತೆ. ಕಮಲುವಿಗೇ ಇಲ್ಲಿ ಬಂದಿರಲು ಇಷ್ಟವಿಲ್ಲಾಂತಕಾಣುತ್ತೆ, ಗಂಡನಿಗೆ ಹೆದರಿಯೇ ಅವಳೀರೀತಿ ಬರೆ ದಿರಬೇಕು. ಪಾಪ! ಮೂರು ಮಕ್ಕಳನ್ನಿಟ್ಟುಕೊಂಡು ಮೂವತ್ತು ರೂಪಾಯಿ ಸಂಬಳದಲ್ಲಿ ಹೇಗೆ ತಾನೇ ಜೀವನ ನಡೆಸುತ್ತಾರೆಯೋ ಕಾಣೆ. ಸಾಲದ್ದಕ್ಕೆ ಎರಡು ಮುದಿ ಗೃಧ್ರಗಳು ಬೇರೇ. "ನಾಳೆಯೇ ಹೋಗಿ ಏನಾದರೂ ಮಾಡಿ ಅವಳನ್ನು ಕರೆತಂದು ಮುಂದಿನ ಕೆಲಸ," ಎನ್ನುತ್ತಾ ಕಾರಿನಲ್ಲಿಯೇ ಮೈಸೂರಿಂದ ಶಿವಮೊಗ್ಗೆಗೆ ಹೊರಟರು.

ಶ್ರೀಧರನ ಮನೆಮುಂದೆ ಬಂದವರು ಮನೆಯೊಳಕ್ಕೆ ಹೋಗದೆ ಬೀದಿ

ಯಲ್ಲೇ ನಿಂತುಕೊಂಡು, "ಕಮಲು" ಎಂದು ಕರೆದರು. ಕಮಲು ಆಗ ತಾನೇ ಕೊನೇ ಮಗುವಾದ ಮಾಲತಿಗೆ ಹಾಲು ಕುಡಿಸುತ್ತಿದ್ದಳು. ತಂದೆಯು ಧ್ವನಿಯನ್ನು ಕೇಳಿದವಳೇ ಮಗುವನ್ನೆತ್ತಿಕೊಂಡು ಬೀದಿಗೆ ಬಂದಳು. ರೌದ್ರಾವತಾರ ತಾಳಿದ್ದ ರಾಯರು, "ಕಮಲೂ—ಅದೋ ಕಾರು ನಿಂತಿದೆ, ಹತ್ತು ಅವರಲ್ಲಿ. ಹುಂ, ಜಾಗ್ರತೆ" ಎಂದರು. ಕಮಲೆಗೆ ಏನುಮಾಡಬೇಕೆಂಬುದೇ ತಿಳಿಯಲಿಲ್ಲ. ಪಾಪ! ತಂದೆಯ ಕೋಪಕ್ಕೆ ಹೆದರುವುದೇ?—ಗಂಡನ ಕೋಪಕ್ಕೆ ಹೆದರುವುದೇ?—ಇಂತಹ ಧರ್ಮಸಂಕಟವಾದ ಸ್ಥಿತಿಯಿಂದ ತಪ್ಪಿಸಿಕೊಳ್ಳಲು ಮಾರ್ಗ ಕಾಣದೆ ಭ್ರಮಿಸಿ ಸ್ವಲ್ಪ ಹೊತ್ತು ಹಾಗೆಯೇ ನಿಂತಿದ್ದು, ನಂತರ ಚೇತರಿಸಿಕೊಂಡವಳಾಗಿ, "ಅವರನ್ನು ಕೇಳದೆಯೇ" ಎಂದು ಧೈರ್ಯವಾಗಿ ಕೇಳಿಬಿಟ್ಟು, ಮೆಲ್ಲಗೆ ಒಳಗೆಹೋಗಲಾರಂಭಿಸಿದಳು. ಅಷ್ಟರಲ್ಲೇ ಸೀತಾಪತಿರಾಯರು ಅವಳ ಕೈಗಳನ್ನು ಬಲವಾಗಿ ಹಿಡಿದುಕೊಂಡು, ದರದರ ಎಳೆದುಕೊಂಡುಹೋಗಿ, ಬೀದೀಲಿ ನಿಂತಿದ್ದ ಕಾರಿನಲ್ಲಿ ತಳ್ಳಿ, ತಾವೂ ಹತ್ತಿ ಕುಳಿತರು.

ಶ್ರೀಧರನು ಆಗತಾನೇ ಮಾರ್ಕೆಟ್ಟಿನಿಂದ ಹಿಂತಿರುಗಿ ಬರುತಿದ್ದವನು ಬಾಗಿಲಲ್ಲಿ ಮೋಟಾರು ನಿಂತಿರುವುದನ್ನು ಕಂಡು ಬೇಗಬೇಗ ಬಂದನು. ಮೋಟಾರಿನಲ್ಲಿ ಮಾವ ಸೀತಾಪತಿರಾಯರೂ ಕಮಲೆಯೂ ಕುಳಿತಿದ್ದರು. ಇದನ್ನು ಕಂಡ ಅವನ ಕೋಪವು ಮಿತಿಮೀರಿ ದೇಹವೆಲ್ಲಾ ಉರಿಯಲಾರಂಭಿಸಿತು. "ಕಮಲೂ! ಇಷ್ಟು ಧೈರ್ಯಬಂತೇ ನಿನಗೆ—ಇರಲಿ ಚೆನ್ನಾಯಿತು. ನಾನು ಮನೆಯಲ್ಲಿಲ್ಲದ ಸಮಯದಲ್ಲಿ ಕಳ್ಳತನದಿಂದ ತಂದೆಯೊಡನೆ ಹೋಗಬೇಕಾದರೆ ನಿನ್ನ ಧೈರ್ಯವೆಷ್ಟಿರಬೇಕು? ನಾನರಿಯದಂತೆ ನಿಮ್ಮಪ್ಪನಿಗೆ ಕಾಗದ ಬರೆದು ಕರೆಸಿದೆಯೇನೋ—ಅಲ್ಲವೆ? ಸರಿ—ಇನ್ನು ನಿಮ್ಮಪ್ಪನ ಮನೆಲೇ ಸುಖವಾಗಿರು"—ಎಂದು ಹಲ್ಲುಗಳನ್ನು ಕಡಿಯುತ್ತ ಕೋಪಾವೇಶದಿಂದ ಆಡಿದನು. ಇದನ್ನು ಕೇಳಿದ ಸೀತಾಪತಿರಾಯರು, "ನಾಲಗೆಯನ್ನು ಬಿಗಿಹಿಡಿದು ಮಾತಾಡು. ಮಹಾಶ್ರೀಮಂತನಂತೆ ಹೆಂಡತಿಯನ್ನು ಗದರಿಸಲು ಬಂದೆಯಲ್ಲವೇ—ನೀನು ಸಾಮಾನ್ಯ ಗುಮಾಸ್ತ. ಮೂವತ್ತು ರೂಪಾಯಿ ಸಂಪಾದನೆ ಮಾಡುವ ಗುಮಾಸ್ತ—ಕಮಲುವನ್ನು ನನ್ನ ಮನೆಯಲ್ಲೇ ಇಟ್ಟುಕೊಳ್ಳಲು ನನ್ನಿಂದಾಗದೆಂದೆಣಿಸಿದ್ದೀಯಾ? ನಿನ್ನಂತೆ ನಾನು ದಟ್ಟದರಿದ್ರನೇನು? ಇವಳ ಮೈಮೇಲಿನ ಒಡವೆಯನ್ನು ಕೂಡ ಮಾರಿಕೊಂಡು ತಿಂದಿದೀಯಲ್ಲ" ಎಂದು ಕೋಪದಿಂದ ಕೇಳಿದರು. ಈ ಮಾತುಗಳು ಶ್ರೀಧರನ

ಮನದಲ್ಲಿ ಶಲ್ಯದಂತೆ ನೆಟ್ಟವು. ಕುಟುಂಬನಿರ್ವಾಹಮಾಡಲು ಬರುವ ವರಮಾನ ಸಾಲದೆ ಕಮಲೆಯ ಒಡವೆಗಳಲ್ಲಿ ಕೆಲವನ್ನು ಮಾರಿದ್ದನು. ಆದ್ದರಿಂದ ಮಾವನಾಡಿದ ಮಾತುಗಳು ಅವನ ಮನಸ್ಸಿನಲ್ಲಿ ಸಿಟ್ಟಿನಲೆಗಳನ್ನೇ ಎಬ್ಬಿಸಿತು. ಅವನ ಸಿಟ್ಟೆಲ್ಲಾ ಕಮಲೆಯ ಮೇಲೆಯೇ ಇದ್ದದ್ದರಿಂದ ಅವಳ ಕಡೆ ತಿರುಗಿ, "ಕಮಲು ಎಲ್ಲ ವಿಷಯಗಳನ್ನೂ ನಿಮ್ಮಪ್ಪನಿಗೆ ಪಾರ ಒಪ್ಪಿಸಿದೆ ಯೇನೋ ಅಲ್ಲವೇ! ನಿನ್ನ ಒಡವೆಯೇ ನಿನಗೆ ಹೆಚ್ಚಾಯಿತಲ್ಲವೇ?—ಇರಲಿ" ಎನ್ನುತ್ತಿರುವಾಗ ಅವಳ ಸೊಂಟದಲ್ಲಿದ್ದ ಮಗುವಿನ ಕಡೆ ಅವನ ದೃಷ್ಟಿ ಹೋಯಿತು. ಮಗುವನ್ನು ಎಳೆದುಕೊಂಡು, "ನನ್ನ ಮಗುವನ್ನು ಎಲ್ಲಿಗೆ ಕರೆದುಕೊಂಡು ಹೋಗುವೆ. ನೀನು ಬೇಕಾದರೆ ಎಲ್ಲಾದರೂ ತೊಲಗು" ಎನ್ನುತ್ತಾ ಮಗುವಿನೊಡನೆ ಮನೆಯೊಳಗೆ ಹೊರಟುಹೋದನು. ಇದನ್ನು ಕಂಡ ಕಮಲು, "ಅಯ್ಯೋ! ಅಪ್ಪಾ! ನಿಮ್ಮೊಡನೆ ನಾನು ಬರೊಲ್ಲಾಪ್ಪಾ—" ಎಂದು ಪ್ರಲಾಪಿಸುತ್ತಾ ಕಾರಿನಿಂದಿಳಿಯಲುದ್ಯುಕ್ತಳಾದಳು. ಅಷ್ಟರಲ್ಲಿ ಸೀತಾ ಪತಿರಾಯರು ಡ್ರೈವರನನ್ನು ನೋಡಿ, "ಖರೀಂ! ಬಿಡು ಬೇಗ ಕಾರನ್ನು —" ಎನಲು ಕಾರು ಮುಂದಕ್ಕೆ ಹೊರಟೇ ಹೋಯಿತು ವೇಗವಾಗಿ—ಕಾರು ಹೊರಟುಹೋದ ಸ್ವಲ್ಪ ಹೊತ್ತಿಗೆಲ್ಲಾ ತಾನು ನಡೆದುಕೊಂಡದ್ದು ಸರಿಯಲ್ಲ ವೆಂಬುದು ಶ್ರೀಧರನಿಗೆ ತಿಳಿಯಿತು. ಕಮಲುವಿನ ವಿಷಯದಲ್ಲಿ ತಾನು ಹೊಂದಿದ್ದ ಅಭಿಪ್ರಾಯವು ತಪ್ಪೆಂಬುದನ್ನರಿತನು. ಅವನ ತಾಯಿ ಆಗ ಅಲ್ಲಿ ಬಂದು, "ಪಾಪ! ಕಮಲು ಏನೂ ಅರಿಯದವಳು. ಯಾರೋ ಕರೆದಂತಾ ಯಿತೆಂದು ಬೀದಿಗೆ ಬಂದವಳನ್ನು ಆ ಬ್ರಾಹ್ಮಣ ದರದರನೆ ಎಳೆದುಕೊಂಡು ಹೋಗಿ ಕಾರಿನೊಳಗೆ ತಳ್ಳಿದ. ಅದಕ್ಕೆ, ಪಾಪ ಅವಳೇನು ಮಾಡಿಯಾಳು— ಅವಳ ಮೇಲೆ ಸಿಟ್ಟಾದರೆ! ವಿಷಯ ತಿಳಿಯದೆ ಮಗುವನ್ನು ಕಿತ್ತುಕೊಂಡು ಬಂದೆಯಲ್ಲ . . . . ಪಾಪ! ಆ ಹುಡುಗಿಯ ಮನಸ್ಸು ಎಷ್ಟು ನೊಂದಿತೋ? ಮಗುವನ್ನೂ ತಾಯನ್ನೂ ಅಗಲಿಸುವುದು ಮಹಾಪಾಪವಲ್ಲವೇನೋ—ಮಗು" ಎಂದು ತಾಯಿ ಪ್ರೀತಿಮಾತುಗಳಿಂದ ಹೇಳುವಾಗ ಇವನ ಕಣ್ಣುಗಳಲ್ಲಿ ನೀರು ತುಂಬಿತು.

X X X X

ಮೇಲಿನ ಸಂಭವವು ನಡೆದ ನಂತರ ಶ್ರೀಧರನು ಕಮಲೆಗೆಷ್ಟೋ ಕಾಗದ ಗಳನ್ನು ಬರೆದನು. ಆದರೆ ಕಾಗದಗಳೊಂದೂ ಅವಳ ಕೈಗೆ ಸಿಕ್ಕದ ಹಾಗೆ ತಂದೆಯು ಅಲ್ಲಿಂದಲೇ ಹಿಂತಿರುಗಿಸಿ ಬಿಡುತ್ತಿದ್ದರು. ಒಂದು ವರ್ಷ ಕಳೆ ಯಿತು. ಈ ಮಧ್ಯೆ—ಒಂದು ದಿನ ಇದ್ದಕ್ಕಿದ್ದ ಹಾಗೆ ಶಾಮುವಿಗೆ ಜ್ವರ

ಬಂದು ಹತ್ತು ದಿನಗಳು ಕಳೆದಾಗ್ಯೂ ಕಡಮೆಯಾಗದೆ ಇರಲು ಡಾಕ್ಟರು ಪರೀಕ್ಷೆಮಾಡಿ ನೋಡಿ, 'ಮಗುವಿನ ತಾಯಿಯನ್ನು ಬೇಗ ಕರೆಸಿ ಸಾರ್, ಇಲ್ಲದಿದ್ದರೆ ಮಗು ಉಳಿಯುವುದು ಕಷ್ಟ' ಎಂದು ಎಚ್ಚರಿಸಿ ಹೋದರು.

ಕಮಲೆಗೆ ಸುಮ್ಮನೆ ಬರೆಯುವುದರಿಂದ ಪ್ರಯೋಜನವಿಲ್ಲವೆಂದು ಶ್ರೀಧರನು ಚಿಂತಿಸುತಿದ್ದಾಗ ಅವನ ತಾಯಿಗೊಂದು ಯೋಚನೆ ಹೊಳೆಯಿತು. ಪಕ್ಕದ ಮನೆ ಸೀತಮ್ಮನವರು ರಾತ್ರಿ ರೈಲಿನಲ್ಲಿ ಮೈಸೂರಿಗೆ ಹೋಗುತ್ತಾರಂತೆ. ಅವರ ಕೈಲೊಂದು ಕಾಗದ ಬರೆದು ಕಳುಹಿಸಿದರೆ ಆಕೆ ಕಮಲುವನ್ನೇ ಕಂಡು ಕಾಗದವನ್ನು ಕೊಟ್ಟು ವಿಷಯವನ್ನು ತಿಳಿಸುವಳು ಎನಲು, ಸರಿಯಾದ ಸಲಹೆಯೆಂದು ಶ್ರೀಧರನಿಗೆ ಕಂಡುಬಂದದ್ದರಿಂದ ಕೂಡಲೇ ಕಮಲುವಿಗೊಂದು ಕಾಗದ ಬರೆದು ಸೀತಮ್ಮನವರ ಕೈಲಿ ಕೊಟ್ಟು ಕಳುಹಿಸಿದನು. ಎರಡು ಮೂರು ದಿನಗಳು ಕಳೆದ ನಂತರ ಶ್ರೀಧರನಿಗೆ ಕಮಲೆಯಿಂದೊಂದು ಕಾಗದ ಬಂತು. "ನೀವು ನನ್ನನ್ನು ನಿರಾಕರಿಸಿದ್ದೀರೆಂದೆನಿಸಿ ಕೊರಗುತಿದ್ದ ನನಗೆ ನೀವು ಪ್ರೀತಿಯಿಂದ ಬರೆದಿರುವ ಕಾಗದವನ್ನು ನೋಡಿ ಉಂಟಾದ ಆನಂದವು ಅಷ್ಟಿಷ್ಟಲ್ಲ. ಇನ್ನಿಲ್ಲಿ ಅರೆಘಳಿಗೆ ಕೂಡ ಇರಲಾರೆ. ನನ್ನ ಕಂದ ಜ್ವರದಿಂದ ನರಳುತ್ತಿರುವಾಗ ನನಗಿಲ್ಲೇನು ಕೆಲಸ. ಆಗಲೇ ಬರೆಯದೆ ಸುಮ್ಮನಿದ್ದಿ ರಲ್ಲ. ಮಗು ಎಷ್ಟು ಪೇಚಾಡಿತೋ. ನಮ್ಮಪ್ಪನನ್ನು ಕೇಳದೆಯೇ ಯಾರ ನ್ನಾದರೂ ಟಿಕೆಟ್ ತೆಗೆದುಕೊಡ ಹೇಳಿ ನಾಳೆ ರೈಲಿನಲ್ಲಿ ಹೊರಟುಬಿಡುತ್ತೇನೆ. ರೈಲು ಹತ್ತಿದೊಡನೆಯೇ ತಂತಿ ಕೊಡಹೇಳುತ್ತೇನೆ. ದಯವಿಟ್ಟು ಸ್ಟೇಷನಿಗೆ ಬಂದು ಕರೆದುಕೊಂಡು ಹೋಗಬೇಕಾಗಿ ಪ್ರಾರ್ಥಿಸಿಕೊಳ್ಳುತ್ತೇನೆ. ಸ್ಟೇಷ ನಿಗೆ ಬರದೇ ಇರಬೇಡಿ".

ಈ ಕಾಗದದಲ್ಲಿ ಸೂಚಿಸಿದಂತೆಯೇ ಕಮಲು ಮಾರನೆಯ ದಿನ ರಾತ್ರಿ ರೈಲಿನಲ್ಲಿ ಶಿವಮೊಗ್ಗೆಗೆ ಹೊರಟಳು. ಹೊರಟೊಡನೆಯೇ ಶ್ರೀಧರನಿಗೆ ತಂತಿ ಕೊಡಿಸಿದಳು ಮಾರನೆಯ ದಿನ ಸ್ಟೇಷನ್ನಿಗೆ ಬರಹೇಳಿ. ಈ ತಂತಿ ತಲಪಿದ್ದ ರಿಂದಲೇ "ಬೆಳಗಾಗುವ ವರೆಗೂ ಮಗು ಬದುಕಿರಬೇಕಲ್ಲ" ಎಂದು ಈ ಕಥೆಯ ಆರಂಭದಲ್ಲಿ ಹೇಳಿದಂತೆ ಅವನು ದೇವರನ್ನು ಪ್ರಾರ್ಥಿಸುತಿದ್ದನು.

ಘಂಟೆ ಐದು ಹೊಡೆಯುತ್ತಲೂ ವೆಂಕಮ್ಮನು, "ಮಗೂ! ಹೊತ್ತಾ ಯಿತು. ಏಳು. ಮಗುವನ್ನು ನಾನು ನೋಡಿಕೊಳ್ಳುತ್ತೇನೆ. ಒಂದು ಜಟ್ಕಾ ಮಾಡಿಕೊಂಡು ಸ್ಟೇಷನ್ನಿಗೆ ಹೋಗಿ ಕಮಲುವನ್ನು ಕರೆದುಕೊಂಡು ಬಾಪ್ಪ. ಹೋಗು. ಏಳು ಬೇಗ" ಎಂದು ಅವಸರಪಡಿಸಿದಳು.

ತಾಯಿಯ ಮಾತನ್ನು ಕೇಳಿ ನಿದ್ರಿಸುತಿದ್ದ ಶ್ರೀಧರನು ಏಳಲು, ಅವನ ಜೊತೆಯಲ್ಲೇ ಮಾಲತಿ, ಸುಬ್ಬು ಇಬ್ಬರೂ ಎಚ್ಚರಗೊಂಡು, "ಅಪ್ಪಾ—ನಾನು, ನಾನು—ಅಮ್ಮನನ್ನು ನಾನು ಮುಂಚೆ ನೋಡಬೇಕು—ನಾನು ಮುಂಚೆ ನೋಡ ಬೇಕು" ಎಂದು ಕೂಡ ಹೊರಡಲು ಸಿದ್ಧರಾದರು. ಶ್ರೀಧರನ ಕಣ್ಣಿನಲ್ಲಿ ನೀರು ತುಂಬಿತು. "ಪಾಪ—ನನ್ನಂತೆಯೇ ಅಲ್ಲವೇ ಮಕ್ಕಳಿಗೂ ಕಮಲೆಯನ್ನು ಕಾಣಲು ಕುತೂಹಲವಿದ್ದೀತು. ತಾಯಿಯನ್ನಗಲಿದ ಮಕ್ಕಳಿಗೆ ತಾಯನ್ನು ಕಾಣುವ ಆತುರ—ಪಾಪ—" ಅಂದುಕೊಂಡು ಅವರನ್ನೂ ಸಂಗಡ ಕರೆದು ಕೊಂಡು ಸ್ಟೇಶನ್ನಿಗೆ ಹೊರಟನು—ಸ್ಟೇಶನ್ನಿಗೆ ಗಾಡಿ ಬರುವುದಕ್ಕೆ ಅರ್ಧ ಘಂಟೆ ಮೊದಲೇ ತಲಪಿ, ಅಲ್ಲೇ ಒಂದು ಕಡೆ ಮಕ್ಕಳೊಡನೆ ಕುಳಿತಿದ್ದನು. ಸುಬ್ಬು, ಮಾಲತಿ ಇಬ್ಬರೂ ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿ ಶ್ರೀಧರನನ್ನು ಮುಳುಗಿಸಿದರು. "ಅಮ್ಮ ನನಗೆ ಚಾಕಲಟ್ ಪೆಪ್ಪರ್‌ಮೆಂಟ್ ತರುತ್ತಾ ಳಲ್ಲವೇನಪ್ಪ—ಸೆಲುವ ಲಾಯಿಡ್ ಬೊಂಬೆ ತರುತ್ತಾಳಲ್ಲವೇನಪ್ಪ—ಹೇಳಪ್ಪ— ತಂದರೆ ಇಟ್ಟುಕೊಂಡು ಆಡ್ತೀನೆ" ಅಂದಳು ಮಾಲತಿ. "ನಿನಗೇಕೆ ಬೊಂಬೆ- ಮನೆಯಲ್ಲಿ ಅಷ್ಟೊಂದಿದೆಯಲ್ಲ—ನನಗೇ ಅಮ್ಮ ತರುವುದೆಲ್ಲಾ" ಅಂದ ಸುಬ್ಬು—ಇಂತಹ ನೂರಾರು ಪ್ರಶ್ನೆಗಳು.

ಶ್ರೀಧರನು ಈ ಪ್ರಶ್ನೆಗಳಿಗೆಲ್ಲಾ ತಾಳ್ಮೆಯಿಂದ ಉತ್ತರಕೊಡುತಿದ್ದನು. ಇದ್ದಕ್ಕಿದ್ದ ಹಾಗೆ ಸ್ಟೇಶನಿನಲ್ಲಿ ಜನರು ಗುಂಪುಗುಂಪಾಗಿ ನಿಂತುಕೊಂಡು ಮಾತನಾಡುತಿದ್ದರು. ಶ್ರೀಧರನ ಮನವು ಆ ಕಡೆ ಹೋಯಿತು—ರೈಲು ಕಂಬಿತಪ್ಪಿ ಉರುಳಿತಂತೆ ಎನ್ನುವ ಸುದ್ದಿಯು ಶ್ರೀಧರನನ್ನು ಗಾಬರಿಗೊಳಿಸಿತು. "ಅಯ್ಯಯ್ಯೋ" ಎಂದು ಪ್ರಲಾಪಿಸುತ್ತ ಸ್ಟೇಶನ್ ಮಾಸ್ಟರ್ ಕೊಠಡಿಗೆ ಹೋಗಿ ಉನ್ಮತ್ತನಂತೆ "ಏನು ಸಾರ್! ನಿಜವೇ ರೈಲು ಬಿದ್ದದ್ದು—ಎಲ್ಲಿ ಬಿತ್ತು ಸಾರ್- ಒಳಗಿದ್ದವರ ಗತಿಯೇನು? ಎಲ್ಲರೂ ಸತ್ತುಹೋದರೇ? ಬದುಕಿರುವವರು ಯಾರಾದರೂ ಇರುವರೇ?" ಎಂದು ಆತುರದಿಂದ ಕೇಳಿದನು. ಅವನಂತೆಯೇ ಆ ಕೋಣೆಯ ತುಂಬ ತುಂಬಿದ್ದವರೂ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಕೇಳುತಿದ್ದರು. ಆದರೆ ಆಗ ಸ್ಟೇಶನ್ ಮಾಸ್ಟರಿಗೆ ಯಾವ ವಿವರವೂ ತಿಳಿಯದೆ ಇದ್ದುದರಿಂದ, "ಸ್ವಲ್ಪ ಶಾಂತವಾಗಿರಿ. ಎಲ್ಲಿ ವಿಪತ್ತೊದಗಿದೆ ಯೆಂಬುದು ಸರಿಯಾಗಿ ತಿಳಿದಿಲ್ಲ. ಮರಣಹೊಂದಿದವರ ವಿವರವೂ ತಿಳಿದಿಲ್ಲ. ಫೋನ್ ಮಾಡಿದ್ದೇನೆ—ಜವಾಬು ಬಂದಿಲ್ಲ" ಎಂದಿಷ್ಟೇ ಉತ್ತರವಿತ್ತರು. ಶ್ರೀಧರನ ತಲೆ ತಿರುಗಿತು. ಹಾಗೆಯೇ ಒಂದು ಬೆಂಚಿನ ಮೇಲೆ ಗೋಡೆ

ಗೊರಗಿಕೊಂಡು ಕುಳಿತನು—"ಅಪ್ಪಾ! ಅಮ್ಮ ಯಾಕಪ್ಪಾ ಬರಲಿಲ್ಲ? ಎಂದು ಮಕ್ಕಳು ಕೇಳಿದ ಪ್ರಶ್ನೆಗಳಿಗೆ ಅವನು ಉತ್ತರಕೊಡಲಿಲ್ಲ—ಮಕ್ಕಳ ಮಾತು ಅವನ ಕಿವಿಗೆ ಬಿದ್ದಿದ್ದರಲ್ಲವೇ?

ಒಂಭತ್ತು ಗಂಟೆಯ ವೇಳೆಗೆ ಸ್ಟೇಶನ್ ಮಾಸ್ಟರಿಗೆ ಸ್ವಲ್ಪ ವಿಷಯಗಳು ತಿಳಿದುಬಂದವು. ರೈಲುಕಂಬಿ ಕಳಚಿದ್ದು ಅರಸೀಕೆರೆಗೆ ಸಮೀಪವೆಂತಲೂ ಅಪಾಯಕ್ಕೊಳಗಾದವರನ್ನು ಬೇರೊಂದು ಗಾಡಿಯಲ್ಲಿ ಕಳುಹಿಸಲಾಗಿದೆ ಯೆಂದೂ ಮಧ್ಯಾಹ್ನ ಮೂರು ಘಂಟೆ ಸುಮಾರಿಗೆ ಶಿವಮೊಗ್ಗ ಸ್ಟೇಶನ್ನಿಗೆ ಆ ಪ್ರತ್ಯೇಕ ಗಾಡಿ ತಲಪಬಹುದೆಂದೂ ಹೇಳಿದರು. ಇನ್ನಲ್ಲಿ ಕಾದಿರುವುದರಿಂದ ಏನೂ ಪ್ರಯೋಜನವಿಲ್ಲವೆಂದುಕೊಂಡು ಶ್ರೀಧರನು ಮಕ್ಕಳನ್ನೆಲ್ಲಾ ಮನೆಗೆ ಕರೆದುಕೊಂಡು ಹೊರಟನು. ಮನೆಯನ್ನು ತಲಪುತ್ತಲೂ ಬಾಗಿಲಲ್ಲೇ ನಿಂತಿದ್ದ ತಾಯಿಗೆ ಏನು ಉತ್ತರಕೊಡುವುದೆನ್ನರಿಯದೆ ಶ್ರೀಧರನು ಬಿಕ್ಕಿಬಿಕ್ಕಿ ಅಳತೊಡಗಿದನು. "ಅಜ್ಜೀ, ಅಮ್ಮ ಸತ್ತುಹೋದರಂತೆ" ಎಂದು ಹೇಳಿ ಸುಬ್ಬನೂ ಅಳಲಾರಂಭಿಸಿದ. ವಿಷಯವಿಂಥದೆಂದು ಅರಿತ ವೆಂಕಮ್ಮನು ಬಾಯಿಬಾಯಿ ಬಡಿದುಕೊಂಡು, "ಅಯ್ಯೋ! ಬಂಗಾರದಂಥ ಹುಡುಗೀನ ಬಲಿಕೊಟ್ಟೆವಲ್ಲ—ಮಗೂ—ಏನು ಮಾಡಲಪ್ಪಾ! ಮಗುವೂ ಸಾಯುವಂತಿದೆ ಯಲ್ಲ. ನನಗೆ ಬರಬಾರದೇ ಎಲ್ಲರ ಸಾವೂ—ಸಣ್ಣಪುಟ್ಟ ಮಕ್ಕಳಿಗೇ ಬರಬೇಕೇ? ಆಸೆಯಿಂದ ಗಂಡನನ್ನೂ ಮಕ್ಕಳನ್ನೂ ನೋಡೋಣಾಂತ ಬಂದವಳಿಗೆ ಇಂಥಾ ಗತಿಬರಬೇಕೇ?" ಎಂದು ಗೋಳಾಡಿದಳು. ಇಷ್ಟರಲ್ಲೇ ಅಕ್ಕಪಕ್ಕದ ಮನೆಯ ವರೆಲ್ಲಾ ಬಂದು ಗುಂಪುಕೂಡಿದರು. ಅವರಲ್ಲಿ ಕೆಲವರು, "ಯಾಕೆ ಸುಮ್ಮನೆ ಅಳುತ್ತೀರಿ—ವೆಂಕತ್ತೆ,—ಮಧ್ಯಾಹ್ನ ಇನ್ನೊಂದು ಬಂಡಿ ಬರುತ್ತಂತಲ್ಲ—ಅದರಲ್ಲಿ ನಿಮ್ಮ ಸೊಸೆ ಬಂದರೂ ಬರಬಹುದು. ಅಷ್ಟರ ವರೆಗೆ ತಡೆಯ ಬಾರದೇ? ಸತ್ತೇ ಹೋದಳೆಂದು ನಿಮಗೆ ನಿರ್ಧರವಾಗಿ ತಿಳಿಯುವ ಮೊದಲು ಇಷ್ಟು ಗೋಳಾಟವೇಕೆ? ಧೈರ್ಯವಾಗಿರಿ—ನಿಮ್ಮದು ಒಳ್ಳೇ ಮನಸ್ಸು—ದೇವರೆಂದೂ ನಿಮಗಿಂತಹ ಕಷ್ಟವನ್ನು ಕೊಡಲಾರ" ಎಂದು ಧೈರ್ಯ ಗೊಳಿಸಿದರು.

ಆದರೆ ಆ ದೇವರ ಮನಸ್ಸಿನಲ್ಲಿರುವುದೇನೆಂಬುದನ್ನು ಬಲ್ಲವರಾರು? ಒಂದು ಕುಟುಂಬಕ್ಕೆ ಕಷ್ಟದ ಮೇಲೆ ಕಷ್ಟವನ್ನು ಕೊಡಬೇಕೆನ್ನುವುದು ಆತನ ಸಂಕಲ್ಪವಾದರೆ ಅದನ್ನು ತಡೆಯುವುದಾರಿಂದ ಸಾಧ್ಯ? ಅಂದು ಮಧ್ಯಾಹ್ನ ಬಂದ ಬೇರೆ ರೈಲಿನಲ್ಲೂ ಕಮಲೆಯ ಸುಳಿವೇ ಇಲ್ಲ. ವಿಪತ್ತಿನಿಂದ ಪಾರಾದ

ವರೆಲ್ಲರೂ ಬಂದು ಬಿಟ್ಟರೆಂದು ಸ್ಟೇಶನ್ ಮಾಸ್ಟರು ಹೇಳಿದರು. ಇದರ ಮೇಲೆ ನಂಬುವಂಥದ್ದೇನಿದೆ? ಆದರೂ ಕೆಲವರು ಸ್ನೇಹಿತರು ರೈಲು ಉಳಿದ ಕಡೆ ಹೋಗಿನೋಡಿ ಬರುವುದು ಒಳ್ಳೆಯದೆಂದು ಸಲಹೆಕೊಡಲು ಶ್ರೀಧರನು ಕೂಡಲೇ ಹೊರಟನು. ಅಲ್ಲೂ ಕಮಲೆಯಿಲ್ಲ. ಅಲ್ಲಿದ್ದ ರೈಲಿನಧಿಕಾರಿಗಳು ಹೇಳಿದ್ದರಲ್ಲಿ ಮೃತಿ ಹೊಂದಿದವರಲ್ಲಿ ಕೆಲವರು ನೆಲದಲ್ಲೇ ಹೂತು ಹೋದರೆಂದೂ ನೆಲವನ್ನು ಅಗೆದು ಅವರನ್ನು ಹುಡುಕಿ ತೆಗೆಯಬೇಕೆಂದೂ ಶವಗಳು ದೊರೆತನಂತರ ಮನೆಯವರಿಗೆ ಹೇಳಿ ಕಳುಹಿಸಲಾಗುವುದೆಂದೂ ತಿಳಿದು ಬಂದಿತು. "ಹೆಣವನ್ನು ನೋಡುವ ಅದೃಷ್ಟ ಕೂಡ ನನಗಿಲ್ಲದೇ ಹೋಯಿತು. ಇದು ನನಗೆ ತಕ್ಕದಂಡನೆಯೇ—ಮಕ್ಕಳನ್ನು ನನ್ನ ತಾಯಿಯ ಉಡಿಯಲ್ಲಿ ಹಾಕಿ ನಾನೆಲ್ಲಾದರೂ ಹೋಗಿ ಪ್ರಾಣ ಬಿಡುವುದೇ ಉತ್ತಮ," ಎಂದು ಹೇಳಿ ಶಿವಮುಗ್ಗಿಗೆ ಹೊರಟನು.

ಕಮಲೆಯು ಸತ್ತು ಹೋಗಿರಬೇಕೆಂಬ ದುಃಖ ಸಮಾಚಾರವನ್ನು ಕೇಳಿದ ವೆಂಕಮ್ಮನೂ ಮಕ್ಕಳೂ ಎಷ್ಟು ನೊಂದರೆಂಬುದನ್ನು ಬಣ್ಣಿಸಲು ಈ ಲೇಖನಿಗೆ ಶಕ್ತಿಸಾಲದು. ಮನೆಗೆ ಬಂದ ಕೂಡಲೇ ಮಲಗಿದ್ದ ಮಗುವಿನ ಸಮೀಪಕ್ಕೆ ಹೋಗಿ ಮಗುವನ್ನೆತ್ತಿ ತೊಡೆಯ ಮೇಲೆ ಮಲಗಿಸಿಕೊಂಡು, ತಾಯ ಮುಖವನ್ನು ನೋಡುತ್ತಾ, "ಅಮ್ಮಾ, ಕಮಲು ಇನ್ನು ಇಲ್ಲ. ನಮ್ಮನ್ನೆಲ್ಲಾ ಅನಾಥರನ್ನಾಗಿ ಮಾಡಿಬಿಟ್ಟು ಹೋದಳು. ಮಕ್ಕಳನ್ನು ಸಾಕುವ ಹೊರೆ ನಿನ್ನದು" ಎಂದು ದುಃಖಿಸಿದನು. ಆಗ ವೆಂಕಮ್ಮ, "ಮಗೂ! ನಡೆದದ್ದು ನಡೆಯಿತು. ಇನ್ನು ದುಃಖಿಸುವುದರಿಂದೇನು ಪ್ರಯೋಜನ? ಮುಂದಾಗಬೇಕಾದ್ದನ್ನು ನೋಡು, ನಿಮ್ಮ ತಂದೆಗೆ ತಂತಿಕೊಡು" ಎಂದಳು ಪ್ರಜ್ಞೆ ಹೊಂದಿದವನಾಗಿ ಶ್ರೀಧರನೆದ್ದು ತಾಯಿ ಹೇಳಿದಂತೆ ಬೆಂಗಳೂರಿನಲ್ಲಿದ್ದ ತಂದೆಗೆ ತಂತಿ ಕೊಟ್ಟನು.

ಮೂರನೆಯ ದಿನ ಬೆಳಿಗ್ಗೆ ತಂದೆಯ ಬರವನ್ನು ನಿರೀಕ್ಷಿಸುತ್ತ ಶ್ರೀಧರನು ಬಾಗಿಲಲ್ಲಿ ನಿಂತಿದ್ದನು. ದುಃಖ ವಿಚಾರಿಸಲು ಮನೆಗೆ ಅವರಿವರು ಬರುತ್ತ ಹೋಗುತ್ತ ಇದ್ದರು. ಆಗೊಂದು ಜಡ್ಕಾ ಗಾಡಿ ಶ್ರೀಧರನ ಮನೆಯ ಕಡೆ ಬೇಗ ಬೇಗ ಬರುತಿದ್ದುದನ್ನ ಕಂಡು ಹಿರಿಯರೊಬ್ಬರು "ಯಜಮಾನರು ಬಂದರು" ಎನಲು, ಕಣ್ಣಿನಲ್ಲಿ ನೀರುತುಂಬಿ ಎಲ್ಲೋ ಜ್ಞಾನದಿಂದ ನಿಂತಿದ್ದ ಶ್ರೀಧರನಿಗೆ ಮಾತುಗಳು ಕಿವಿಗೆ ಬೀಳಲು ಎಚ್ಚತ್ತು ಆ ಕಡೆ ನೋಡಲು, ಗಾಡಿ ಬಂದು ಇವರ ಮನೆ ಬಾಗಿಲಲ್ಲೇ ನಿಂತಿತು. "ಕಮಲು, ಕಮಲು,

ಎಂದೆಲ್ಲರೂ ಒಂದೇ ಸಮನೆ ಆಶ್ಚರ್ಯದಿಂದ ಕೂಗಿ ಕೊಂಡರು ಒಂದೇ ಕಾಲ ದಲ್ಲಿ. ಶ್ರೀಧರನು ಕಮಲೆಯನ್ನು ಕಂಡನು. ಏನಾಶ್ಚರ್ಯ! ಮೃತಿ ಹೊಂದಿದ್ದಾಗಿ ಭಾವಿಸಲ್ಪಟ್ಟಿದ್ದ ಸಾಕ್ಷಾತ್ ಕಮಲೆಯೇ ಗಾಡಿಯಿಂದಿಳಿದು ಮನೆಯೊಳಗೆ ಬಂದಳು!

ಇವರ ಗದ್ದಲವನ್ನು ಕೇಳಿದ ವೆಂಕಮ್ಮನು ಆಶ್ಚರ್ಯ ಆನಂದದಿಂದ ಕೂಡಿದವಳಾಗಿ ಒಂದೇ ಉಸಿರಿಗೆ ಧಾವಿಸಿ ಬಂದು ಕಮಲುವನ್ನಾಲಂಗಿಸಿ ಕೊಂಡು, "ಕಮಲೂ, ಬದುಕಿ ಬಂದೆಯಾ! ಭಾಗ್ಯಲಕ್ಷ್ಮಿ—ನೀನು ಸತ್ತೇ ಹೋದೆಯೆಂದೆಣಿಸಿದ್ದೆವಲ್ಲ! ಹೇಗಮ್ಮಾ ಬದುಕಿ ಬಂದೆ!" ಎಂದು ನೂರಾರು ಪ್ರಶ್ನೆಗಳನ್ನು ಕೇಳಿದರು. ಸುಬ್ಬುವೂ ಮಾಲತಿಯೂ, "ಅಮ್ಮಾ!" ಎನ್ನುತ್ತಾ ಓಡಿ ಬಂದು ತಾಯಿಯನ್ನಪ್ಪಿಕೊಂಡರು. ಶ್ರೀಧರನು ಮನಸ್ಸಿನಲ್ಲುಂಟಾದ ಉದ್ವೇಗವನ್ನೆಲ್ಲಾ ಅಡಗಿಸಿಕೊಂಡು, "ಕಮಲೂ" ಎಂದು ಕೂಗಬೇಕೆಂದು ಕೊಂಡನಾದರೂ ಸಾಧ್ಯವಾಗಲಿಲ್ಲ. ದುಃಖ ಭರದಿಂದ ಗಂಟಲು ಕಟ್ಟಿತು. ಇಷ್ಟರಲ್ಲೇ ಸಮೀಪದಲ್ಲಿದ್ದವರೆಲ್ಲರೂ ಕಮಲುವನ್ನು ಬಳಸಿಕೊಂಡರು. ಆದರೆ ಕಮಲು ಯಾರೊಡನೆಯೂ ಮಾತನಾಡದೆ ಜ್ವರದಿಂದ ನರಳುತ್ತ ಮಲಗಿದ್ದ ಮಗುವಿನ ಬಳಿ ಓಡಿ ಹೋಗಿ ಅದನ್ನೆತ್ತಿ ತೊಡೆಯ ಮೇಲೆ ಮಲಗಿಸಿ ಕೊಂಡು "ಕಣ್ಬಿಡಪ್ಪಾ! ಮುದ್ದುಕಂದ—ಅಮ್ಮ ಬಂದಿದೇನೆ—ನೋಡಿಲ್ಲಿ!" ಎಂದು ದುಃಖ ಮತ್ತು ಚಿಂತೆಯಿಂದ ಕೂಡಿದ ಧ್ವನಿಯಲ್ಲಿ ಪ್ರಲಾಪಿಸಿದಳು.

ಇದನ್ನು ಕಂಡ ವೆಂಕಮ್ಮನು, "ಕಮಲು! ಮಗು ಇನ್ನು ಬದುಕು ವುದು. ಸುಮ್ಮನಿರಮ್ಮಾ! ತಾಯಿಯನ್ನು ಕಂಡರೆ ಮಗು ಬದುಕುವುದೆಂದು ಮನ್ನೆ ಡಾಕ್ಟರರೇ ಹೇಳಿದರು. ಚಿಂತಿಸಬೇಡಮ್ಮಾ—ನೀನು ವಿಪತ್ತಿನಿಂದ ಹೇಗೆ ಪಾರಾದೆಯೆಂಬುದೇ ನಮಗೆಲ್ಲಾ ಆಶ್ಚರ್ಯವಾಗಿದೆ" ಎನಲು, ಕಮಲೆ "ದೇವರ ದಯೆ ಅತ್ತೇ—ನಾನು ಆ ಗಾಡಿಯಲ್ಲಿರಲೇ ಇಲ್ಲ" ಎಂದಳು. ಶ್ರೀಧರನ ಆಶ್ಚರ್ಯ ಅಷ್ಟಿಷ್ಟಲ್ಲ. "ನಿಜವೇ ಕಮಲು, ಮೈಲಿನಲ್ಲಿ ತಾನೇ ನೀನು ಹೊರಟೆ?" ಎಂದು ಕೇಳಿದನು. "ಹೊರಟದ್ದೇನೋ ಅದೇ ರೈಲು—ನಾನು ತರೀಕೆರೆಯಲ್ಲೇ ಇಳಿದುಬಿಟ್ಟೆ" ಎನಲು, "ತರೀಕೆರೆಯಲ್ಲೇ? ಅಲ್ಲೇ ಕಿಳಿದೆ" ಎಂದು ಶ್ರೀಧರನು ಕೇಳಿದನು.

"ಮೈಸೂರು ಸ್ಟೇಷನ್ನಿನಲ್ಲಿ ಟಿಕೆಟ್ ತೆಗೆದುಕೊಟ್ಟ ಮನುಷ್ಯ ಶುದ್ಧ ಕಿಲಾಡೀಂತ ಕಾಣುತ್ತೆ—ಶಿವಮೊಗ್ಗಿಗೆ ಟಿಕೆಟ್ ತೆಗೆದುಕೊಡೂಂದ್ರೆ ತರೀಕೆರೆಗೆ ತೆಗೆದುಕೊಟ್ಟು ಉಳಿದ ದುಡ್ಡನ್ನು ಜೇಬಿಗಿಳೀಬಿಟ್ಟ ಹಾಗೆ ಕಾಣುತ್ತೆ. ನನ

ಗದು ತಿಳಿಯಲೇ ಇಲ್ಲ. ತರೀಕೆರೆ ಸ್ಟೇಷನ್ ದಾಟಿ ಬೀರೂರಿಗೆ ಬಂದಾಗ ಅಲ್ಲಿನ ಸ್ಟೇಷನ್‌ಮಾಸ್ಟರು ಟಿಕೇಟು ನೋಡಿ, "ತರೀಕೆರೆ ವರೆಗೆ ಟಿಕೇಟು ತೆಗೆದುಕೊಂಡು ಬೀರೂರಿಗೇಕೆ ಬಂದೆ" ಎಂದು ಗದರಿಸಿ ನನ್ನನ್ನು ಅಲ್ಲಿಯೇ ಇಳಿಸಿಬಿಟ್ಟರು" ಎಂದಳು ಕಮಲೆ.

"ಆಮೇಲೆ ಹೇಗೆ ಬಂದೆ?" ಎಂದು ಶ್ರೀಧರನು ಕೇಳಿದನು.

"ಕೈಯಲ್ಲಿ ದುಡ್ಡಿಲ್ಲ. ಏನು ಮಾಡುವುದು? ಬೀರೂರಿನಲ್ಲಿ ಒಂದು ದಿನ ಇದ್ದು ಗುರುತಿದ್ದವರಿಂದ ಐದು ರೂಪಾಯಿ ಸಾಲ ತೆಗೆದುಕೊಂಡು ಇಲ್ಲಿ ಬಂದು ಸೇರಿದೆ. ಆ ದೀಕ್ಷಿತರ ಹೆಂಡತಿ ಬಹಳ ಒಳ್ಳೆಯಾಕೆ. ನನ್ನ ಕೈಉಂಗುರವನ್ನಿಟ್ಟುಕೊಂಡು ಐದು ರೂಪಾಯಿ ಕೊಡೀಂತ ಕೇಳಿದ್ದಕ್ಕೆ ಬೇಡಲೇ ಬೇಡವೆಂದು ಖಡಾಖಂಡಿತವಾಗಿ ನಿರಾಕರಿಸಿಬಿಟ್ಟು ಹಾಗೆಯೇ ಐದು ರೂಪಾಯಿಗಳನ್ನು ತಕ್ಷಣ ತಂದುಕೊಟ್ಟರು. ಹಾಗೆ ನಾನಲ್ಲಿ ಇಳಿಯುದಿದ್ದರೆ ಇಂದು ನಿಮ್ಮನ್ನೂ ಮಕ್ಕಳನ್ನೂ ಕಾಣುವ ಭಾಗ್ಯ ದೊರೆಯುತಿತ್ತೇ" ಎಂದಳು ಕಮಲು.

ಇದನ್ನು ಕೇಳಿದ ವೆಂಕಮ್ಮನ ಆನಂದಕ್ಕೆ ಪಾರವೇ ಇಲ್ಲ. "ಎಲ್ಲಾ ದೈವೇಚ್ಛೆ—ಕಮಲು—ನಾನು ಮಾಡಿದ ಪೂಜೆಯ ಫಲ ವ್ಯರ್ಥವಾಗಲಿಲ್ಲ ವಮ್ಮಾ ಭಗವಂತನೇ ನಿನ್ನನ್ನು ರಕ್ಷಿಸಿದ್ದು. ನಾಳೆಯೇ ರಾಮದೇವರಿಗೆ ಪಂಚಾಮೃತಾಭಿಷೇಕ ಮಾಡಿಸಿಯೇ ಮುಂದಿನ ಕೆಲಸ" ಎಂದಳು.

ಆಗ ಶ್ರೀಧರನು, "ಅಷ್ಟಕ್ಕೇ ತೃಪ್ತಿಹೊಂದಿದರೆ ಸಾಲದಮ್ಮಾ. ಕಮಲೆಗೆ ಟಿಕೆಟ್ ತೆಗೆದುಕೊಟ್ಟನಲ್ಲ ಒಬ್ಬ ಪುಣ್ಯಾತ್ಮ— ಅವನನ್ನು ಹುಡುಕಿ ನೋಡಿ ಕಂಡುಹಿಡಿದು ಆತನಿಗೆ ಉಡುಗೊರೆ ಬಹುಮಾನ ಕೊಡಬೇಕು" ಎನಲು ಅಲ್ಲಿದ್ದವರೆಲ್ಲರೂ ದುಃಖವನ್ನು ಮರೆತು ಘೊಲ್ಲೆಂದು ನಕ್ಕರು.

ಜ್ವರದಿಂದ ನರಳುತಿದ್ದ ಮಗು ಕೂಡಾ ಕಣ್ತೆರೆದು ಮೆಲ್ಲಗೆ ಮುಗುಳ್ನಗೆ ನಕ್ಕಿತು.



# ರಕ್ಷಾ ಬಂಧನ

(ಶ್ರೀ ಹಿರೇಮಲ್ಲೂರ ಈಶ್ವರನ್, ಎಂ. ಎ, ಹುಬ್ಬಳ್ಳಿ)

'ಮಗುವಿನ ನಾಮಕರಣ ನಿಮ್ಮಿಂದಲೇ ಆಗಬೇಕು, ಪಂಡಿತಜೀ'

'ಛೀ, ತಾಯೀ, ನೀವೇ ಇಡಬೇಕಮ್ಮ'

'ಇಲ್ಲ, ಪಂಡಿತಜೀ. ಅತಿಥಿಯಾಗಿ ಬಂದವರಲ್ಲಿ ನೀವು, ನಮ್ಮ ಪಾಲಿನ ಭಾಗ್ಯವಾಗಿ ಬಂದೀರಪ್ಪಾ. ನಿಮ್ಮ ನೆನಪು ಕೂಸಿನ ಹೆಸರ ಮೇಲೆ ಇರ ಬೇಕು ನೋಡಿ'

'ಹೌದು, ಹೌದು ಜವಹರಲಾಲಜೀ. ನೀವಿಟ್ಟ ಹೆಸರೇ ನಿಜ'

ಲೈಲಪುರದಲ್ಲಿ ನೆಹರು ಅತಿಥಿಯಾಗಿ ಬಂದಿಳಿದ ಮನೆಯಲ್ಲಿ ಹೊಸ ಮಗುವಿನ ನಾಮಕರಣದ ಮಾತುಕತೆ ನಡೆದಿತ್ತು. ಕಾಶ್ಮೀರದಲ್ಲಿ ತಂಗಿಯನ್ನು ಕಂಡು ತಿರುಗಿ ಅಲಹಾಬಾದಕ್ಕೆ ಹೊರಟ ಪಂಡಿತಜೀಯವರನ್ನು ಸ್ನೇಹದ ಕರೆಯೊಂದು ಲೈಲಪುರದ ಈ ಮನೆಗೆ ಕರೆದು ತಂದಿತ್ತು. ತಾಯಿಯ ಪ್ರೇಮ, ಸ್ನೇಹದ ಬಂಧನ ಇವುಗಳಿದಿರು ನೇಸರ ಕಾಂತಿಯೂ ಕಪ್ಪ ಕಪ್ಪನೆ!

ತೂಗು ಮಂಚದ ಮೇಲೆ ನೆಹರೂ, ಈಚೆಗೆ ಮನೆಯ ಒಡೆಯ ಒಡತಿಯರು, ಅಲ್ಲಿ ಆ ಕಡೆಗೆ ವಿಜಯ ಕುಮಾರ—ಇವರ ಇದಿರಿನಲ್ಲಿ ಇನ್ನೂ ಹೆಸರು ಹೇಳಿಸಿಕೊಳ್ಳದೆ ಲಾಲಿಯಾಡಿಸಿಕೊಳ್ಳುವ ಹದಿಮೂರು ದಿನ ಪೂರ್ತಿಯಾಗಿ ತುಂಬದ ಹೆಂಗೂಸು ತೊಟ್ಟಿಲಲ್ಲಿ. ಒಮ್ಮೆ ಮೌನ, ಒಮ್ಮೆ ನಗೆ, ಒಮ್ಮೆ ಹಿಂದಿನ ನೆನಹು, ಇನ್ನೊಮ್ಮೆ ಸದ್ಯದ ಪ್ರಸಂಗ! ಹೂಂ, ಪಂಡಿತಜೀ, ಏಕೆ ಈ ಮೌನ?

ನೆಹರೂ ಕೈಯಲ್ಲಿ ಪಾರಿಜಾತ ಅರಳಿತ್ತು. ಅರಳಿದ ಹೂ ಅವರ ಮನಸ್ಸನ್ನೆಲ್ಲ ಆವರಿಸಿತ್ತು. ಒಮ್ಮೆ ಕಣ್ಣು ಮುಚ್ಚಿ ಕಣ್ಣು ತೆರೆದರು. ಇನ್ನೊಮ್ಮೆ ಕಂಗಳ ಮೇಲೆ ಕೈಯೊಳೆದುಕೊಂಡರು ಅದೊಂದು ಸತ್ಯ ಪ್ರಸಂಗ!

ದೇವ ಲೋಕದಿಂದ ಕಲಹ ಲಂಪಟ ನಾರದರು ಇಳಿದು ಬಂದರು. ಕೃಷ್ಣನನ್ನು ಪ್ರೇಮ ಕಲಹಕ್ಕೆ ಗುರಿ ಮಾಡುತ್ತಿದ್ದ ಪ್ರಸಂಗ. ಈಗಿಲ್ಲ,

ಇನ್ನಷ್ಟು ಹೊತ್ತಿಗಾದರೂ ಸತ್ಯಭಾಮಾ, ರುಕ್ಮಿಣಿಯರ ಹೃದಯ ಸಮುದ್ರ ವಿಚಾರದ ತಾಕಲಾಟದಿಂದ ಉಕ್ಕ ಬೇಕು, ಇಳಿಯ ಬೇಕು.

'ಪಂಡಿತಜೀ .....'

ಪಾರಿಜಾತ ಹೂ ಗರಗರನೆ ತಿರುಗುತ್ತಿತ್ತು. ಮಂದಮಂದವಾದ ಗಾಳಿ ಸೂಸಿ ಸೂಸಿ ಬಂದು ಸುಮದ ಸೌರಭದೊಡನೆ ಮಾತುಕತೆಯನ್ನಾಡುತ್ತಿತ್ತು.

ರುಕ್ಮಿಣಿಗೆ ಸೊಕ್ಕೇ ಸರಿ. ಜವ್ವನದ ರೂಪು, ಮತ್ತಗಜದ ನಾಡಿ, ವಿಕಸಿತ ಕುಸುಮದ ಬಿಂಕ ಯಾತಕ್ಕೂ ಬೇಡ ಅದೆಲ್ಲ ಮಿಂಚಿನ ಸೆಳಕು, ನೀರ ಬೊಬ್ಬುಳಿ ..... ಓ, ಆ ಸವತಿ!

'ಪಂಡಿತಜೀ .....'

ಒಳ್ಳೆಯವಳು ಕೃಷ್ಣನ ಆ ರಾಣಿ. ದ್ವಾರಕಾವತಿಯ ಪಟ್ಟದ ರಾಣಿ ಸಮಸ್ತ ಸೌಭಾಗ್ಯ ಸಂಪನ್ನೆ! ಬಂದ ಅತಿಥಿಯನ್ನು ದೇವರೆಂದು ಬಗೆದು ಸತ್ಕರಿಸಿದವಳಿಗೆ ಯಾವ ಕಾಲಕ್ಕೂ ಸನ್ಮಾನ ಸಿಗಬೇಕು, ಸಿಗುತ್ತದೆ! ಸತ್ಯ ಭಾಮಾ .....? ದೇವೀ, ಸತ್ಯಭಾಮಾ?

'ಪಂಡಿತಜೀ .....'

'ಓ .....'

'ಏನು ವಿಚಾರಮಗ್ನರಾಗಿ ಹೋಗಿದೀರಲ್ಲ! ಮಗಳಿಗೊಂದು ಹೆಸರು ಹೇಳಿ, ಅಪ್ಪ. ಅದೇನು ದೊಡ್ಡ ಕಾರ್ಯ'

'ನೆನಪಿಗೆ ಬಂದ ಹೆಸರು ಹೇಳಿ, ಭಾಯೀ. ಅದನ್ನೇ ಹಸಾದವೆಂದು ಇಡುತ್ತೇವಿ. ಹೇಳಿ ಅಂದರೆ .....'

'ಅಮ್ಮಾ, ಹೇಳಲೇ'

'ಜೀ, ಪಂಡಿತಜೀ'

'ಇಡಿ, ಅಮ್ಮ ....'

'ಆಗಲಿ ಬಾಯೀ'

'ಸತ್ಯಭಾಮಾ'

'ಓ, ಸತ್ಯಭಾಮಾ'

ನಿಂತ ತೂಟ್ಟಿಲು ತೂಗಿತು. ಎಂಥ ಚಂದ ಹೆಸರು! ಸತ್ಯಭಾಮಾ, ಸತ್ಯಭಾಮಾ, ಕಂದನ ಲಾಲಿ ಮನೆಯ ತುಂಬ ನಿನದಗೊಂಡಿತ್ತು. ಶ್ರೀಗಂಧದ ಸೊಂಪು, ಕಸ್ತೂರಿಯ ಕಂಪು, ಪಾರಿಜಾತದ ಪರಿಮಳ ಪುಟ್ಟ ಕಂದನ ಕೇಕೆಯಲ್ಲಿ ಏರಿತು, ಮನೆಯನೆಲ್ಲ ತುಂಬಿತು.

x x x x

ವಿಜಯಕುಮಾರ ಲಾಹೋರ ಯುನಿವರ್ಸಿಟಿಗೆ ಓದಲು ಹೋಗುವ ಕಾಲ ಬಂದಿತು. ನಾಳೆ ಮುಂಜಾನೆ ಫ್ರಾಂಟಿಯರ್ ಮೇಲಿಗೆ ಊರು ಬಿಡಬೇಕು. ಸತ್ಯಭಾಮೆಗೆ ಅದೊಂದು ದುರ್ಧರ ಪ್ರಸಂಗ!

ರಾತ್ರಿ ಹಾಸುಗೆಗೆ ಹೋಗುವಾಗ ಒಡಹುಟ್ಟಿದ ಆ ಮಕ್ಕಳ ಜೀವ ಜಡವಾಗಿ ಹೋಗಿತ್ತು. ಹನ್ನೆರಡು ವರುಷಗಳ ಬಂಧನ! ವಿಜಯ ಬಂಧನ ಕಡಿದು ಹೋಗುತ್ತಾನಲ್ಲ!

'ಅಣ್ಣಾ . . . . ? ನಿದ್ದೆ ಬಂತೇ?'

ಸತ್ಯಭಾಮಾ ಕೂಗಿದುದು ವಿಜಯನಿಗೆ ತಿಳಿದಿತ್ತು. ಬೇಕಂತಲೆ ಮೌನ ತಳೆದಿದ್ದನಾತ. ಪಾಪ! ಕೂಸಿನ ಹೃದಯದ ಸೋದರಿ ಒಂದೆರಡು ಬಾರಿ ಒದರಿ, ಅಣ್ಣನಿಗೆ ನಿದ್ರೆ ಹತ್ತಿರಬೇಕೆಂದು ಸುಮ್ಮನಾದಳು. ಆದರೂ ಹೃದಯ ತಡೆಯಲಿಲ್ಲ. ನಾಳೆ ಕಾಲೇಜಿನ ವಸತಿ ಮಂದಿರದಲ್ಲಿ ಹಾಯಾಗಿ ಮಲಗಿಕೊಳ್ಳುತ್ತಾನೆ. ಈಗ ತುಸು ನಿದ್ರೆಭಂಗವಾದರೇನಂತೆ!

'ಅಣ್ಣಾ, ಏಯ್ ಅಣ್ಣಾ' ಎಂದೆನ್ನುತ್ತ ಸತ್ಯಭಾಮಾ ವಿಜಯನ ಮುಖದ ಮೇಲೆ ಕೈಯಾಡಿಸಿದಳು; ತುಟಿ ಬಿಚ್ಚಲೆಳಸಿದಳು. ಆಗ ನಿದ್ರೆ ಬಂದವನಂತೆ ನಟಿಸುತ್ತಿದ್ದ ವಿಜಯನು ತುಟಿಯನ್ನು ಬಿಗಿ ಹಿಡಿದದ್ದೆ ಹಿಡಿದದ್ದು, ಕಣ್ಣು ರೆಪ್ಪೆಯನ್ನಷ್ಟು ನೋಡುವ ಎಂದುಕೊಂಡು ಸತ್ಯ ಎರಡೂ ಕೈಯಿಂದ ವಿಜಯನ ಕಣ್ಣುಗುಡ್ಡೆಯನ್ನು ತೆರೆಯಿಸಿದಳು.

ನಗು ತಡೆಯಲಿಕ್ಕಾಗಲಿಲ್ಲ ಫಕ್ಕನೆ ನಕ್ಕುಬಿಟ್ಟ ವಿಜಯಕುಮಾರ! ಆ ಹೊತ್ತಿಗೆ ಸತ್ಯಭಾಮೆಯ ಕಣ್ಣಿನಲ್ಲಿ ನೀರು ತುಳುಕಿ ಬರದೆ ಇರಲಿಲ್ಲ.

ಹೀಗೆ ಎಚ್ಚರಾದ ಅಣ್ಣತಂಗಿಯರು ನಡುರಾತ್ರಿಯ ವರೆಗೂ ಮಾತನಾಡಿಯೇ ಆಡಿದರು. ಇಬ್ಬರೂ ಕೂಡಿದ ಆ ದಿನಮಾನ, ತಂಗಿಗೆ ಓದು ಹೇಳಿಕೊಟ್ಟ ಆ ನೆನಹು, ಹೋದ ವರುಷ ಅಮೃತಸರದ ಜಾತ್ರೆಗೆ ಹೋಗಿ

ಬಂದದ್ದು, ಕಾಶ್ಮೀರದ ಸುಂದರ ಸರೋವರಗಳನ್ನು ಸಂದರ್ಶಿಸಿ ಬಂದ ಸಂಗತಿ—ಒಂದೇ ಎರಡೇ ಎಲ್ಲಾ ನೆನಸಿಕೊಂಡರವರು.

ತಂದೆತಾಯಿಗಳು, 'ಮಲಗಿಕೊಳ್ಳಿರೀ' ಅಂದರೂ ಮಲಗಿಕೊಳ್ಳಲಿಲ್ಲ ಅವರ್‍ಳು. ವೈಭವಪೂರ್ಣದಿಂದ ಮೆರೆಯುವ ಆ ಮಹಲಿನ ಮನೆಯಲ್ಲಿ ಮಧ್ಯ ರಾತ್ರಿ ಸರಿದರೂ ಒಬ್ಬರ ಮೊಗದ ಮೇಲೆ ಒಬ್ಬರು ಕೈಯಿಕ್ಕಿಕೊಂಡು ಮಾತ ನಾಡುತ್ತಿದ್ದ ಮಕ್ಕಳ ಸಂತಸವನ್ನು ಕಂಡು ಮುಪ್ಪಿನ ತಂದೆತಾಯಿಗಳು ಹಿಗ್ಗಿ ಹೀರೆಯಕಾಯಿಯಂತಾದರು.

ಕಾವಲುಗಾರರು ದಿನದ ಪಣಿವನ್ನು ನಿದ್ರೆಯ ಗೊರಕೆಯ ಮೂಲಕ ಹೊರಗೆ ಹಾಕುತ್ತಿದ್ದುದನ್ನು ಹಾಸ್ಯಮಾಡುತ್ತಾ ವಿಜಯ, ಸತ್ಯಭಾಮಾ ತಾವೂ ನಿದ್ರೆಹೋದರು.

x x x x

ಲೈಲಪುರದಲ್ಲಿ ಅವರದೇ ದೊಡ್ಡ ಮನೆತನ. ಘನವಾದ ಆ ಸಂಪತ್ತನ್ನು ಆಳುವವರು ಇಬ್ಬರೇ; ಸತ್ಯಭಾಮಾ, ವಿಜಯಾ! ಮುಪ್ಪಿನ ತಂದೆತಾಯಿಗಳ ಆಸೆಯೆಲ್ಲ ಆ ಮಕ್ಕಳ ಬಾಳುವೆಯನ್ನು ನಚ್ಚಿನಿಂತಿತ್ತು.

ಅಂತಹ ನಚ್ಚಿನ ಮಗನನ್ನು ಈಗ ಲಾಹೋರ ವಿಶ್ವವಿದ್ಯಾಲಯಕ್ಕೆ ಓದಲು ಕಳುಹಿಸುವ ಸಮಾರಂಭ! ಸರಸವಿರಸ ನೆರೆಬಂದು ನಿಂತಿತ್ತು ಲೈಲ ಪುರದ ನಿಲುದಾಣದಲ್ಲಿ ನಿಂತ ಮುಪ್ಪರ ಕಣ್ಣಿನಲ್ಲಿ!

ಫ್ರಾಂಟಿಯರ್ ಮೇಲುಗಾಡಿ ಬಂದಿತು! ಸಿಳ್ಳು ಹಾಕುತ್ತ ಬಂದೇ ಬಂದಿತು. ಕೈಗೊಬ್ಬ, ಕಾಲಿಗೊಬ್ಬರಂತೆ ಬಂದಿದ್ದ ಜವಾನರೆಲ್ಲ ವಿಜಯನ ಗಂಟು ಗದಡಿಗಳನ್ನು ಗಾಡಿಯಲ್ಲಿ ಹೊಂದಿಸಿಟ್ಟರು. ವಿಜಯ ಉಗಿಬಂಡಿಯಲ್ಲಿ ಕುಳಿತಾಯಿತು.

'ಹುಷಾರಪ್ಪ, ವಿಜಯಾ'

'ಜೋಕೆಯಿಂದ ಹೋಗಬೇಕು; ಮುಟ್ಟಿದ್ದಕ್ಕೆ ಪತ್ರ ಬರೆ'

'ಪ್ರಕೃತಿಯನ್ನು ಕಾಯ್ದುಕೊಂಡಿರು'

ತಂದೆತಾಯಿಗಳು ವಿಜಯನಿಗೆ ಎಚ್ಚರಿಕೆಯ ಉಪದೇಶ ಕೊಡುತ್ತಿದ್ದರು. ಸತ್ಯಭಾಮಾಗೂ ಏನೋ ಹೇಳಬೇಕೆಂದೆನ್ನಿಸುತ್ತಿತ್ತು. ನಾಲಿಗೆ ಏನನ್ನೋ

ಚಪ್ಪರಿಸುತ್ತಿತ್ತು. ಹೃದಯ ಏನೋ ಹೇಳಬೇಕೆಂದು ಹವಣಿಸುತ್ತಿತ್ತು. ಆದರೆ ಮಾತೇ ಬರಲೊಲ್ಲವು.

'ಅಣ್ಣಾ, ಏ ಅಣ್ಣಾ, ಗಾಡಿ ಬಿಡುತ್ತದೆ ಗಟ್ಟಿಯಾಗಿ ಕುಳಿತುಕೊ.' ಒಳ್ಳೆಯ ಉಪದೇಶ. ತಂದೆತಾಯಿಗಳು ನಕ್ಕರು. ಜವಾನರೂ ನಕ್ಕರು. ಅಷ್ಟೊತ್ತಿಗೆ ಗಾರ್ಡ ಸಿಳ್ಳು ಹೊಡೆದ.

ಗಾಡಿ ಹೋಯಿತು. ಸತ್ಯಭಾಮಾ ಹುಚ್ಚಿಯಂತೆ ನಿಂತುಬಿಟ್ಟಳು.

'ಅಣ್ಣಾ, ಹೋಗಿ ಬಾ!'

x x x x

ಚಳಿಗಾಲದ ಒಂದು ಸಂಜೆ ಸತ್ಯಳ ತಂದೆ ಹೊರಗಿನಿಂದ ಕೆಮ್ಮುತ್ತಲೆ ಬಂದರು. ಬಂದವರೆ ಕಾಶ್ಮೀರದ ಶಾಲು ಹೊದೆದುಕೊಂಡು ಹಾಸುಗೆಗೆ ಒರಗಿ ಮಗಳನ್ನು ಕರೆದರು.

'ಸತ್ಯ'

'ಓ ಅಪ್ಪ'

'ಬಾಮ್ಮ. ಬಂದೆಯಾ'

'ಹೂಂ! ಬಂದೇ' ಅನ್ನುತ್ತ ಓಡಿಬಂದ ಮಗಳಿಗೆ ಅಪ್ಪ ಹೇಳತೊಡಗಿದರು. ಮಗಳ ಹಿಂದೆಯೆ ತಾಯಿಯೂ ಬಂದರು.

'ವಿಜಯನಿಗೆ ಕಾಗದ ಬರೆಯ ಬಾರದೇ?'

'ಯಾಕೆ ಅಂತಾದೇನು ಅವಸರವಪ್ಪ! ಅಣ್ಣನ ಪರೀಕ್ಷೆಗೆ ಇನ್ನು ಹದಿನೈದು ದಿನ ಬಾಕಿ ಅಲ್ಲಾ?'

'ಅವನ ಮುಖ ನೋಡಬೇಕೆಂದು ಅನ್ನಿಸುತ್ತದಮ್ಮ ನನಗೆ!'

'ಇದೆಂತ ಮಾತರೀ' ಎಂದೆನ್ನುತ್ತ ಮುದಿಕೆಯು ಗಂಡನ ಮೈಮುಟ್ಟಿ ನೋಡಿದಳು.

ತಾಯಿಯ ಮೊಗ ನೋಡುತ್ತಲೇ ಸತ್ಯಭಾಮಾ ನಡನಡನೆ ನಡುಗಿ ಹೋದಳು.

'ಅವ್ವಾ, ವೈದ್ಯರನ್ನು ಕರಸೋಣವೇ?'

'ಛೀ, ಹುಚ್ಚಿ. ಏನೋ ಥಂಡಿ. ನದೀ ಕಿನಾರದಲ್ಲಿ ತಿರುಗಾಡಿ ಬಂದೆ. ಬಿಡು ಇರಲಿ!"

'ಮತ್ತದೇನಪ್ಪ ಅಣ್ಣನ್ನ ಕರಸು ಅಂತೀರಲ್ಲ!'

'ಹೌದು. ವಿಜಯನನ್ನು ಯಾಕೊ ಒಮ್ಮೆ ನೋಡಬೇಕೆಂದು ಅನ್ನಿಸಿತು'.

'ಯಾಕರೀ'

'ಯಾಕಿಲ್ಲ. ವಿಜಯ ಬೇಕಲ್ಲ. ವಿಜಯಾ . . . . . . . ವಿಜಯ ಕುಮಾರ . . . . . . ' ಹೀಗೆನ್ನುತ್ತಲೆ ವಿಜಯನ ತಂದೆ ಹಾಸುಗೆ ಹಿಡಿದರು. ವೈದ್ಯರು ಬಂದು ಬೇನೆಯನ್ನು ಕಂಡುಹಿಡಿದರು. ಡಬಲ್ ನ್ಯೂಮೋನಿಯ ಅಂತೆ!

'ಅಪ್ಪಾ, ಏ, ಅಪ್ಪಾ?'

x x x x

ಲಾಹೋರ ವಿಶ್ವವಿದ್ಯಾಲಯದ ಪರೀಕ್ಷೆಯ ಕೊನೆಯ ಘಂಟೆ! ಕೊನೆಯ ಜಾವ! ಜವಾನ ಕಾಲೇಜಿನ ಪರೀಕ್ಷೆಯ ಕೊನೆಯ ಜಾವವನ್ನು ಸೂಚಿಸಿದೊಡನೆಯೆ ಉಮೇದವಾರರ ನೆತ್ತಿಗೆ ಏರಿದ್ದ ರಕ್ತ ಆ ಕ್ಷಣ ಹೌರಾಗಿ ಕೆಳಗಿಳಿಯತೊಡಗಿತು. ಒಂದು ನಿಮಿಷದಲ್ಲಿ ಕೆಲವರ ಮೊಗದ ಮೇಲೆ ಗೆಲವಿನ ಸಂಭ್ರಮ , ಕೆಲವರ ಮೊಗದ ಮೇಲೆ ನಿರಾಸೆಯ ನಿಟ್ಟುಸಿರು!

ವಿಜಯಕುಮಾರ ತನ್ನ ಪರೀಕ್ಷೆಯ ಕೊಠಡಿಯಿಂದ ಹೊರಗೆ ಬರುವಷ್ಟರಲ್ಲಿ ಬಾಗಿಲಲ್ಲಿ ನಿಂತ ಗೆಳೆಯನೊಬ್ಬ ತಂತಿಯ ಕಾಗದವೊಂದನ್ನು ಭಾರವಾದ ಕೈಗಳಿಂದ ಮುಂದಕ್ಕೆ ಚಾಚಿದ. 'ಅಣ್ಣಾ, ಅಪ್ಪ ಹದಿನೈದು ದಿನಗಳ ಹಿಂದೆಯೆ ಬಾ ಅಂದಿದ್ದ. ನಿನ್ನ ಪರೀಕ್ಷೆ ಇತ್ತಲ್ಲ! ನಾನು ತಡೆದು ನೋಡಿದೆ. ಮುಪ್ಪಿನಲ್ಲಿ ಸೇರಬಾರದ ಬೇನೆಯಂತೆ. ಇವತ್ತೆ ಓಡಿ ಬಾ. ಅಪ್ಪನನ್ನು ಒಮ್ಮೆ ನೋಡುವೆಯಂತೆ. ಅಣ್ಣಾ, ನಮ್ಮ ಜೀವದ ತಂತಿ . . . . ಓ, ಅವ್ವನ ಕಣ್ಣೀರು . . . . . .'

'ಸತ್ಯಭಾಮಾ? ಸತ್ಯ? ಅಪ್ಪ ಕರೀತಾನೇನು? ಬಂದೇ'.

ಇದೇನು ವಿಜಯಕುಮಾರನಿಗೆ! ಪರೀಕ್ಷೆಗೆ ಬಂದ ಉಮೇದುವಾರರೆಲ್ಲ ಸಹಪಾಠಿಯೊಬ್ಬನ ದುಃಖವಾರ್ತೆಯನ್ನು ಅರಿತುಕೊಂಡು 'ಪಾಪ' ಅನ್ನುತ್ತ

ತಮ್ಮ ತಮ್ಮ ದಾರಿ ಹಿಡಿದು ಹೋದರು. ಏನಾದರೂ ದುಃಖವನ್ನು ಹಂಚಿ ಕೊಡುವುದಕ್ಕೆ ಬರುತ್ತದೆಯೆ?

x x x x

ದೇಶದಲ್ಲಿ ಅತ್ಯದ್ಭುತ ಬದಲಾವಣೆ! ೪೭, ಅಗಸ್ಟ ಹದಿನಾಲ್ಕರ ಮಧ್ಯ ರಾತ್ರಿಗೆ ಹಿಂದೂದೇಶ ಗುಲಾಮಗಿರಿಯ ಸರಪಳಿಯನ್ನು ಕಡಿದೊಗೆದು ಸ್ವತಂತ್ರ ರಾಷ್ಟ್ರವಾಗಿ ನಿಲ್ಲುವುದು! ಬ್ರಿಟಿಷ್ ಸಾರ್ವಭೌಮನ ರಾಜಧಾನಿ ಲಂಡನ್ ನಗರದ ಮೇಲೆ ಸೂರ್ಯ ಅಸ್ತಂಗತನಾಗುವ ಕಾಲಕ್ಕೇನೆ ಹಿಂದೂ ದೇಶದ ರಾಜಧಾನಿಯ ಪೂರ್ವ ದಿಗಂತದಲ್ಲಿ ಸ್ವಾತಂತ್ರ್ಯಸೂರ್ಯನ ಉದಯ ವಾಗುವುದು! ಹಹೋ! ಪುಣ್ಯಭೂಮಿಯ ದರಿದ್ರ ಮಕ್ಕಳು ದೇವತ್ವಕ್ಕೇರುವ ಕಾಲ!

ಅದೆಲ್ಲಾ ಸರಿ. ಆದರೆ . . . . ? ಹಿಂದೂದೇಶ ಇಬ್ಭಾಗವಾಗಬೇಕಲ್ಲ! ಪುಣ್ಯವಾಹಿನಿಗಳಿಂದ, ತಪೋವನ ಶೋಭಿತ ಗಿರಿಪರ್ವತಗಳಿಂದ ರಮಣೀಯತ ವನ್ನಿಸಿದ ಪೂಜ್ಯ ಹಿಂದೂದೇಶ ಅಕೀರ್ತಿಗೆ ಈಡಾಗಬೇಕಲ್ಲ? ಒಂದು ಹೃದಯ ವನ್ನು ಎರಡು ಹೋಳು ಮಾಡಿದ ಮೇಲೆ ಏನು ಗತಿ? ಆ ಸಿಂಧ ಪಂಜಾಬಗಳ ಪಾಲಿಗೆ ಏನೇನು?

ಅದೇ ಸಂಧಿಕಾಲ! ಜಾತೀಯತೆಯೆ ಯಜ್ಞಕುಂಡದ ಅಗ್ನಿ ಹೊತ್ತ ಬೇಕು! ಬ್ರಿಟಿಷರ ಕಪಿಮುಷ್ಟಿಯಲ್ಲಿಯ ಮಂತ್ರದ ಹೊಗೆ ಇನ್ನೂ ಆಡಬೇಕು!

ಹಿಂದೀಯರಿಗೆ ಗಾಂಧೀಜಿ ಆದೇಶವಿತ್ತರು. ಎಲೋ ಬಿಹಾರಿಗಳೇ, ಬಂಗಾಲಿಗಳೇ ಪಾವನಮಾತೆಯ ನಿಮ್ಮ ಕವಿ ಹೇಳಿದಂತ ಸಸ್ಯ ಸ್ಯಾಮಲೆಯ ಸತ್ ಪುತ್ರರು ನೀವು. ದಯೆಯಿಲ್ಲದ ಧರ್ಮ ನಿಮ್ಮದಲ್ಲ. ಅಲ್ಪ ಸಂಖ್ಯಾಕ ರನ್ನು, ನಿಮ್ಮ ಮನೆಯ ಸೋದರರರನ್ನು ರಕ್ಷಿಸಿರಿ. ಇಲ್ಲಾ, ನನ್ನ ಜೀವ, ಕೋ, ಕೊಳ್ಳಿರಿ.

ಜಿನ್ನಾ ಕೊಡ ಹೇಳಿದರಂತೆ. ಇಬ್ರಾಹೀಂ ಇಸ್ಲಾಂ ಧರ್ಮಕ್ಕಾಗಿ ಅಂದು ತನ್ನ ಮಗನನ್ನೇ ಬಲಿಕೊಟ್ಟದ್ದು ನಿಮಗೆ ನೆನಪಿದೆಯೋ ಮುಸ್ಲಿಂರೇ? ಒಬ್ಬ ಮಹಮ್ಮದೀಯನಲ್ಲ, ಲಕ್ಷಾಂತರ ಮಹಮ್ಮದೀಯರು ಇಂದು ಆತ್ಮಾ ರ್ಪಣೆಗಾಗಿ ಮುಂದೆ ಬರಬೇಕಾಗಿದೆ! ಇಸ್ಲಾಂ ಧರ್ಮಕ್ಕೆ ಗಂಡಾಂತರವಿದೆ. ಎಚ್ಚರ!

ಅದೇ ತಡ. ಪಂಜಾಬದಲ್ಲಿ ಹತ್ಯಾಕಾಂಡಕ್ಕೆ ಪ್ರಾರಂಭ! ಲಾಹೋರ

ವಿಶ್ವವಿದ್ಯಾಲಯದ ವಸತಿ ಮಂದಿರದಲ್ಲಿ ಕುಳಿತುಕೊಂಡೇ ವಿಜಯಕುಮಾರ ಪಿಳಿಪಿಳಿ ಕಣ್ಣು ಬಿಟ್ಟ!

'ಅಣ್ಣಾ?'

'ಏ, ಅಣ್ಣಾ? ಲಗೂ ಓಡಿ ಬಾ. ಇಲ್ಲಿ ಏನು ನಡೆಯಬಾರದ್ದೆಲ್ಲ ನಡೆಯ ತೊಡಗಿದ ಸುದ್ದಿ ಸುಟ್ಟುರೆಗಾಳಿಯಂತೆ ಹಬ್ಬತೊಡಗಿದೆ. ಹಿಂದೂಗಳ ಮನೆಯ ಲೂಟಿ, ಜೀವಂತ ಮನುಷ್ಯರನ್ನು ಬೆಂಕಿಯಲ್ಲಿ ತೂರುವ ಸುದ್ದಿ, ಹೆಂಗಳೆ ಯರ ಅವಮಾನದ ಕತೆ . . . . . !

ಅವ್ವ ಎದೆ ಒಡೆದುಕೊಂಡಿದ್ದಾಳೆ. ಮನೆಯೊಳಗಿನ ಜವಾನರೆಲ್ಲ ಜೀವಕ್ಕೆ ಅಂಜಿ ಓಡಿ ಹೋಗಿದ್ದಾರೆ. ಈಗ ನಾನೇ ಸೇವಕಿ, ಒಡತಿ. ಯಾವ ಹೊತ್ತಿಗೆ ಈ ವೈಭವ ಸುಟ್ಟುರಿದೆದ್ದೀತು ಹೇಳಬಾರದು. ಓಡಿ ಬಾ ಅಣ್ಣಾ!

ತಾಯಿಯ ಕಣ್ಣಿನ ಗೊಂಬೆಗಳಲ್ಲಿ ನೀನು ಬಂದು ನಿಂತಿದ್ದರಿಂದಲೇ ಇನ್ನೂ ಆಕೆ ಇಲ್ಲಿಯೇ ಇದ್ದಾಳೆ. ಬಾ ಬೇಗ!'

ಬರುವಂತಿಲ್ಲ ಸೋದರೀ! ಗಾಡಿಗೆ ಗಾಡಿಯೇ ಧ್ವಂಸವಾಗುತ್ತಿದೆ. ಲಾಹೋರ ಬಿಟ್ಟು ವಿಜಯಕುಮಾರ ಹೊರಡುವುದು ಹಿತವಲ್ಲ ಸತ್ಯಭಾಮಾ!

ತಂಗಾಳಿ ತಂದ ಸುದ್ದಿ! ಸುಂದರ ಪಂಜಾಬ ದೇಶದ ಪಂಚ ನದಿಗಳಿಗೆ ಮಹಾಪೂರ ಬಂದ ಹಾಗೆ ಆಗಿತ್ತು ಸತ್ಯಭಾಮೆಯ ದುಃಖ!

x x x x

ಪಶ್ಚಿಮ ಪಂಜಾಬದಲ್ಲಿ ಹೇಳಬಾರದ ದುಃಖ! ಹಿಂದೂ ಮಹಿಳೆಯ ರನ್ನು ಬತ್ತಲೆಮಾಡಿ ಕುಣಿಸಿದರಂತೆ! ಮಕ್ಕಳನ್ನು ಬರ್ಚಿಗೆ ಚುಚ್ಚಿ ಈಡು ಮಾಡಿದರಂತೆ! ಬಾಣಂತಿಯರನ್ನು ಎಳೆದು ತಂದು ಸುಟ್ಟರಂತೆ! ಆದರೂ . . . . . . ಇಸ್ಲಾಂ ಧರ್ಮ, ಪೈಗಂಬರ್ ಹೇಳಿದ ದಿವ್ಯ ಧರ್ಮ ಗಂಡಾಂತರದಲ್ಲಿ ರುವುದಂತೆ! ಸೋಜಿಗ!

ಲೈಲಪುರದ ಗತಿಯೂ ಹಾಗೆ! ಆ ಊರಿನ ಒಂದು ಮನೆಯ ಗೋಡೆಯೂ ಮುಸಲ್ಮಾನರ ಕೊಡತಿಗೆ ಗಟ್ಟಿಯಾಗಿ ನಿಂತಿಲ್ಲ. ಸಿರಿವಂತರ ಮನೆ ನೆಲಸಮ. ಹೆಂಗಳಿಗೆ ಅವಮಾನ. ಮಾನ-ಧನ ಎಲ್ಲಾ ಲೂಟಿ!

ಪಂಡಿತ ನೆಹರೂ ನಮ್ಮ ಸ್ವತಂತ್ರ ಹಿಂದೂದೇಶದ ಪ್ರಜಾಧಿಪತಿಯ ಹೊಟ್ಟೆಯಲ್ಲಿ ಆಗಬಾರದ ಸಂಕಟ!

'ಓ ನನ್ನ ಭರತದೇಶದ ಹಾನಿ! ಪಂಚ ನದಿಗಳಿಂದ ಪುಣ್ಯಭೂಮಿಯೆಂದೆನ್ನಿಸಿಕೊಂಡ ಪಂಜಾಬದಲ್ಲಿ ರಕ್ತದ ಕಾಲುವೆ ಎಂದು ನಿಂತೀತು?

ಪಂಜಾಬದ ಹಿಂದೀಯರಿಗೆ, ಆ ನಾಡಿನ ಸಮಸ್ತ ದುಃಖಿಗಳಿಗೆ ನೆಮ್ಮದಿ ದೊರೆಯುವತನಕ ನನಗೆ ವಿಶ್ರಾಂತಿಯಿಲ್ಲ. ಈ ಕೊಲೆ ಈಗಲೇ ನಿಲ್ಲಬೇಕು . . . . . . ಇಲ್ಲಾ . . . . . !' ನೆಹರೂ ಆಗಲೆ ಪಂಜಾಬಕ್ಕೆ ಓಡಿ ಬಂದರು. ಅವರು ಹೋದಲ್ಲಿ ಬಂದಲ್ಲಿ ಹೆಣ್ಣು ಮಕ್ಕಳು ಅಳುತ್ತ ಬಂದು ನಿಂತದ್ದೇ ನಿಂತದ್ದು! ಆ ಚಿತ್ರ ನೆಹರೂ ಎಂದಿಗೂ ಮರೆಯಲಾರರು!

ಪಂಜಾಬವನ್ನು ಸುತ್ತಿ ಲೈಲಪುರಕ್ಕೆ ನೆಹರೂ ಭೆಟ್ಟಿಕೊಡುವ ಹೊತ್ತಿಗೆ ರಕ್ಷಾಬಂಧನದ ದಿನ!

ಅಗಸ್ಟ ೩೧, ೧೯೪೭! ಲೈಲಪುರದಲ್ಲಿ ರಕ್ಷಾಬಂಧನ! ಆ ಜಾವ ನೆನೆದರೆ ಎದೆ ನಡುಗಬೇಕು. ಮೈ ಜುಮ್ಮೆನ್ನಬೇಕು. ಕಾಶ್ಮೀರ ದೇಶದ ಕೋಮಲ ಕುಸುಮಗಳನ್ನು ಪಾದದಡಿಯಲ್ಲಿರಿಸಿ ತುಳಿಯುವುದನ್ನು ಕಂಡ ಕವಿಯ ಹೃದಯ ಎಂತಾದೀತು?

ಲೈಲಪುರದ ಅಗಸೆಯ ಬಾಗಿಲಿಗೆ ನೆಹರೂರವರ ಕಾರು ಬಂದು ನಿಲ್ಲುವ ಹೊತ್ತಿಗೆ ಅಲ್ಲಲ್ಲಿಯ ಕಂಚಿಕೊಂಪೆಗಳಲ್ಲಿ ತಪ್ಪಲು ತಿಂದು ಬದುಕಿ ಜೀವ ಹಿಡಿದು ನಿಂತುಕೊಂಡಿದ್ದ ಹೆಣ್ಣುಮಕ್ಕಳು, 'ಅಭಯವನ್ನೀಯೋ' ಎಂದು ಓಡಿಓಡಿ ಬರುತ್ತಿದ್ದರು.

'ನಮಗೆ ಮಾನಹಾನಿ ಆಗಿದೆ. ನಾವು ಅಗ್ನಿಕುಂಡ ಸಿದ್ಧಪಡಿಸಿ ಆತ್ಮಾರ್ಪಣೆ ಮಾಡಬೇಕೆಂದಿದ್ದೇವೆ. ಅಪ್ಪಣೆ ಕೊಡಿರಿ ಪಂಡಿತಜೀ.'

'ಅಣ್ಣಾ, ಹಿಂದೂ ಮಹಿಳೆಗೆ ಮಾನಕ್ಕಿಂತ ಶ್ರೇಯವಾದ ಸಂಪತ್ತು ಇನ್ನೊಂದಿಲ್ಲ. ನಾವು ಜೀವ ಕೊಡುತ್ತೇವೆ; ಇಲ್ಲಾ, ರಕ್ಷಣೆ ಕೊಡಿರಿ.'

'ಮಕ್ಕಳನ್ನು ಕಸಿದುಕೊಂಡುಹೋದರು. ಕನ್ಯೆಯರನ್ನು ಅವಮಾನಗೊಳಿಸಿದರು. ಮುದಿಕೆಯರನ್ನು, ಬಾಣಂತಿಯರನ್ನು ಕಡಿದು ತೂರಿದರು ವಿದ್ಯಾರ್ಥಿಗಳನ್ನು ಹೊಡೆದುಕೊಂದರು. ನಾವು ಬದುಕಿರಲು ಒಲ್ಲೆವೋ ಒಲ್ಲೆವು! ಪಂಡಿತಜಿಯ ಮೈಗೆ ಮುಳ್ಳು ಬಡಿದಂತಾಗಿತ್ತು. ದೇಶದ ಹಿರಿತನ ಹೊತ್ತವನೇ ಅತ್ತರೆ, ಇನ್ನುಳಿದ ಮಕ್ಕಳ ಗತಿಯೇನು? ಅಂತೆಯೇ ನೆಹರೂ ಅಳಲಿಲ್ಲ. ಆದರೆ . . . . ?

ಸತ್ಯಭಾಮಾ ಬಂದಳು. ಅವಳ ಹಿಂದೆ ತಂಡೋಪತಂಡವಾಗಿ ಕಾಶ್ಮೀರ ದೇಶದ ಹಿಂದೂ ಕುಲಪುತ್ರಿಯರು ಕೈಯಲ್ಲಿ ರಕ್ಷಾಬಂಧನ ಹಿಡಿದುಕೊಂಡು ನೆಹರೂ ಸಮೀಪಕ್ಕೆ ಓಡಿಬಂದರು.

'ದೇಶದ ಹಿತಚಿಂತಕನೆ, ಪಂಡಿತಜೀ, ನೀನೆಮ್ಮ ಸೋದರ. ಈ ರಕ್ಷಾ ಬಂಧನ ಕಟ್ಟುತ್ತೇವೆ. ನಮ್ಮ ಮಾನವಮಾನ ನಿನ್ನದು' ಎಂದೆನ್ನುತ್ತ ನೆಹರೂ ಕೈಗೆ ರಕ್ಷಾಬಂಧನ ಕಟ್ಟಿದರು.

ಸತ್ಯಭಾಮಾ ಇನ್ನೂ ಹಾಗೆಯೇ ಕೈಯಲ್ಲಿ ರಕ್ಷೆಯನ್ನು ಹಿಡಿದುಕೊಂಡು ನಿಂತಿದ್ದಳು. ನಿಂತೇ ನಿಂತಿದ್ದಳು. ನೆಹರೂ ಒಮ್ಮೆ ಅವಳೆಡೆಗೆ ನೋಡಿದರು.

'ತಂಗೀ . . . '

ಸತ್ಯಭಾಮಾ 'ಓ' ಅನ್ನಲೇ ಇಲ್ಲ. ನೆಹರೂ ಒಮ್ಮೆ ನಡುಗಿಹೋದರು ಮತ್ತೆ ಮಾತನಾಡಿಸಿದರು.

ಅವಳು ಮಾತನಾಡಲೇ ಇಲ್ಲ. ಮೌನದಿಂದ ಎರಡು ಹೆಜ್ಜೆ ಮುಂದೆ ಬಂದು ನೆಹರೂ ಕೈಗೆ ರಕ್ಷೆಯನ್ನು ಕಟ್ಟಿ ಒಂದು ನಿಮಿಷ ನಿಂತಳು; ನೆಹರೂ ಪಾದಕ್ಕೆ ಹಣೆ ಹಚ್ಚಿದಳು.

'ನಾನು ಸತ್ಯಭಾಮಾ. ನೀನು ಹೆಸರಿಟ್ಟ ಕೂಸು. ಮನೆಮಾರು ಬೆಂಕಿಯ ಪಾಲು. ಅಣ್ಣನಿಗೆ ಗುಂಡಿಕ್ಕಿಕೊಂದರು. ತಾಯಿಯನ್ನು ಕಡಿದು ಹಾಕಿದರು. ನನ್ನ ಪಾಲು . . . . ' ಸತ್ಯಭಾಮೆಯ ಕಣ್ಣಿನಿಂದ ನೆಹರೂ ಪಾದದ ಮೇಲೆ ಬೀಳುವ ಕಂಬನಿ ಒಂದೊಂದೇ ಅವಳ ಜೀವನದ ದುಃಖಗೀತ ವನ್ನು ಬಿಡಿಸಿ ಬಿಡಿಸಿ ಹೇಳುತ್ತಿದ್ದವು.

'ಸತ್ಯಭಾಮಾ . . . . '

'ಅಣ್ಣಾ . . . . '

ನೆಹರೂ ಎದೆಯಲ್ಲಿ ನೆನಹಿನ ಗಂಗೆ ಹರಿದುಬಂದಳು. ಏನು ಮಾಡಿ ದರೂ ಕೇಳಲಿಲ್ಲ. ಎಷ್ಟು ತಡೆಹಿಡಿದರೂ ತಡೆಯಲಾಗಲಿಲ್ಲ. ನೆಹರೂ ಕಣ್ಣಿನಿಂದ ನೀರು ಬಳಬಳ ಸುರಿಯತೊಡಗಿದವು.

'ಅಣ್ಣಾ, ಹಿಂದೂ ಕುಲಪುತ್ರಿಯರ ಮಾನದ ಹೆಸರಿನಲ್ಲಿ ಈ ರಕ್ಷಾ ಬಂಧನ . . . . ! '

ನೆಹರೂ ಕೈ ಮುಂದೆಮಾಡಿದರು!



# ಓ ಆ ದಿನಗಳು

(ಶ್ರೀ. ರಾ. ಶ್ರೀ. ಕಸ್ತೂರಿ, ಕೋಟೆ, ಮುಂಬಯಿ)

ಬಹುದಿನಗಳ ಬಳಿಕ ಅತ್ತಹೋದುದರಿಂದ ಸುಖದುಃಖಗಳ ಮಾತು ಕತೆಯಾಡುತ್ತ ಕುಳಿತೆವು. ಚಹಾವೂ ಬಂತು. ಹೋಟೆಲಿನ ಹಾಲಿನ ಹುಡಿಯು ಚಹಾ ಕುಡಿದು ಓಕರಿಕೆ ಬಂದಾಗ ಮನೆಯು ಹಾಲಿನ ಚಹಾ ಎಂದರೆ ಸಹಜ ವಾಗಿ ಬರಲಿ ಎನ್ನಿಸುತ್ತದೆ. ಮತ್ತೆ ನಾನು ದಕ್ಷಿಣದಿಂದ ಬಂದವನಾದರೂ ದಾಕ್ಷಿಣ್ಯದಿಂದ ದೂರ. ಬೇಡ ಬೇಡವೆಂದು ಕೈಮುನ್ನೀಡುವ ಢಾಂಭಿಕತನ ದಿಂದಲೂ ಅಷ್ಟೆ. ಹಾಗಾಗಿ ನನ್ನ ಮಟ್ಟಿಗೆ ಚಹಾ ಮಾಡಲೇ ಎಂದು ಕೇಳು ವುದು ಅವರ ವಾಡಿಕೆಯಾಗಿರಲಿಲ್ಲ. ತಂದೇ ಕೊಡುತಿದ್ದರು. ಹೊಟ್ಟೆಗಾಗಿ ಮನೆಮಾರುಗಳಿಂದ ದೂರ ಉಳಿದವರಿಗೆ ಮನೆಯು ನೆನಪು ಎಂದರೆ ಅದೊಂದು ತರದ ಸವಿ ಇದ್ದೇ ಇರುತ್ತದೆ. ಯಾರೂ ಇಲ್ಲದಲ್ಲಿ ಮನೆತನದ ಸಂಸರ್ಗ ತುಂಬ ನೆಮ್ಮದಿ ಈಯುತ್ತದೆ. ಮಾತಿಗೆ ಮಾತು ಹತ್ತಿ ಸರಣಿಸ್ವಾರಸ್ಯಕ್ಕೆ ಬಂದಿತು. 'ಮದುವೆ ಮಾಡೋಣ ನಿನಗೆ' ಎಂದಳಾತಾಯಿ. ಮದುವೆ ಎಂಬ ಮಾತೇ ಚೆಂದ, ಅದರೊಳಗೆ ಅಡಕವಾಗಿರುವ ಮಡದಿಯ ಚಿತ್ರ ಬಲು ಚೆಂದ! ಮದುವೆ ಎಂದರೆ ಯಾರಿಗೆ ಗೆಲುವಾಗದು? ಅದೂ ತಾರುಣ್ಯದ ಹೊಸ್ತಿಲಲ್ಲಿ ಕಾಲಿಟ್ಟು ತಲೆಯೆತ್ತಿದವರಿಗೆ! ತಾನಾಗಿ ಅದೊಂದು ಮುಗುಳುನಗೆ ಮಿಂಚಿತು ನನ್ನ ಮೊಗದಲ್ಲಿ. ಅದು ಅಲ್ಲೇ ಅಡಗಿಕೊಳ್ಳುವ ಮೊದಲೇ 'ಒಂದು ಒಳ್ಳೇ ಹೆಣ್ಣಿದೆ, ಮದುವೆ ಮಾಡಿ ಬಿಡೋಣ' ಎಂದವರು ಚಹಾದ ತಟ್ಟೆ ಕೆಳಗಿರಿಸಿದರು. ಚಹಾದೊಂದಿಗೇ ಸಿಗರೇಟು ಬಂದಿದ್ದುದರಿಂದ, ಒಂದ ನ್ನೆತ್ತಿ ಕಡ್ಡಿಕೀರಿದೆ ಮನಸ್ಸಿನೊಳಗೆ ಹೊಯ್ದಾಟ ನಡೆದಿತ್ತು. ಬಾಳಿನಲ್ಲಿ ಸಂದರ್ಭಗಳು ಸಿಗುವುದು ಕಡಿಮೆ, ಸಿಕ್ಕರೂ ಅದರ ಸದುಪಯೋಗದ ದಾರಿ ಕಾಣುವುದಿಲ್ಲ. ಆದರೂ ಸಿಕ್ಕ ಸಂದರ್ಭವನ್ನು ಬರಿದೇ ಹೋಗಗೊಡುವುದು ಮೂರ್ಖತನವಷ್ಟೆ, ಅದೂ ಒಲಿದು ಬಂದ ನಾರಿಯ ವಿಚಾರ! ಅದೆಷ್ಟು ಸವಿ ಆ ಸಂದರ್ಭ! ಆದರೆ ಒಂದು ತರದ ಅಧೈರ್ಯವೂ ಬಲಿತಿತ್ತು. ವಾಸ್ತವಿಕ ತೆಯ ನಗ್ನರೂಪು, ನಿರಾಶೆಯಲ್ಲಿ ಬೇರೊಡೆದು ಸಹಜವಾಗಿ ಅಸಹಾಯಕತೆ ಯನ್ನು ಎತ್ತಿ ತೋರಿಸುತಿತ್ತು. ಹಾಗಾಗಿ ಅಣಕವಿರದಷ್ಟೆ ಎಂಬ ಅನುಮಾ ನವೂ ಜತೆಕೂಡಿತು. ನನ್ನಂತಹ ಒಬ್ಬ ಭಿಕಾರಿಗೆ ಹೆಣ್ಣು ಕೊಡುವೆನೆಂದು

ಮುಂದೆ ಬರುವ ಪುಣ್ಯಾತ್ಮನಾರಪ್ಪ ಎಂದು ಸೋಜಿಗಗೊಂಡೆ. ಬಹುಶಃ ಅವನಿಗೆ ಹೊಳೆದುದೆಲ್ಲ ಮಾಣಿಕವಾಗಿ ಕಂಡಿರಬೇಕು. ಬೆಳ್ಳಗಿರುವುದೆಲ್ಲ ಹಾಲಲ್ಲ ಎಂದು ತಿಳಿದಾಗ ಮಿಂಚಿದ ಕಾರ್ಯಕ್ಕೆ ಚಿಂತಿಸುತ್ತ ಕುಳ್ಳಿರಲು ನಾನೇ ಅವಕಾಶಮಾಡಿಕೊಡುವುದಕ್ಕಿಂತ, 'ಮಹಾರಾಯ, ಮಗಳನ್ನ ಯೋಗ್ಯನೊಬ್ಬನನ್ನು ಕಂಡು, ತಿಳಿದು ಕೊಡು. ನಾನಂತೂ ಭಿಕಾರಿ. ಮತ್ತೆ ನನ್ನ ಕಡೆಗೇಕೀ ಪ್ರಸಂಗ' ಎಂದು ಹೇಳಿಬಿಡುವೆ ಎಂಬದೊಂದು ತರದ ನಿರ್ಣಯಕ್ಕೆ ಬರುವಾಗ, ತನ್ನ ಮಾತಿಗೆ ಮರುಮಾತು ಬಾರದುದನ್ನು ಕಂಡು ಆ ತಾಯಿ ಮಾತು ಮುಂದರಿಸಿದರು. – 'ಚೆನ್ನಾಗಿದ್ದಾಳೆ ಹುಡುಗಿ, ಈ ವರ್ಷ ಮ್ಯಾಟ್ರಿಕ್ಕಿಗೆ ಕೂತಿದ್ದಾಳೆ, ವರದಕ್ಷಿಣೆಯೂ ಕೊಡುವ'! 'ಯಾರಪ್ಪ ಈ ಸಿಂಗಾಡಿ' ಎಂದು ಅವರ ಸಮೀಪದ ಬಂಧುಗಳಲ್ಲಿ ಇಂಥವಳೊಬ್ಬಳನ್ನು ಕಾಣ ಬಯಸಿದೆ. ಯಾರೂ ತಿಳಿವಿಗೆ ಬರಲಿಲ್ಲ. ಅವರಿಗಂತೂ ಮಕ್ಕಳಿಲ್ಲ. ಅವರ ತಂಗಿಯೊಬ್ಬಳು ಮಾತ್ರ ನನ್ನ ಮನಸ್ಸಿನಲ್ಲಿ ಮನೆಮಾಡಿಕೊಂಡಿದ್ದಳು. ಪರೀಕ್ಷೆಗೆ ಅವಳೂ ಕುಳಿತಿದ್ದಳು. ಮದುವೆಗೆ ಬಳೆದಿದ್ದಳು, ಚೆಲುವೆ. ಅವಳನ್ನು ಮೊದಲು ಕಂಡಾಗ ಏಕೋ ಅದೊಂದು ತರವಾಗಿ ನನ್ನೊಲ ಅವಳ ಕಡೆಗೆ ಹರಿದಿತ್ತು. ನನ್ನ ಆಸೆಯೂ ಆಶಯವೂ ಕೂಡಿದ್ದುವು. ಆದರೆ ಬಾಳು ನಿರಾಶೆಯ ಪ್ರತಿಫಲವನ್ನೇ ಉದ್ದೇಶಿಸಿತ್ತಾದರಿಂದ ನಾನು ನಿರಾಶಾವಾದಿಯಾಗಿ ಬೆಳೆದಿದ್ದೆ. ಹಾಗಾಗಿ ಮರವೆ ನನಗೊಂದು ತರದ ಶಾಂತಿಯನ್ನೀಯುತಿತ್ತು. ನೋವು ವಾಸಿಯಾಗುವುದು ಈ ಮರವೆಯಿಂದಲೇ ತಾನೆ? ಹಾಗೇ ಆಗದ ಹೋಗದ ವಿಚಾರಗಳನ್ನು ಕಟ್ಟಿಕೊಂಡು ಕನಲುವುದರ ಕಡೆಗೂ ಉದಾಸೀನವೇ ಮೈತಳೆದಿತ್ತು. ಅದರಿಂದ ಅವಳ ನೆನಪು ಆದರೂ ನಾನದನ್ನು ಮುಚ್ಚಿಡುತಿದ್ದೆ.

ತಮಾಷೆಗಾಗಿ ಎನ್ನಲಿ, ಸಹಜವಾಗಿರಲಿ, ಏನೇ ಆಗಲೊಲ್ಲದೇಕೆ? ವಿಚಾರವು ಸಮ್ಮತಿಯಾಗುವುದಿಲ್ಲವಷ್ಟೆ, ಎಂದೇ 'ಯಾರು' ಎಂದು ಕೇಳಿದೆ. ಆಶೆಯು ವಸ್ತುವಿರಲಿ, ನಿರಾಶೆಯೇ ಬೇರು ಬಿಟ್ಟಿರಲಿ ತಿಳಕೊಳ್ಳುವ ಉತ್ಸುಕತೆ ಸಹಜವೇ. ಆಗದೇ ಹೋಗಲೊಲ್ಲವೇಕೆ! ಗೊತ್ತಿಲ್ಲದೆ ಮತ್ತೆ 'ಹಾಗಾಯಿತೇ' ಎಂದು ಕೊಳ್ಳುವುದು ಸರಿಯಲ್ಲ. ಉದ್ದೇಶ ಪೂರ್ವಕ ಅವರು ಆ ಮಾತು ತೆಗೆದಿದ್ದರೂ ನನಗದು ವಿಶ್ವಸನೀಯವಾಗಿ ಕಾಣಲಿಲ್ಲ. ಆದರೂ ಯಾರು ಎಂದು ತಿಳಕೊಳ್ಳುವ ಉತ್ಸಾಹ ತೋರಿದಾಗ ಅವರಿಗೂ ಆಸೆಯಾಗಿರಬೇಕು. ಕತೆಯನ್ನೇ ಬಿಚ್ಚಿ ಹೇಳಿದರು. ಅದವರ ತಂಗಿಯ ಕುರಿತು. ನನ್ನನ್ನು ನಾನೇ

ನಂಬದಾದೆ! ಆದರೆ, ಕಾರ್ಮೋಡಗಳ ಕಗ್ಗತ್ತಲೆಯುಲ್ಲೂ ಮಿಂಚಿನ ಬೆಳಕು ಚಿಮ್ಮಿ ಕ್ಷಣಕಾಲ ಬೆಳಗುವುದಿದೆಯಲ್ಲವೆ. ಹಾಗೆನ್ನಿಸಿತು ನನಗೆ. ಬಹುಶಃ ಇದು ಬಾಳಿನ ಬೆಳಕನ್ನು ನೀಡುವ ಚುಕ್ಕಿಯೇನೋ ಎಂದು ಕೊಂಡೆ! ಅವರ ಕಡೆಗ ದೊಂದು ತರದ ಆದರ ಭಾವ ತನ್ನಿಂದ ತಾನೇ ಬೆಳೆದುಕೊಂಡಿತ್ತು. ಅದಕ್ಕೆ ಮುಖ್ಯವಾಗಿ ಕಾರಣಗಳೆರಡು. ನಾವೆಲ್ಲ ಜೀವನಕ್ಕಾಗಿ ಇಲ್ಲಿಗೆ ಬಂದವರು. ಒಂದೇ ಕಡೆಯುವರಾದುದರಿಂದ ಅದೊಂದು ತರದ ಆತ್ಮೀಯತೆ, ಮತ್ತೊಂದು ನನ್ನ ಕಡೆಗವರು ತೋರುತಿದ್ದ ವಾತ್ಸಲ್ಯ. ಅವರನ್ನು ಅದೊಂದು ಪೂಜ್ಯತೆಯ ಮಟ್ಟದಲ್ಲಿಟ್ಟು ಅವರು ನಮ್ಮವರು ಎಂದು ಅಭಿಮಾನದಿಂದ ಕಾಣುತಿದ್ದೆ. ಪರಿಚಯು ಆ ಮಾನಸಿಕ ಸಂಬಂಧಕ್ಕೊಂದು ತರದ ಒಪ್ಪವಿಟ್ಟಿತ್ತು. ಹಾಗಾಗಿ ನನ್ನ ಮದುವೆಯ ವಿಷಯದಲ್ಲಿ ಅವರು ಅಷ್ಟೊಂದು ಆಸ್ಥೆವಹಿಸಿದುದರಲ್ಲಿ ಆಶ್ಚರ್ಯವಿಲ್ಲ. ಮತ್ತದು ಅವರ ತಂಗಿಯ ಕುರಿತಾದುದರಿಂದ ನಂಟಸ್ಥಿಕೆಯ ಕಡೆಗವರ ಒಲಹರಿದುದರಲ್ಲಿ ಸೋಜಿಗವೇನು? ನಾನು ಆ ಹೆಣ್ಣಿಗೆ ಸೋತಿದ್ದೆ. ನೊಬಗಿನ ಕಣಿಯಾಗಿ ಅವಳು ನನ್ನ ಕಣ್ಣಿಗೆ ಕಂಡಿದ್ದಳು. ಸೌಂದರ್ಯೋ ಪಾಸಕನಾಗಿ ದಿಟ್ಟಿಸಿದ್ದೆ. ಎಂತಹ ಪ್ರಕೃತಿಸಿದ್ಧವಾದ ಸಹಜ ಸ್ವರೂಪ! ಸೋಗಿನ ಕೈವಾಡವಿರದ್ದರಿಂದ ಪ್ರಕೃತಿಯ ಉಪಾಸಕನಿಗೆ ಅದೊಂದು ತರದ ಹಬ್ಬವೇ! ತಿಳಿಮನಸ್ಸಿನ ಅವಳ ನಡೆನುಡಿಗಳ ಅದೊಂದು ಮೆರುಗು ಮಾರು ಕೊಂಡಿತ್ತು ಎಂದಾದ ಮೇಲೆ ಕನಲಿದ್ದೆ ಆ ಕನಸು ಕಂಡಾಗಲೇ ತೃಪ್ತಿ. ಅಷ್ಟರಲ್ಲೇ ಮುಗಿದಿತ್ತು ಆ ಕಾಂಡ. ಈಗದು ಈ ಸ್ಥಿತಿಗೆ ಬಂದಾಗ ಅದೆಷ್ಟು ಸುಖವೆನ್ನಿಸಿರಬೇಡ! ಆದರೆ ಆ ಹಂಬಲದ ಆಸೆ ನನ್ನ ವಸ್ತು ಸ್ಥಿತಿಯನ್ನು ಬಚ್ಚಿಡಲೆಡೆಗೊಡಲಿಲ್ಲ. ಕಾರಣ ಅವರ ಮೇಲಣ ಅಭಿಮಾನ, ಮತ್ತೊಂದು ಆ ಮೆಚ್ಚುಗೆಯ ವಸ್ತುವನ್ನು ಹಾಳುಗೆಡೆಯಲು ಮನಸ್ಸಾಗದುದು. ಹಾಗಾಗಿ ಮನಸ್ಸನ್ನು ತಡೆಹಿಡಿದು ನನ್ನನ್ನು ಚಿತ್ರಿಸಿ ತೋರಿಸಿದೆ. ಅವರದನ್ನ ಬಲ್ಲವ ರಾಗಿದ್ದರೂ, ನಾನೇ ಎಂದಾಗ ನನ್ನ ತೆರೆ ಮನಸ್ಸು ಅವರಿಗೂ ತುಂಬ ಆನಂದ ವನ್ನಿತ್ತಿತು. ತಿಳಿದೂ, ತಿಳಿದೂ ಅದನ್ನೇ ಬಯುಸುವರಾದರೆ ನಾನಾದರೂ ಒಲ್ಲೆನೆನ್ನಬೇಕೇಕೆ? 'ಹಾಗೆ ನಿಮ್ಮಾಶಯುವಿದ್ದರೆ ಆಗಲಿ, ಆದರೆ ಅವಳನ್ನು ಕೇಳಬೇಕು' ಎಂದೆ. ಅವಕ್ಕನುವುಮಾಡಿ ಕೊಟ್ಟು ಅವರು ಹೊರಹೋದರು.

ಎರಡನೆ ಬಾರಿ ಚಹಾ ತಯಾರಿಸ ಹೇಳಿದ ಗೂಢ ಅವಳಿಗೆ ತಿಳಿದ್ದಿಲ್ಲ ವೇನೊ! ಈ ಮಾತುಕತೆಯಾಗುವಾಗ ಅವಳು ಒಳಗಿದ್ದಳು. ಎರಡು ಕಪ್ಪು ಗಳಲ್ಲಿ ಚಹಾ ಹಿಡಿದು ಹೊರಬಂದಳು. ನಾನೊಬ್ಬನೇ ಕುಳಿತಿದ್ದುದನ್ನು

ಕಂಡು, ಚಹಾ ಅಲ್ಲೇ ಮುಂದಿಟ್ಟು ಒಳಗೋಡಿದಳು. ಅಲ್ಲಿ ಅಕ್ಕನಿಲ್ಲದಾಗ 'ಎಲ್ಲಿ?' ಎಂದು ಕೇಳುತ್ತ ಹೊರ ಬಂದಳು. ಮತ್ತೆ ನಿರ್ವಾಹವಿಲ್ಲದೆ ಅಲ್ಲೇ ಅಡ್ಡ ಕುಳಿತುಕೊಂಡಳು. ಅವಳಾಗಿ ಮಾತು ತೆಗೆಯ ಬೇಕೆಂದು ನಾನ ದೊಂದು ಗೂಢ ಆಲೋಚನೆಯಲ್ಲಿ ಮಗ್ನನಾಗಿರುವವನಂತೆ ಕುಳಿತಿದ್ದೆ. ನಾಲ್ಕಾರು ನಿಮಿಷಗಳ ಬಳಿಕ 'ಚಹಾ ಆರಿ ಹೋಗುತ್ತದೆ' ಎಂದವಳು ಎಚ್ಚರಿಸಿದಳು. 'ಆಂ' ಎಂದು ಭಾವಲೋಕದಿಂದ ಕೆಳಗಿಳಿದೆ. 'ಕುಡಿಯಿ ರಲ್ಲ, ಆರಿದರೆ ಅದು ಚೆನ್ನಾಗಿರುವುದಿಲ್ಲ' ಎಂದವಳು ಮತ್ತೆ ನುಡಿದಳು. 'ಇನ್ನೊಬ್ಬರ ಮನೆಯಲ್ಲಿ ನನಗೆಂದು ಕೊಡದ ವಸ್ತುವನ್ನು ನಾನಾಗಿ ಕೈಯಿಕ್ಕಿ ಹೇಗೆ ತೆಗೆದುಕೊಳ್ಳಲಿ?' ಕೇಳಿದೆ ನಾನು, ಮುಗುಳು ನಗುತ್ತ.

'ಅದು ನಿಮಗಾಗಿ ಇಟ್ಟದು'

'ಕೈಗೆ ಕೊಟ್ಟರೇ ಕೊಳ್ಳುವ ಅಭ್ಯಾಸ ನನ್ನದು. ಇಟ್ಟಲ್ಲಿಂದ ತೆಗೆದು ಕೊಳ್ಳುವುದು ಶಿಷ್ಟಾಚಾರವಲ್ಲ' ಎಂದೆ ಅವಳ ಕಡೆ ನೋಡುತ್ತ.

'ಹಾಽಗೋಽ' ಎಂದು ನಗುತ್ತ ಒಂದು ಕಪ್ಪನ್ನೆತ್ತಿ ಕೈಗಿತ್ತಳವಳು. 'ನೀನು' ಕೇಳಿದೆ ನಾನು. ಮತ್ತೊಂದು ಕಪ್ಪಿನಲ್ಲಿದ್ದ ಚಹಾ ಹಾಗೇ ಮುಚ್ಚಿಡ ಲಾಗಿತ್ತು.

'ಸ್ವಲ್ಪ ಮೊದಲು ಕುಡಿದಿದ್ದೇನೆ'

'ನಾನೂ ಸ್ವಲ್ಪ ಮೊದಲು ಕುಡಿದಿದ್ದೇನೆ' ಎಂದು ಕಪ್ಪನ್ನು ಕೆಳಗಿರಿ ಸಿದೆ! ಇದೆಂತಹ ಪ್ರಸಂಗವಪ್ಪ ಎನ್ನಿಸಿರಬೇಕು ಅವಳಿಗೆ. ಹಾಗೊಂದು ಸನ್ನಿವೇಶ ಒದಗಿ ಬಂದುದು ಇದೇ ಮೊದಲು. ಮೂರು ನಾಲ್ಕು ವರುಷ ಗಳಿಂದ ಪರಿಚಯವಿದ್ದರೂ ಕಂಡಾಗೊಮ್ಮೊಮ್ಮೆ ನಗೆಯಲ್ಲೇ ನುಡಿದುದಲ್ಲದೆ ಮಾತಿಗೆ ಆಸ್ಪದವಿರಲಿಲ್ಲ. ಹಾಗಾಗಿ ತುಸು ಲಜ್ಜೆಯೂ ಮೂಡಿತ್ತು ಅವಳ ಮೊಗದಲ್ಲಿ. ನನಗಿತ್ತ ಚಹಾ ಅವಳಿಗೆ ಕೊಟ್ಟೆ. ಮುಚ್ಚಿಟ್ಟುದನ್ನು ನನ ಗಿತ್ತಳವಳು. ಮಾತು ಮುಂದರಿಯಿತು. 'ಚಹಾ ಮಾಡಿದುದು ಯಾರು?' ಕೇಳಿದೆ ನಾನು, ಅವಳೇ ಎಂದು ಗೊತ್ತಿದ್ದರೂ.

'ಮತ್ತಾರು ನಾನೇ.'

'ಛೇ! ಒಂದು ಚಹಾ ಸಹ ಮಾಡಲಿಕ್ಕೆ ಬರುವುದಿಲ್ಲ. ಈಗಿನ ಕಾಲದ ಹುಡುಗಿಯರು ಎಂದರೆ.....'—ನಾನು ಉದ್ಗಾರ ತೆಗೆದೆ. ಇಂಥ ದೊಂದು ಕೆಣಕುವ ಮಾತೆಂದರೆ ಸ್ವಾಭಿಮಾನಿಯಾದ ಯಾವ ಹೆಂಗಸಾದರೂ ರೇಗಿಗೇಳುವುದು ಸಹಜವೇ! ಅವಳೇನೂ ಹೊರತಾಗಿ ಉಳಿಯಲಿಲ್ಲ.

'ನೀವೇನು ಗಂಡುಮಕ್ಕಳು ಮಹಾ! ಗಂಟು ಹಾಕುತ್ತೀರಿ? ಇನ್ನೊಬ್ಬರ ನಕಲಿ ಮಾಡುವುದೆಂದರೆ ಸದಾ ಒಂದು ಮೇಲುಗೈ!'

ಅದೇ ಮಾತಿಗೆ ಮಾತು ಸೇರಿಸಿ ಮುಂದರಿಯಲು ನಾನು ಸಿದ್ಧನಿರಲಿಲ್ಲ. ಹುಚ್ಚು ಹುಡುಗಿ ಸಿಟ್ಟಾದಳೋ ಏನೊ! ಅವಳಿಗಾದರೂ ಏನು ಗೊತ್ತು, ಪ್ರಸಂಗ ಪ್ರಣಯ ಪಥಕ್ಕೆ ಬಂದಿದೆ ಎಂದು.

'ನನಗೊಂದು ಆಸೆಯಿತ್ತು. ಪ್ರಪಂಚದಲ್ಲಿ ನೀನಾದರೂ ಒಬ್ಬ ಯೋಗ್ಯ ಹುಡುಗಿ ಇದ್ದೀ ಎಂದು' ಎಂದು ಮುಖವೆತ್ತಿ ಅವಳ ಕಡೆಗೆ ನೋಡಿದೆ. ಹುಸಿ ಮುನಿಸಿನ ನಗೆ ಮುಖದಿಂದ ಅವಳೂ ಮೊಗವೆತ್ತಿದಳು. ಎಲ್ಲ ಬಿಟ್ಟು ವಾದ ತನ್ನ ಕುರಿತೇ ಬಂದುದರಿಂದ ನಾಚುಗೆಯಿಂದ ಮುಖವೆಲ್ಲ ಕೆಂಪಾಗಿತ್ತು. ಈಗೇನು ಬಂತು-ಅಂತಹ ಕುಂದು? ಎಂದು ಕೇಳುವಂತಿದ್ದುವು ಅವಳ ಕಣ್ಣುಗಳು. 'ನೀನು ನನ್ನ ಹೆಂಡತಿಯಾಗಬೇಕೆಂದು ಕೂಡ ಹಂಬಲಿಸಿಕೊಂಡಿದ್ದೆ' ಎಂದಾಗ ಎಂದೂ ಬಾಯ್ಬಿಡದ ಈ ಪ್ರಾಣಿ ಇಷ್ಟೊಂದು ಉದ್ಧಟನಾಗಿ ಹುಚ್ಚು ಹುಚ್ಚು ಮಾತಾಡ ತೊಡಗಿದನಲ್ಲ ಎಂದು ಅವಳು ಸೋಜಿಗಗೊಂಡಿರಬೇಕು. ನಾಚಿಕೆಯಿಂದ ಮತ್ತೆ ಅಲ್ಲಿ ಕುಳ್ಳಿರುವುದು ಸಾಧ್ಯವಿಲ್ಲ ಎಂದುಕೊಂಡಿರಬೇಕು. ಎದ್ದು ಒಳನಡೆವಾಗ 'ಕುಳ್ಳಿರು' ಎಂದೆ. ಅಬ್ಬ ಏನು ಗಡಸುತನ ಆ ದನಿಯಲ್ಲಿ! ಎಷ್ಟೊಂದು ಅಧಿಕಾರ!! ನಗೆಯನ್ನಡಗಿಸಿ, ಸಿಟ್ಟಿನ ಛಾಯೆಯನ್ನು ಹೊತ್ತಿಸಿ ಅವಳು ಕುಳಿತುಕೊಂಡಳು. 'ಆದರೆ ಒಂದು ಚಹಾ ಸಹಾ ಮಾಡಲು ಬರುವುದಿಲ್ಲವೆಂದರೆ ಮತ್ತೆ ನಿನ್ನನ್ನು ಮದುವೆಮಾಡಿಕೊಂಡು ನಾನೇನು ಮಾಡಲಿ? ಅಡುಗೆ ಮನೆಯ ಅಧಿಕಾರ ವಹಿಸಿಕೊಳ್ಳಲೆ?' ಎಂದು ಕೇಳಿದೆ. ಆಗ ಮಾತ್ರ ನಗೆ ತಡೆಯಲಾಗಲಿಲ್ಲ ನನಗೆ. ನಕ್ಕೂ ಬಿಟ್ಟೆ. ಉರಿವ ಬೆಂಕಿಗೆ ತುಪ್ಪ ಹೊಯ್ದಂತಾಯಿತು. ಕಣ್ಣಲ್ಲಿ ಒಂದೆರಡು ಹನಿ ನೀರು ಕೂಡ ಕೂಡಿದುವು.

'ಬೇಡ ನೀವು ನನ್ನ ಮದುವೆಯಾಗೋದು' ಎಂದು ಹುಬ್ಬುಗಂಟಿಕ್ಕಿಕೊಂಡಳು. 'ನಾನಾದರೂ ಎಲ್ಲಿ ನಿನ್ನ ಮದುವೆಯಾಗ್ತೇನೆ? ಒಂದು ರೂಪೋ, ನಡೆಯೋ, ನುಡಿಯೋ? ಅಲ್ಲ, ಮನೆ ಕೆಲಸವನ್ನಾದರೂ ಅಷ್ಟು ಮಾಡೀಯ ಎಂದುಕೊಂಡರೆ ಅದೂ ಸೊನ್ನೆಯೆ! ನಿನ್ನನ್ನ ಕಟ್ಟಿಕೊಂಡು ತಾಳ ಹೊಡೀಲೇನು?' ಎಂದುಬಿಟ್ಟೆ ಒಂದೇ ಉಸಿರಿನಲ್ಲಿ. ಇಂಥ ಒಂದು ಸನ್ನಿವೇಶದ ಕಲ್ಪನೆಗಿಂತ ಸಹಜಕತೆಯ ಚಿತ್ರವು ಕಣ್ಣಮುಂದೆ ಹರಿದಾಗ ಚೆನ್ನಾಗಿ ಒಪ್ಪೀತು. ಆಕೆ ಕಣ್ಣೀರು ಕರೆಯುತೊಡಗಿದ್ದಳು. ನನಗೂ ಅವಳನ್ನು ಕೆಣಕಿ ಆ ಸೊಬಗು

ನೋಡುವುದರಲ್ಲೇ ಸವಿ ಕಂಡಿತ್ತು. ಅದೆಷ್ಟು ಚೆನ್ನಾಗಿ ಒಪ್ಪುತ್ತಿದ್ದಳು ಅವಳು ಆಗ!

ಹೊರ ಹೋದ ಅವರು ಆಗ ಒಳ ಬಂದರು. ಅವರನ್ನು ಕಂಡಾಗ ಅವಳ ಮುಖದಲ್ಲಿ ಅದೊಂದು ಗೆಲುವು ಕಂಡಿತು. ಬಹುಶಃ ನನ್ನನ್ನು ಅಂಜಿಸುವ ಉದ್ದೇಶವಿದ್ದಿರಬೇಕು. ‘ತಡೀ ನಿನಗೆ, ಅಕ್ಕನಿಗೆ ಹೇಳಿ ಇನ್ನು ಇತ್ತ ಬರದಂತ ಮಾಡುತ್ತೇನೆ, ಹುಚ್ಚು ಹುಡುಗ! ನಿನು ನಿನ್ನ ಸೊಕ್ಕು’ ಎಂಬ ಭಾವವನ್ನು ಬೀರುತಿತ್ತು ಆ ನೋಗ. ಅವರನ್ನು ಕಂಡಾಗ ನಾನೇ ಮಾತಿಗೆ ಮುಂದಾದೆ. ‘ನೋಡಿ ತಾಯಿ, ಒಂದು ಲೋಟ ನೀರು ಕೊಡು ಎಂದು ನಿಮ್ಮ ತಂಗಿಯನ್ನು ಕೇಳಿದರೆ ಅರ್ಧ ಗಂಟೆಯಿಂದ ನನ್ನ ಗಂಟಲು ಒಣಗಿಸಿಯೇ ಇಟ್ಟಿದ್ದಾಳೆ, ಇಂಥವಳನ್ನ ಮದುವೆಯಾದರೆ ನನ್ನನ್ನ ಉಪವಾಸವಿಟ್ಟೇ ಕೊಂದಾಳು’ ಎಂದು ದೂರಿತ್ತೆ. ಅವರಿಗೆ ಗೊತ್ತು, ಇದು ಏನು ಎಂದು. ಆದರೂ ‘ಹೌದೊ’ ಎಂದು ಗದರಿಸಿದರು ಅವಳನ್ನು. ಎಲ! ಎಂತಹ ಅವಮಾನ. ಹುಣ್ಣಿನಮೇಲೆ ಬರೆಕೊಟ್ಟಂತಾಯಿತು. ಒಳಗೋಡಿದಳು. ಅವರೂ ಒಳನಡೆದಾಗ, ದೊಡ್ಡದೊಂದು ಕೊಡತುಂಬ ನೀರು ತಂದು ಇದಿರಿಗಿಟ್ಟಳು. ‘ಕೊಡದಿಂದೆತ್ತಿ ಕುಡಿಯಲೇನು?’ ತುಸು ಗಂಭೀರನಾಗಿ ಕೇಳಿದೆ ನಾನು. ಲೋಟ ಬಂದಿತು ‘ಬರೀ ನೀರು ಕುಡಿಯಲೇನು?’ ರೇಗಿಗೆದ್ದೆ ನಾನು. ಅವಳಿಗೆ ಅದೇ ಸಂದರ್ಭವೆನ್ನಿಸಿರಬೇಕು. ಪ್ರಸಂಗದ ತಿಳಿವೂ ಆಗಿರಬೇಕು. ಅವಳನ್ನು ನನಗೆ ಕೊಟ್ಟು ವಿವಾಹ ನಡೆಸುವ ಮಾತುಕತೆ ನಡೆದಿದೆಯೆಂದೂ ತಿಳಿದಿರಬೇಕು. ‘ಬಾಬೂ ಸಾಹೇಬ, ಮನೆಯಲ್ಲಿರುವ ಸಕ್ಕರೇನ್ನ ನೀರು ಕುಡಿಯಲು ಕೊಟ್ಟರೆ ಗೊತ್ತಿಲ್ವೇನು ತಮಗೆ ಸಕ್ಕರೆಗೆ ರೇಶನ್ನಿದೆ ಅಂತ’ ಎಂದು ಅಣಕಿಸಿದಳು. ನೀರಡಿಕೆಯಾಗಿದೆ ಎಂದು ನಟಿಸಿದ ಪ್ರಾಯಶ್ಚಿತ್ತಕ್ಕೆ ಒಂದು ಗುಟುಕು ನೀರು ಕುಡಿದೆ. ಒಳಗಿಂದ ಈ ನೋಟಗಳನ್ನೆಲ್ಲ ನೋಡುತ್ತಿದ್ದ ಅಕ್ಕ, ‘ಬೇಳೆ ಬೇಯಿತು’ ಎಂದುಕೊಂಡಿರಬೇಕು.

ಹೊತ್ತಾಯಿತು ಎಂದು ಹೊರಟೆ. ಊಟ ಮುಗಿಸಿ ಹೋಗಬಹುದು ಎಂದವರು ಒತ್ತಾಯಿಸಿದರು. ಹೋಟೆಲ ಕೂಳು ತಿಂದು ಬೇಸತ್ತವನೊಬ್ಬನಿಗೆ ಮನೆಗೆ ಊಟಕ್ಕೆ ಬಾ ಎಂದರೆ ಅದೆಷ್ಟು ಸಂತಸವಾಗದು? ಅದೂ ಎಂಟಾಣೆ ಉಳಿತಾಯವಲ್ಲವೆ! ಈಗಂತೂ ಹೊಸತಾಗಿ ನೆಟ್ಟ ನೆಂಟಸ್ಥಿಕೆ! ಮತ್ತೆ ನಾನು ದಾಕ್ಷಿಣ್ಯದಿಂದ ದೂರ ‘ಹೂಂ’ ಎಂದುಕೊಂಡೆ. ಸ್ನಾನವಾಗಬೇಕಲ್ಲ. ಅವಳು ನೀರೆರೆದು ಕೊಟ್ಟಳು ಸ್ನಾನಮಾಡುತ್ತಿದ್ದಾಗ ಒಳಗಿನ

ಗುಣುಗುಣು ಕೇಳಿಬರುತ್ತಿತ್ತು. ಬಹುಶಃ ನಡೆಯುವರ ನಿವೇದನೆಯಿರಬೇಕು. ಸ್ನಾನ ಮುಗಿಸಿ ಬರುವಾಗ ಮನೆಯ ಯಜಮಾನರೂ ಬಂದರು. ಊಟಕ್ಕೆ ಕುಳಿತಾಗ ಅದೇ ಮಾತು ಮತ್ತೆ ಬಂತು. ನಾನದನ್ನು ಬಿಚ್ಚಿಹೇಳಿದೆ. 'ಸಿಗುವುದು ನೂರಇಪ್ಪತ್ತೈದು ಸಂಬಳ, ಬೇರೆ ಇಲ್ಲ, ಇನ್ನೂ ಓದು ಮುಗಿದಿಲ್ಲ' ಎಂದೆ. 'ನೋಡಪ್ಪ ನಿನ್ನ ಪ್ರಾಯದವರೆಲ್ಲ ಮೂರು ನಾಲ್ಕು ಮಕ್ಕಳ ತಂದೆ ಯಾಗಿದ್ದಾರೆ' ಎಂದು ಅಣಕಿಸಿ, 'ಒಂದು ಸಂಸಾರ ಎಂತ ಕಟ್ಟಿಕೊಂಡ ಮೇಲೆ ಎಲ್ಲಾ ಸೇರಿಹೋಗುತ್ತದೆ' ಎಂದು ಉಪದೇಶಿಸಿದರು. ಹಾಗೇ ಅದೇ ನಿಶ್ಚಯ ವಾಯಿತು. ಅವಳು ಈ ಮಾತುಗಳನ್ನೆಲ್ಲ ಕೇಳುತ್ತ ಅಲ್ಲೇ ಇದಿರು ಊಟಕ್ಕೆ ಕುಳಿತ್ತಿದ್ದಳು. ಪಾಪ, ಸರಿ ಉಂಡಿದ್ದಳೋ ಇಲ್ಲವೋ!

ಯಜಮಾನರು ತಮ್ಮ ಕೆಲಸದ ಮೇಲೆ ಹೊರನಡೆದರು. ಯಜಮಾನಿ ತಿಯರೂ ಹಾಗೇ ಅಡ್ಡಾದರು. ಅವಳು ಬಾನುಲಿಯನ್ನು ತಿರುಗಿಸಿಟ್ಟು ಏನೋ ಮಾಸಿಕ ಮೋರೆಗೆ ಅಡ್ಡವಾಗಿ ಹಿಡಿದು ಅಡ್ಡಾಗಿದ್ದಳು. ಬಾನುಲಿಯಲ್ಲಿ ಡಾ। ಕೊಟ್ನಿಸದ ಪ್ಲೇಟು ಇಟ್ಟಿದ್ದರು. 'ಜಿಂದಗಿ, ಜಿಂದಗಿ, ಜಿಂದಗಿss . . .' ಎಂದಹಾಗೆ ಸಿನೇಮಕ್ಕೆ ಹೋಗೋಣ ಎನ್ನಿಸಿತು. ಪಾಥೆಯಲ್ಲಿ ರಾಜಕಮಲ ದವರ ಡಾ। ಕೊಟ್ನಿಸ್ ನಡೆದಿತ್ತು. ಸಿನೇಮಕ್ಕೆ ಹೋಗದೆ ಬಹಳ ದಿನಗಳಾ ದುದರಿಂದ ಹೋಗೋಣ ಎನ್ನಿಸಿತು. ಶಾಂತಾರಾಮರ ಈ ಅಮರಚಿತ್ರದ ಕತೆ ಕೇಳಿ, ಎಷ್ಟೋ ಮಂದಿ ಗಂಟೆಗಟ್ಟಲೆ ಸಾಲಿನಲ್ಲಿ ನಿಂತಿರುತ್ತಿದ್ದರು ಟಿಕೇಟಿಗಾಗಿ ಹಾಗಾಗಿ ಟಿಕೇಟು ಸಿಗುವುದು ಕಷ್ಟ. ಅಂದಹಾಗೆ, ಜತೆಗೆ ಹೆಮ್ಮಕ್ಕಳಿದ್ದರೆ ಈ ಸಾಲಿನಲ್ಲಿ ನಿಲ್ಲದೆ ಟಿಕೇಟುಕೊಳ್ಳಬಹುದಲ್ಲ ಎಂದೆಣಿಸಿ ದಾಗ, ಅವಳನ್ನೇಕೆ ಕರೆದೊಯ್ಯಬಾರದು ಎಂಬ ಯೋಚನೆಯೂ ಹುಟ್ಟಿತು. ಯಾಕಾಗಲೊಲ್ಲದು ಎಂದು ಅವಳ ಬಳಿಗೆ ಸರಿದು, ಮುಖಕ್ಕೆ ಮುಚ್ಚಿ ಕೊಂಡಿದ್ದ ಪುಸ್ತಕವನ್ನು ಕಿತ್ತುಕೊಂಡೆ. 'ಇಸ್ಸೀ' ಎಂದವಳು ಮೂಗು ಮುರಿದಳು. 'ನಡೀ, ಸಿನೇಮಕ್ಕೆ ಹೋಗೋಣ' ಎಂದೆ. 'ಸುರುವಾಯ್ತಲ್ಲ ಈಗಲೇ ನಿಮ್ಮದು' ಎಂದು ರಾಗ ಎಳೆದಳು. 'ನೀನು ಬಂದರೆ ಟಿಕೇಟು ಸಿಗುತ್ತದೆ, ಇಲ್ಲವಾದರೆ ಸಾಲಿನಲ್ಲಿ ಟಿಕೇಟು ಸಿಗುವ ಸಂಭವ ಕಡಿಮೆ. ತುಂಬಾ ನುಗ್ಗಾಟವಿದೆ. ಮತ್ತೆ ಒಬ್ಬನೇ ಹೋಗುವುದೆಂದರೂ . . . . ಮಾತು ಮುಗಿಯಬೇಕಾದರೇ, 'ನಾನಂತೂ ಬರುವವಳಲ್ಲ, ಬೇಕಿದ್ದರೆ ಬೇರಾ ರನ್ನಾದರೂ ಕರೆದುಕೊಂಡು ಹೋಗಿ' ಎಂದಳವಳು. 'ಬೇರಾರನ್ನ? ನಿನ್ನ ಸವತೀನ್ನ!' ಎಂದಾಗ ಅಕ್ಕನೂ ನಕ್ಕರು ನಿದ್ದೆಯಲ್ಲೇ. ಹಾಗೇ ಹೊರಟೆವು.

ಡಾ। ಕೊಟ್ನಿಸರ ಅಮರಕತೆ ಇದಿರಿನ ಪರದೆಯ ಮೇಲೆ ಮೂಡಿ ಮುಂದರಿಯು ತ್ತಿದ್ದಂತೆ ನಮ್ಮ ನಾಳಿನ ಬಾಳಿನ ಮುನ್ನೋಟವೂ ಮನದ ಪರದೆಯ ಮೇಲೆ ಮೂಡಿ ಮಾಯವಾಗುತ್ತಿತ್ತು. ಮುಂದೆ ಕೆಲವು ದಿನಗಳ ಬಳಿಕ ಮದುವೆಯ ರಿಜಿಸ್ಟ್ರಾರ ಸುಬ್ಬರಾಯರು ತಮ್ಮ ದಾಖಲೆಯಲ್ಲಿ ಒಂದು ಸಂಖ್ಯೆ ಸೇರಿಸಿ ಕೊಂಡರು. ಸುದ್ದಿ ಹತ್ತಿದಾಗ ಗೆಳೆಯರೆಲ್ಲ 'ಪಾರ್ಟಿ ಪಾರ್ಟಿ' ಎಂದು ಕಿರು ಕುಳಕೊಡತೊಡಗಿದ್ದರೆ, ದೂರದಿಂದ ಗೆಳೆಯನೊಬ್ಬ ಬರೆದಿದ್ದ—'ಏನು ಜಿಪುಣನೋ ಮಹಾರಾಯ ನೀನು, ಕೊನೆಗೊಂದು ಒಣಆಮಂತ್ರಣವಾದರೂ ಬೇಡವೇ ?'

ಅದರ ನೆನಪಾದಾಗ ಇದಿರಿಗೆ ತೂಗು ಹಾಕಿದ್ದ ಕಾಗದಗಳ ಗೊಂಚೆ ಯನ್ನೆತ್ತಿಕೊಂಡು ಕೆದರುತ್ತ ಕುಳಿತೆ. ಅದೇ ಕಾರ್ಡು ಕೈಗೆ ಹತ್ತಿತು. 'ಇದೇನು ನಡೆದದೆ' ಎಂದು ಅವಳೂ ಬಂದಳು. 'ನನ್ನ ಸೆಕ್ರೆಟರಿ' ಎಂದು ನಾನು ಅಣಕಿಸುತಿದ್ದ ಪಟ್ಟಿಗಾರನ ಪತ್ರವದು ... 'ಆದರೂ ಚಿಂತೆಯಿಲ್ಲ, ಗಾಳ ಹಾಕಿದಲ್ಲಿ ಒಳ್ಳೇ ಬೇಟೆಯೇ ಬಿದ್ದಿತು' ಎಂದು ಅಭಿನಂದಿಸಿದ್ದ. 'ಇದ್ಯಾಕೆ ನೆನಪಾಯ್ತು' ಎಂದು ಕೇಳುತಿದ್ದಂತೆ ಇದಿರಿಗೆ ಹರಡಿದ್ದ ಕಾಗದ ಗಳ ಕಡೆಗೆ ಗಮನ ಹರಿದು, ಎತ್ತಿ ಓದತೊಡಗಿದಳವಳು. ಓದುತ್ತಿದ್ದಂತೇ ಅವಳ ಮುಖದಲ್ಲಿ ನಗೆಯೇ ಮಿನುಗುತಿತ್ತು. ಮುಗಿದ ನಂತರ, 'ಅಲ್ಲರೀ ಇದೇನು ಹುಚ್ಚಾಟ ನಡೆಸೀರಿ ನಿಮ್ಮದು, ಅದ್ಯಾವ ಸುಡುಗಾಡ ಪೇಪರಿನ ಸಂಪಾದಕ ನಿಮ್ಮ ಕತೀನ ಹಾಕ್ಯಾನೋ ನಾ ಕಾಣೆ' ಎಂದು ನಕ್ಕಳು. 'ಏಕೆ ಚೆನ್ನಾಗಿಲ್ಲವೆ?' ಕೇಳಿದೆ. ಮುಂಚಿನ ದಿನ ಪತ್ರಿಕೆಯಲ್ಲಿ ಬಂದಿದ್ದ, ಪ್ರಾಂತೀಯ ಪಂಚಾಯತಿಯಲ್ಲಿನ ಶ್ರೀಮತಿ ಲೀಲಾವತಿ ಮುನ್ಶಿಯವರ ಹೇಳಿಕೆ ಯನ್ನೇ ಗಟ್ಟಿಯಾಗಿ ಓದುತ್ತ, 'ನೀವು ಗಂಡಸರು, ಯೋಗ್ಯ ಗಂಡಂದಿರಾಗಲು ಬಯಸುವುದೂ ಇಲ್ಲ, ಪ್ರಯತ್ನಿಸುವುದೂ ಇಲ್ಲ. ಆದರೆ ನಿಮಗೆಲ್ಲ ಯೋಗ್ಯ ಹೆಂಡಂದಿರು ಬೇಕು' ಎಂದು ಅಣಕಿಸುತ್ತ ಒಳನಡೆದಳು. 'ಹೆಂಡಂದಿರು ಎಂದರೆ ಎಲ್ಲಿ? ಒಬ್ಬಳೊಳಗೇ ಸುಧಾರಿಸಿಕೊಳ್ಳಬೇಕೆಂದು ಕಾನೂನು ಮಾಡಿ ದ್ದೀರಲ್ಲ' ಎಂದು ನಾನೂ ನಕ್ಕೆ.

